# THE PILGRIM'S PROGRESS

## IN CANARESE

PART I

# ಪರದೇಶಿಯ ಪ್ರಯಾಣ

ಮೊದಲನೇ ಭಾಗ





MANGALORE
TED BY J. HUNZIKER, GERMAN MISSION PRESS
1861

THE

# PILGRIM'S PROGRESS

## FROM THIS WORLD

## TO THAT WHICH IS TO COME

DELIVERED

UNDER THE SIMILITUDE OF A DREAM

BY

**JOHN BUNYAN**



IN CANARESE

PART I

EDITED BY THE REV. B. RICE
FROM A TRANSLATION
BY REV. G. WEIGLE, AND REV. DR. MOEGLING

MANGALORE
PRINTED BY J. HUNZIKER, GERMAN MISSION PRESS
1861

ಯೋಹಾನ್ ಬುನ್ಯನ್

ಬರೆದ

# ಪರದೇಶಿಯ

# ಪ್ರಯಾಣ

ಮೊದಲನೇ ಭಾಗ





ಮಂಗಳೂರು

ಬಾಸ್ಲ್ ಪಟ್ಣದ ಸುವಾರ್ತಿಕ ಮಿಶನ್ ಪ್ರೆಸ್

೧೮೬೧ 

# THE PILGRIM'S PROGRESS.

# ದೇಶಾಂತ್ರಿಯ ಪ್ರಯಾಣ.

## 1. The Setting out.

## ೧. ಹೊರಡೋಣವು.

ನಾನು ಲೋಕವೆಂಬ ಅಡವಿಯಲ್ಲಿ ತಿರುಗಾಡುತ್ತಿರುವಾಗ, ಗವಿಯಿದ್ದ ಒಂದು ಸ್ಥಳಕ್ಕೆ ಬಂದು, ಮಲಗಿ, ನಿದ್ದೆ ಮಾಡಿ, ಒಂದು ಕನಸು ಕಂಡೆನು. ಆ ಕನಸಿನಲ್ಲಿ ಇಗೋ ಹರಕು ಬಟ್ಟೆಗಳನ್ನು ಹೊದ್ದ ಕೊಂಡ ಒಬ್ಬ ಮನುಷ್ಯನು ಕೈಯಲ್ಲಿ ಪುಸ್ತಕ ಹಿಡಿದು, ದೊಡ್ಡ ಹೊರೆ ಹೊತ್ತು ಕೊಂಡು, ತನ್ನ ಮನೆಗೆ ಬೆನ್ನು ಹಾಕಿ, ಒಂದು ಸ್ಥಳದಲ್ಲಿ ನಿಂತಿರುವದನ್ನು ನೋಡಿದೆನು. ನಾನು ದೃಷ್ಟಿಸಲಾಗಿ ಅವನು ಪುಸ್ತಕ ತೆರೆದು ಓದುವದನ್ನೂ, ಓದುವಾಗ ಅತ್ತು, ನಡುಗಿ, ಇನ್ನು ತಾಳಲಾರೆ, ಏನು ಮಾಡಲಿ? ಎಂದು ಕೂಗಿ ಗೋಳಾಡುವದನ್ನೂ, ಕಂಡೆನು.

ಈ ಪ್ರಕಾರ ವ್ಯಸನ ಪಡುವವನಾಗಿ ಅವಸ್ಥೆಯಿಂದ ಮನೆಗೆ ಬಂದು, ತನ್ನ ದುಖ್ಖವು ಹೆಂಡತಿ ಮಕ್ಕಳಿಗೆ ತಿಳಿಯ ಬಾರದೆಂದು ಕೈಲಾದ ಮಟ್ಟಿಗೂ ಸುಮ್ಮನೆ ಇದ್ದನು. ಆದರೆ ಅವಸ್ಥೆ ಹೆಚ್ಚಿದ್ದರಿಂದ ತಾಳಲಾರದೆ ಹೆಂಡತಿಗೂ ಮಕ್ಕಳಿಗೂ ತನ್ನ ವ್ಯಾಕುಲ ತಿಳಿ

ಸಿದನು. ನನ್ನ ಪ್ರಿಯಳೇ, ನನ್ನ ಮುದ್ದು ಮಕ್ಕಳೇ, ನನ್ನ ಮೇಲೆ
ಬಿದ್ದಿರುವ ಹೊರೆಯನ್ನು ತಾಳಲಾರೆನು. ಇನ್ನು ಆಕಾಶದಿಂದ ಬೀ
ಳುವ ಬೆಂಕಿಯಿಂದ ಈ ನಮ್ಮ ಪಟ್ಣವು ಸುಟ್ಟು ಹೋಗುವದೆಂದು
ನಿಶ್ಚಯವಾಗಿ ತಿಳಿದಿದ್ದೇನೆ. ಆದಕಾರಣ ನಾವು ತಪ್ಪಿ ಹೋಗುವ
ದಕ್ಕೆ ಈಗ ಕಾಣದ ಒಂದು ಮಾರ್ಗ ಶಿಕ್ಕದಿದ್ದರೆ ಈ ಭಯಂಕ
ರವಾದ ನಾಶನದಲ್ಲಿ ನಾನೂ, ಪ್ರಿಯಳಾದ ನೀನೂ, ಮುದ್ದು ಮಕ್ಕ
ಳಾದ ನೀವೂ, ಗತಿ ಇಲ್ಲದೆ ಕೆಟ್ಟು ಹೋಬೇವೆಂದು ಹೇಳಲಾರಂಭಿ
ಸಿದನು. ಈ ಮಾತುಗಳನ್ನು ಕೇಳಿ ಅವನ ನೆಂಟರು ಅವು ಸತ್ಯ
ವೆಂದು ನಂಬುವದರಿಂದಲ್ಲ, ಅವನಿಗೆ ಏನಾದರೂ ಮರುಳು ಹಿಡಿ
ಯಿತೆಂದು ನೆನಸುವದರಿಂದ ಬಹು ಆಶ್ಚರ್ಯ ಪಟ್ಟು, ನಿದ್ದೆ ಮಾ
ಡಿದರೆ ಗುಣವಾದೀತೆಂದು ನೆನಸಿ ಸಂಜೆಯಾದದರಿಂದ ಅವನನ್ನು
ಬೇಗ ಮಲಗಿಸಿದರು. ಆದರೆ ಅವನು ಹಗಲಿನಲ್ಲಿ ಆದ ಹಾಗೆಯೇ
ರಾತ್ರಿಯಲ್ಲಿಯೂ ವ್ಯಸನ ಪಟ್ಟು ನಿದ್ದೆ ಮಾಡದೆ ನಿಟ್ಟುಸುರಿನಿಂದ
ಲೂ ಕಣ್ಣೀರಿನಿಂದಲೂ ಹೊತ್ತು ಕಳದನು. ಬೆಳಿಗ್ಯೆ ಅವರು ಹ್ಯಾ
ಗುಂಟೆಂದು ಕೇಳಲು, ಅವನು ಮತ್ತೂ ಹೆಚ್ಚಾಯಿತೆಂದು ಅವರ
ಸಂಗಡ ಮಾತಾಡಲಾರಂಭಿಸುವಾಗ, ಅವರು, ಕಠಿಣವಾಗಿ ಬೆದರಿಸಿ,
ಅವನಿಗೆ ಕೋಪ ತೋರಿಸಿದರೆ, ಅವನ ರೋಗ ಹೋದೀತೆಂದು ನೆ
ನಸಿ, ಒಂದು ವೇಳೆ ಹಾಸ್ಯ ಮಾಡುತ್ತಾ, ಒಂದು ವೇಳೆ ಗದರಿ
ಸುತ್ತಾ, ಒಂದು ವೇಳೆ ಅಸಡ್ಡೆ ಮಾಡುತ್ತಾ ಇದ್ದರು. ಆದದರಿಂ
ದ ಅವನು ತನ್ನ ಕೊಠಡಿಗೆ ಹೋಗಿ ಅವರಿಗೋಸ್ಕರ ದುಖ್ಖ ಪಟ್ಟು
ಪ್ರಾರ್ಥಿಸುತ್ತಾ, ತಾನು ಬಿದ್ದ ಶ್ರಮೆಗೋಸ್ಕರ ಅಳುತ್ತಾ, ಹೊಲಗ
ಳಲ್ಲಿ ಒಂಟಿಯಾಗಿ ತಿರುಗಾಡಿ ಓದುತ್ತಾ ಪ್ರಾರ್ಥಿಸುತ್ತಾ ಕೆಲ
ವು ದಿನಗಳನ್ನು ಕಳದನು.

ಈಪ್ರಕಾರ ಅವನು ತನ್ನ ಬಳಿಕೆಯ ಹಾಗೆ ಹೊಲಗಳಲ್ಲಿ ತಿರು
ಗಾಡುತ್ತಾ, ಮನೋವ್ಯಾಕುಲ ಪಟ್ಟು ಪುಸ್ತಕವನ್ನು ಓದುವಾಗ,
ನನಗೆ ರಕ್ಷಣೆ ಆಗುವ ಹಾಗೆ ನಾನೇನು ಮಾಡಲಿ? ಎಂದು ಗೋ
ಳಾಡುತ್ತಾ ಕೂಗುವದನ್ನು ಕಂಡೆನು.

ಮತ್ತು ಅವನು ಓಡಲಿಕ್ಕಿರುವವನ ಹಾಗೆ ಈಚೆ ಆಚೆ ನೋ
ಡಿ ಯಾವ ಮಾರ್ಗದಿಂದ ಹೋಗ ಬೇಕೆಂದು ತಿಳಿಯದ ಕಾರಣ
ಸುಮ್ಮನೆ ನಿಂತಿರುವದನ್ನು ನೋಡಿದೆನು. ಮತ್ತು ನಾನು ದೃಷ್ಟಿಸು
ವಾಗ, ಸುವಾರ್ತಿಕನೆಂಬ ಒಬ್ಬ ಮನುಷ್ಯನು ಅವನ ಹತ್ತಿರ ಬಂ
ದು ನೀನು ಅಳುವದ್ಯಾಕೆ? ಎಂದು ಕೇಳುವದನ್ನು ಕಂಡೆನು. ಅ
ವನು—ಅಯ್ಯಾ, ನಾನು ಸಾಯಲಿಕ್ಕೂ ಸತ್ತ ಮೇಲೆ ನ್ಯಾಯತೀರ್ವಿ
ಕೆಗೆ ಬರಲಿಕ್ಕೂ ಅವಶ್ಯವಾಗಿದೆ ಎಂದು ನನ್ನ ಕೈಯಲ್ಲಿರುವ ಪು
ಸ್ತಕ ಓದಿ ತಿಳು ಕೊಳ್ಳುತ್ತೇನೆ. ಸಾಯಲೊಲ್ಲೆನು, ನ್ಯಾಯ ತಿರ್ವಿ
ಕೆಯಲ್ಲಿ ನಿಲ್ಲಲಾರೆನು, ಅಂದನು.

ಆಗ ಸುವಾರ್ತಿಕನು—ಈ ಜೀವದಲ್ಲಿ ಕಷ್ಟ ಬಹಳವಾಯಿ
ತೆಂದು ನೋಡಿ, ನೀನು ಯಾಕೆ ಸಾಯಲೊಲ್ಲೆ? ಅನ್ನಲು, ಅವನು,
ನನ್ನ ಬೆನ್ನಿನ ಮೇಲಿನ ಹೊರೆ ಸಮಾಧಿಗಿಂತ ಆಳವಾದ ಸ್ಥಳಕ್ಕೆ
ನನ್ನನ್ನು ಎಳೆಯುವದರಿಂದ ನಾನು ನರಕದಲ್ಲಿ ಬೀಳುವೆನೆಂಬ ಭ
ಯದಲ್ಲಿ ಇರ್ದೇನೆ. ಅಯ್ಯಾ, ನಾನು ಶೆರೆಗೆ ಹೋಗಲಿಕ್ಕೆ ಸಿದ್ಧವಾ
ಗದಿದ್ದರೆ ನ್ಯಾಯದ ಆಜ್ಞೆಯನ್ನೂ ತೀರ್ಪನ್ನೂ ತಾಳುವದು ಹ್ಯಾ
ಗೆ? ಎಂದು ಆಲೋಚನೆ ಮಾಡಿ ಅಳುತ್ತೇನಂದನು.

ಸುವಾರ್ತಿಕನು—ಹೀಗಿರಲಾಗಿ ನೀನು ಸುಮ್ಮನೆ ನಿಲ್ಲುವ
ದ್ಯಾಕೆ? ಅನ್ನಲು, ಅವನು ನಾನು ಎಲ್ಲಿ ಹೋಗ ಬೇಕೆಂದು ಅರಿಯೆ
ನಂದಾಗ, ಸುವಾರ್ತಿಕನು ಅವನಿಗೆ—ಬರುವ ಕೋಪದಿಂದ ತಪ್ಪಿಸಿ
ಕೋ ಎಂದು ಬರೆದ ಓಲೆ ಕೊಟ್ಟನು. ಅದನ್ನು ಓದಿದ ಮೇಲೆ
ಅವನು ಸುವಾರ್ತಿಕನನ್ನು ಅತಿಜಾಗ್ರತೆಯಿಂದ ನೋಡಿ, ನಾನು ಎಲ್ಲಿ
ಹೋಗಿ ತಪ್ಪಿಸಿ ಕೊಳ್ಳಲಿ? ಅಂದಾಗ, ಸುವಾರ್ತಿಕನು ಬಹಳ
ಅಗಲವಾದ ಹೊಲದ ಸ್ಥಳವನ್ನು ಬೆರಳಿನಿಂದ ತೋರಿಸಿ, ಅಗೋ
ಇಕ್ಕಟ್ಟಾದ ಬಾಗಲು ಕಂಡಿಯೋ? ಅನ್ನಲು, ಅವನು ಇಲ್ಲವಂದ
ನು. ಸುವಾರ್ತಿಕನು, ಅಗೋ ಅಲ್ಲಿ ಪ್ರಕಾಶವಾದ ಬೆಳಕನ್ನು ಕಾಣು
ವದಿಲ್ಲವೋ? ಅನ್ನಲಾಗಿ ಅವನು—ಕಂಡ ಹಾಗಿದೆ, ಅಂದನು. ಸು
ವಾರ್ತಿಕನು—ಆ ಬೆಳಕಿನ ಗುರಿ ನೋಡಿ, ಹಿಡಿದು, ನೆಟ್ಟಗೆ ನಡೆ

ದು ಹೋಗು, ಆಗ ಬಾಗಲು ನೋಡುವಿ, ಅದನ್ನು ತಟ್ಟಿದರೆ ಮಾಡ ತಕ್ಕದ್ದನ್ನು ನಿನಗೆ ತಿಳಿಸುವರು, ಅಂದನು.

---

## 2. Obstinate and Pliable.

## ೨. ಮೂರ್ಖನೂ ಚಂಚಲನೂ.

---

ತರುವಾಯ ಆ ಮನುಷ್ಯನು ಓಡಲಾರಂಭಿಸುವದನ್ನು ಕನಸಿನಲ್ಲಿ ಕಂಡೆನು. ಅವನು ಮನೆ ಬಾಗಲಿನಿಂದ ಸ್ವಲ್ಪ ದೂರ ಓಡಿದಾಗ ಹೆಂಡತಿ ಮಕ್ಕಳು ಅದನ್ನು ನೋಡಿ ತಿರುಗಿ ಬಾ ಎಂದು ಕೂಗಲಾಗಿ, ಅವನು ಕಿವಿಗಳಲ್ಲಿ ಬೆರಳಿಟ್ಟು ಜೀವವೇ! ಜೀವವೇ! ನಿತ್ಯಜೀವವೇ! ಎಂದು ಕೂಗುತ್ತಾ ಹಿಂದಗಡೆ ನೋಡದೆ ಆ ಬೈಲಿನ ಮಧ್ಯಕ್ಕೆ ಓಡಿ ಹೋದನು.

ಅವನು ಓಡುವದನ್ನು ನೋಡುವದಕ್ಕೆ ನೆರೆಯವರು ಹೊರಗೆ ಬಂದು, ಕೆಲವರು ಹಾಸ್ಯ ಮಾಡಿ, ಕೆಲವರು ಹೆದರಿಸಿ, ಕೆಲವರು ತಿರುಗಿ ಬಾ ಎಂದು ಕೂಗಿದರು. ಮೂರ್ಖನೂ ಚಂಚಲನೂ ಎಂಬ ಇಬ್ಬರು ಬಲಾತ್ಕಾರದಿಂದ ಅವನನ್ನು ಹಿಡಿದು ಕರಕೊಂಡು ಬರ ಬೇಕೆಂದು ನಿಶ್ಚಯಿಸಿದರು. ಅಷ್ಟರಲ್ಲಿ ಅವನು ದೂರಕ್ಕೆ ಹೋದಾಗ್ಯೂ ಹ್ಯಾಗೂ ಅವನ ಬೆನ್ನು ಹತ್ತ ಬೇಕೆಂದು ಹೊರಟು ಸ್ವಲ್ಪ ವೇಳೆಯಲ್ಲಿ ಅವನನ್ನು ಕಲತರು. ಆ ಮನುಷ್ಯನು—ನೆರೆಯವರೇ, ನೀವು ಬಂದದ್ದು ಯಾಕೆಂದು ಕೇಳಿದ್ದಕ್ಕೆ, ಅವರು—ನಮ್ಮ ಸಂಗಡ ನೀನು ತಿರುಗಿ ಬರುವದಕ್ಕೆ ಸಮ್ಮತಿಸ ಬಂದೆವಂದಾಗ ಅವನು, ಅದಾಗದು, ನಾನು ಹುಟ್ಟಿದಂಥ ನೀವು ನಿವಾಸ ಮಾಡುವಂಥ ಪಟ್ಣವು ನಾಶನಪುರವೇ ಎಂದು ನಾನು ತಿಳು ಕೊಂಡಿದ್ಧೇನೆ. ನೀವು ನಾಶನಪುರದಲ್ಲಿದ್ದು ಹಿಂದೆ ಮುಂದಾಗಿ ಸತ್ತರೆ ಸಮಾಧಿಗಿಂತ ಆಳವಾಗಿ ಅಗ್ನಿ ಗಂಧಕಗಳಿಂದ ಉರಿ

ಯುವ ಸ್ಥಳದಲ್ಲಿ ಬೀಳುವಿರಿ. ಆದದರಿಂದ ಪ್ರಿಯ ನೆರೆಯವರೇ ನನಗೆ ಸಮ್ಮತಿಸಿ ನನ್ನ ಸಂಗಡ ಬನ್ನಿ, ಅಂದನು.

ಮೂರ್ಖನು. ಏನು! ಸ್ನೇಹಿತರು ಮೊದಲಾದ ಸೌಖ್ಯವನ್ನು ಬಿಟ್ಟು ಹೋಗೋಣೋ?

ಅದಕ್ಕೆ ಕ್ರಿಸ್ತಿಯನೆಂಬ ಹೆಸರುಳ್ಳ ಆ ಮನುಷ್ಯನು ಹೇಳಿದ್ದೇನಂದರೆ—ಹೌದು, ಯಾಕಂದರೆ, ಅದೆಲ್ಲಾ ನಾನು ಅನುಭವಿಸ ಹೋಗುವದರಲ್ಲಿ ಕೊಂಚವಾದದ್ದಕ್ಕೆ ಸಮಾನವಲ್ಲ; ನೀನು ನನ್ನ ಸಂಗಡ ಬಂದರೆ ನನಗೆ ಆಗುವಂಥಾದ್ದು ನಿನಗೆ ಆಗುವದು; ನಾನು ಹೋಗುವ ಸ್ಥಳದಲ್ಲಿ ಸಾಕಾಗಿ ಮಿಗುತ್ತದೆ; ಬಾ, ನಾನು ಹೇಳುವದು ನಿಜವೆಂದು ನೋಡು.

ಮೂರ್ಖನು. ನೀನು ಪ್ರಪಂಚವನ್ನೆಲ್ಲಾ ಬಿಟ್ಟು ಹುಡುಕುವ ಸೌಖ್ಯವೇನು?

ಕ್ರಿಸ್ತಿಯನು. ಏನಂದರೆ, ನಾನು ಲಯವೂ ಕಳಂಕವೂ ಕ್ಷಯವೂ ಇಲ್ಲದ ಬಾಧ್ಯತೆಯನ್ನು ಹುಡುಕುತ್ತೇನೆ; ಅದು ಪರಲೋಕದಲ್ಲಿ ಇಡಲ್ಪಟ್ಟದೆ; ನೇಮಕವಾದ ಕಾಲದಲ್ಲಿ ಅದನ್ನು ಜಾಗ್ರತೆಯಾಗಿ ಹುಡುಕುವವರೆಲ್ಲರಿಗೆ ಕೊಡಲ್ಪಡುವದು. ನಿನಗೆ ಮನಸ್ಸಿದ್ದರೆ ನನ್ನ ಪುಸ್ತಕದಲ್ಲಿ ಓದಿ ನೋಡು.

ಮೂರ್ಖನು. ಛೀ, ನಿನ್ನ ಪುಸ್ತಕ ಹಾಳಾಗಲಿ. ನಮ್ಮ ಸಂಗಡ ತಿರುಗಿ ಬರುತ್ತೀಯೋ ಇಲ್ಲವೋ?

ಕ್ರಿಸ್ತಿಯನು. ಬಾರೆ, ನನ್ನ ಕೈಯನ್ನು ನೇಗಿಲಿಗೆ ಹಾಕಿದ ಮೇಲೆ, ಹಿಂದಕ್ಕೆ ನೋಡಲಾರೆನು.

ಮೂರ್ಖನು. ಹಾಗಾದರೆ, ಚಂಚಲಪ್ಪಾ, ಬನ್ನಿ, ಮನೆಗೆ ಹೋಗೋಣ. ಇಂಥಾ ಪೈತ್ಯ ಹಿಡಿದವನ ಸಂಗಡ ವಾದಿಸಿದರೆ ಏನು ಪ್ರಯೋಜನ? ಹತ್ತು ಮಂದಿ ಜ್ಞಾನಿಗಳಿಗಿಂತ ಇಂಥವರು ತಮ್ಮ ದೃಷ್ಟಿಯಲ್ಲಿ ಬುದ್ಧಿವಂತರಾಗಿದ್ದಾರಲ್ಲ?

ಚಂಚಲನು. ತಾಳಪ್ಪಾ, ದೂಷಿಸ ಬೇಡ, ಈತನು ಹೇಳುವ ಮಾತುಗಳು ನಿಜವಾದರೆ, ನಮ್ಮ ಸ್ಥಿತಿಗಿಂತ ಈತನು ಎದು

ರು ನೋಡುವಂಥಾದ್ದು ಉತ್ತಮ. ಈತನ ಸಂಗಡ ಹೋಗುವದ
ಕ್ಕೆ ನನಗೆ ಮನಸ್ಸುಂಟು.

ಮೂರ್ಖನು. ಓಹೋ! ಇನ್ನು ಪೈತ್ಯಗಾರರೋ? ನನ್ನ
ಮಾತು ಕೇಳು. ಹಿಂದಕ್ಕೆ ಬಾ; ಇಂಥಾ ಹುಚ್ಚನು ನಿನ್ನನ್ನು ಎ
ಲ್ಲಿಗೆ ಕರ ಕೊಂಡು ಹೋಗುವನೋ ಯಾರು ಕಂಡಿದ್ಧಾರೆ? ಬಾ,
ಬಾ, ಬುದ್ಧಿವಂತನಾಗಿರು.

ಕ್ರಿಸ್ತಿಯನು. ನೆರೆಯುವನಾದ ಚಂಚಲನೇ, ನನ್ನ ಸಂಗಡ
ಬಾ, ನಾನು ಹೇಳಿದವುಗಳು ಮಾತ್ರವಲ್ಲ, ಇನ್ನು ಬಹಳ ಮಹಿ
ಮೆ ಉಂಟು, ನನ್ನ ಮಾತು ನೀನು ನಂಬದಿದ್ದರೆ ಈ ಪುಸ್ತಕದಲ್ಲಿ
ಓದು. ಇದರಲ್ಲಿ ಬರೆಯಲ್ಪಟ್ಟದ್ದೆಲ್ಲಾ, ಬರೆಸಿದವನ ರಕ್ತದಿಂದ ಸ್ಥಾಪಿ
ಸಲ್ಪಟ್ಟದೆ.

ಚಂಚಲನು. ನನಗೆ ಸ್ಥಿರ ಉಂಟು ಮೂರ್ಖಪ್ಪಾ, ಇವ
ನ ಸಂಗಡ ಹೋಗುತ್ತೇನೆ, ಸಲಾಂ. ಆದರೆ ಜತೆಯುವನೇ, ಆ ಉ
ತ್ತಮ ಸ್ಥಳಕ್ಕೆ ನಿನಗೆ ಮಾರ್ಗ ತಿಳಿಯುತ್ತದೋ?

ಕ್ರಿಸ್ತಿಯನು. ಸುವಾರ್ತಿಕನೆಂಬ ಒಬ್ಬ ಮನುಷ್ಯನು, ನಾ
ನು ಎದುರಾಗಿರುವ ಒಂದು ಸಣ್ಣ ಬಾಗಲಿಗೆ ಹೋದರೆ, ಮಾರ್ಗ
ವನ್ನು ಕುರಿತು ಅಲ್ಲಿ ವಿವರವನ್ನು ಕೇಳ ಬಹುದು, ಅಂದನು.

ಚಂಚಲನು. ಹಾಗಾದರೆ, ಬಾರಪ್ಪಾ, ಹೋಗೋಣ.

ಹೀಗೆ ಅವರಿಬ್ಬರು ಕೂಡ ಹೋದರು. ಮತ್ತು ಮೂರ್ಖ
ನು—ನಾನು ಇಂಥಾ ಹೆಡ್ಡರ ಸಂಗಡ ಶೇರಲೊಲ್ಲೆನೆಂದು ಹೇಳಿ
ತನ್ನ ಸ್ಥಳಕ್ಕೆ ಹೋದನು.

ಮೂರ್ಖನು ಮನೆಗೆ ಹೋದ ಮೇಲೆ ಕ್ರಿಸ್ತಿಯನೂ ಚಂಚಲ
ನೂ ಮಾತಾಡಿ ಕೊಳ್ಳುತ್ತಾ ಆ ಬೈಲು ದಾಟುವದನ್ನು ಕನಸಿನಲ್ಲಿ
ಕಂಡೆನು. ಅವರು ಮಾತಾಡಿದ್ದೇನಂದರೆ—

ಕ್ರಿ. ಒಳ್ಳೇದಾಯಿತು ನೆರೆಯವನಾದ ಚಂಚಲನೇ, ಕ್ಷೇ
ಮವೋ? ನನ್ನ ಸಂಗಡ ಬರಲಿಕ್ಕೆ ನಿನಗೆ ಮನಸ್ಸಾದದರಿಂದ ಸಂ
ತೋಷ ಪಡುತ್ತೇನೆ. ಅದೃಶ್ಯವಾದವುಗಳ ತ್ರಾಣವನ್ನೂ ಭಯ

ವನ್ನೂ ನಾನು ಅನುಭವಿಸಿದ ಹಾಗೆ ಮೂರ್ಖಪ್ಪ ಅನುಭವಿಸಿದ್ದಾದರೆ ಹೀಗೆ ಅವನು ಬೇಗ ಹಿಂದಕ್ಕೆ ತಿರುಗುತ್ತಿದ್ದಿಲ್ಲ.

ಚಂ. ಒಳ್ಳೇದಾಯಿತು ನೆರೆಯವನಾದ ಕ್ರಿಸ್ತಿಯನೇ, ನಾವಿಬ್ಬರೇ ಇರುವದರಿಂದ ನಾವು ಹೋಗುವಲ್ಲಿ ಏನು ಶಿಕ್ಕುವದೂ ಅದನ್ನು ಹ್ಯಾಗೆ ಅನುಭವಿಸುವದೂ ಎಂಬುವದನ್ನು ನನಗೆ ವಿವರವಾಗಿ ಹೇಳ ಬೇಕು.

ಕ್ರಿ. ಅವುಗಳನ್ನು ನಾಲಿಗೆಯಿಂದ ಉಚ್ಚರಿಸುವದಕ್ಕಿಂತ ಆತ್ಮದಿಂದ ಧ್ಯಾನಿಸುವದು ಸುಲಭವಾಗಿದೆ. ಆದರೆ ನೀವು ಅವುಗಳನ್ನು ತಿಳಿಯ ಬೇಕಾಗುವದರಿಂದ ಅವುಗಳ ತಾತ್ಪರ್ಯವನ್ನು ನನ್ನ ಪುಸ್ತಕದಲ್ಲಿ ಓದಿ ಹೇಳುವೆನು.

ಚಂ. ನಿಮ್ಮ ಪುಸ್ತಕದಲ್ಲಿರುವ ಮಾತುಗಳು ಸತ್ಯವೇ ಎಂದು ನೆನಸುತ್ತೀರೋ?

ಕ್ರಿ. ಹೌದು, ಈ ಪುಸ್ತಕ ಬರೆಸಿದವನು ಸುಳ್ಳು ಹೇಳಲಾರನು.

ಚಂ. ಒಳ್ಳೇದು ಆ ಕಾರ್ಯಗಳು ಯಾವವು?

ಕ್ರಿ. ನಿವಾಸಿಸ ತಕ್ಕ ನಿತ್ಯವಾದ ಒಂದು ರಾಜ್ಯ ಉಂಟು, ಆ ರಾಜ್ಯದಲ್ಲಿ ನಿವಾಸಿಸುವ ಹಾಗೆ ನಿತ್ಯ ಜೀವವು ನಮಗೆ ಕೊಡಲ್ಪಡುವದು.

ಚಂ. ಒಳ್ಳೇದು ಮತ್ತೇನು?

ಕ್ರಿ. ಮಹಿಮೆಯ ಕಿರೀಟಗಳನ್ನೂ ಆಕಾಶ ವಿಶಾಲದಲ್ಲಿ ಪ್ರಕಾಶಿಸುವ ಸೂರ್ಯನ ಹಾಗೆ ನಮ್ಮನ್ನು ಬೆಳಗಿಸುವ ವಸ್ತ್ರಗಳನ್ನೂ ಹೊಂದುವೆವು.

ಚಂ. ಇದು ಉತ್ತಮವು ಮತ್ತೇನು?

ಕ್ರಿ. ಅಳುವಿಕೆಯೂ ದುಃಖವೂ ಇನ್ನು ಇರದು. ಯಾಕಂದರೆ ಆ ಸ್ಥಳದ ಯಜಮಾನನು ಎಲ್ಲಾ ಕಣ್ಣೀರು ನಮ್ಮ ಕಣ್ಣುಗಳಿಂದ ಒರಸುವನು.

ಚಂ. ಅಲ್ಲಿ ಯಾರ ಸಂಗಡ ಕೂಡಿ ಇರುವೆವು?

ಕ್ರಿ. ಅಲ್ಲಿ ನಾವು ನಿಮ್ಮ ಕಣ್ಣಿಗೆ ನೋಡಲಸಾಧ್ಯವಾದ ಕೆ
ರೂಬ್ ಸೆರಾಫ್ ಎಂಬ ದೇವದೂತರ ಸಂಗಡಲೂ, ನಮ್ಮ ಮುಂ
ದಾಗಿ ಆ ಸ್ಥಳಕ್ಕೆ ಹೋದ ಲಕ್ಷಾನುಲಕ್ಷ ಜನರ ಸಂಗಡಲೂ, ಕೂ
ಡಿ ಇರುವೆವು. ಅವರಲ್ಲಿ ಯಾರೂ ದುಷ್ಟರಾಗಿರದೆ ಎಲ್ಲರು ಪ್ರೀ
ತಿಯೂ ಪರಿಶುದ್ಧತ್ವವೂ ಉಳ್ಳವರಾಗಿದ್ದಾರೆ. ಅವರೆಲ್ಲರು ದೇ
ವರ ಸಮುಖದಲ್ಲಿ ನಡೆಯುತ್ತಾ ಎಂದೆಂದಿಗೂ ಆತನಿಗೆ ಇಷ್ಟರಾಗಿ
ಆತನ ಸನ್ನಿಧಿಯಲ್ಲಿ ನಿಲ್ಲುತ್ತಾರೆ. ಅಲ್ಲಿ ಚಿನ್ನದ ಕಿರೀಟ ಧರಿಸಿದ
ಹಿರಿಯರನ್ನೂ ಚಿನ್ನದ ವೀಣೆ ಬಾರಿಸುವ ಪರಿಶುದ್ಧರನ್ನೂ ಆ ಸ್ಥ
ಳದ ಯಜಮಾನನಿಗೆ ತಾವು ಮಾಡುವ ಪ್ರೀತಿಗೋಸ್ಕರ ಲೋಕದ
ವರಿಂದ ಕಡಿಯಲ್ಪಟ್ಟ ಮೇಲೆಯೂ ಬೆಂಕಿಯಲ್ಲಿ ಸುಡಲ್ಪಟ್ಟ ಮೇ
ಲೆಯೂ ಮೃಗಗಳಿಂದ ಶೀಳಲ್ಪಟ್ಟಮೇಲೆಯೂ ಸಮುದ್ರದಲ್ಲಿ ಮು
ಣುಗಿಸಲ್ಪಟ್ಟಮೇಲೆಯೂ ಸುಖದಿಂದಿದ್ದು ನಿರ್ಲಯವನ್ನು ವಸ್ತ್ರದ
ಹಾಗೆ ಹೊದ್ದು ಕೊಂಡವರಾದ ಮನುಷ್ಯರನ್ನೂ ನೋಡುವೆವು.

ಚಂ. ಇದನ್ನು ಕೇಳುತ್ತಲೆ ಹೃದಯವು ಆನಂದದಿಂದ ತುಂ
ಬುತ್ತದೆ. ಹೀಗಿರಲಾಗಿ ಇವುಗಳನ್ನು ಅನುಭವಿಸುವದು ಹ್ಯಾಗೆ?
ಇವುಗಳಲ್ಲಿ ಪಾಲನ್ನು ಹೊಂದುವ ಮಾರ್ಗ ಯಾವದು?

ಕ್ರಿ. ನಾವು ಆ ಸಂತೋಷಗಳನ್ನು ಹೊಂದಲಿಕ್ಕೆ ಸತ್ಯ
ವಾಗಿ ಅಪೇಕ್ಷಿಸಿದರೆ ಅವು ನಮಗೆ ಉಚಿತವಾಗಿ ಶಿಕ್ಕುವವೆಂದು ಆ
ದೇಶದ ಅಧಿಪತಿಯಾದ ಕರ್ತನು ಈ ಪುಸ್ತಕದಲ್ಲಿ ಬರಸಿದ್ದಾನೆ.

ಚಂ. ಒಳ್ಳೇ ಸ್ನೇಹಿತನೇ, ಈ ಸಮಾಚಾರ ಕೇಳಿದ್ದು
ಸಂತೋಷವಾಯಿತು. ಬೇಗ ಹೋಗುವ ಬನ್ನಿ.

ಕ್ರಿ. ನನ್ನ ಬೆನ್ನಿನ ಮೇಲೆ ಇರುವ ಹೊರೆಯಿಂದ ನಾನು
ಅಪೇಕ್ಷಿಸುವಷ್ಟು ಬೇಗ ನಡೆಯ ಕೂಡದು.

ಇಷ್ಟು ಮಾತಾಡಿದ ಮೇಲೆ ಅವರು ಬೈಲಿನ ಮಧ್ಯದಲ್ಲಿರುವ
ಹುದಿಲಿನ ಸಮೀಪಕ್ಕೆ ಬಂದರು. ಅವರು ಅಜಾಗ್ರತೆಯಾಗಿದ್ದ ಕಾ
ರಣ ಇಬ್ಬರೂ ಪಕ್ಕನೆ ಹುದಿಲಿನಲ್ಲಿ ಬಿದ್ದರು. ಆ ಹುದಿಲಿಗೆ ಅಧೈ
ರ್ಯವೆಂದು ಹೆಸರಿತ್ತು. ಅಲ್ಲಿ ಅವರು ಸ್ವಲ್ಪ ಕಾಲ ಹೊರಳಾಡಿ,

ಕೆಸರು ಬಹಳ ತಾಗಿದಾಗ ಕ್ರಿಸ್ತಿಯನು ಬೆನ್ನಿನ ಮೇಲೆ ಇರುವ ಹೊರೆಯಿಂದ ಮುಣುಗಲಿಕ್ಕಿದ್ದನು.

ಚಂ. ಆಹಾ, ನೆರೆಯವನಾದ ಕ್ರಿಸ್ತಿಯನೇ, ಈಗ ಎಲ್ಲಿದ್ಧೀ?

ಕ್ರಿ. ನಿಶ್ಚಯವಾಗಿ ನಾನರಿಯೆ.

ಚಂಚಲನು ಕೋಪ ಮಾಡಲಾರಂಭಿಸಿ, ಇಷ್ಟು ಹೊತ್ತು ನೀನು ನನಗೆ ವಿವರಿಸಿದ ಸುಖವು ಇದೇನೋ? ನಾವು ಹೊರಟಾಗಲೇ ಇಂಥಾ ಉಪದ್ರ ನಮಗೆ ಬಂದರೆ ಪ್ರಯಾಣ ಮುಗಿಯುವ ವರೆಗೆ ಇನ್ನೇನು ಆಗುತ್ತದೋ? ನಾನು ಜೀವದಿಂದ ಊರು ಸೇರಿದರೆ ಸಾಕು. ಆ ಸುಖವಾದ ದೇಶವು ನಿನಗಿರಲಿ ಎಂದು ಸಿಟ್ಟಿನಿಂದ ಹೇಳಿ, ಒಂದೆರಡು ಸಾರಿ ಬಲವಾಗಿ ಕುಪ್ಪಳಿಸಿ, ಆ ಹುದಿಲಿನಿಂದ ಹೊರಗೆ ಬಂದು ತನ್ನ ಮನೆಯ ಕಡೆಗೆ ಹೊರಟು ಹೋದನು. ಕ್ರಿಸ್ತಿಯನು ಅವನನ್ನು ಮತ್ತೆ ನೋಡಲಿಲ್ಲ.

ಹೀಗಿರಲಾಗಿ ಕ್ರಿಸ್ತಿಯನು ಒಬ್ಬನೇ ಅಧೈರ್ಯವೆಂಬ ಹುದಿಲಿನಲ್ಲಿ ಹೊರಳುವದಕ್ಕೆ ಬಿಡಲ್ಪಟ್ಟನು. ಆದರೆ ತನ್ನ ಮನೆಗೆ ಬೆನ್ನು ಹಾಕಿ, ಆ ಇಕ್ಕಟ್ಟಿನ ಬಾಗಲಿಗೆ ಎದುರಾಗಿ ಇರುವ ಪಾರ್ಶ್ವಕ್ಕೆ ಹೊರಡುವ ಪ್ರಯತ್ನ ಮಾಡಿ, ಬೆನ್ನಿನ ಮೇಲೆ ಇರುವ ಹೊರೆಯಿಂದ ದಡ ಏರಲಾರದಿದ್ದನು. ಆಗ ಸಹಾಯಕನೆಂಬ ಒಬ್ಬ ಮನುಷ್ಯನು ಅವನ ಹತ್ತರ ಬಂದು ನೀವು ಇಲ್ಲಿ ಏನು ಮಾಡುತ್ತೀರಿ? ಎಂದು ಅವನನ್ನು ಕೇಳಿದ್ದನ್ನು ಕನಸಿನಲ್ಲಿ ಕಂಡೆನು.

ಕ್ರಿ. ಸುವಾರ್ತಿಕನೆಂಬ ಒಬ್ಬ ಮನುಷ್ಯನು ಈ ಮಾರ್ಗವನ್ನು ನನಗೆ ತೋರಿಸಿ ನಾನು ಬರುವ ಕೋಪಕ್ಕೆ ತಪ್ಪಿಸಿ ಕೊಳ್ಳುವ ಹಾಗೆ ಆಚೆಯ ಬಾಗಲಿಗೆ ಹೋಗ ಬೇಕೆಂದು ನನಗೆ ಹೇಳಿದದರಿಂದ ನಾನು ಹೊರಟೆನು. ಅಲ್ಲಿಗೆ ಹೋಗುತ್ತಿರಲಾಗಿ ನಾನು ಇದರಲ್ಲಿ ಬಿದ್ದೆನು.

ಸ. ಹಾದು ಹೋಗುವದಕ್ಕೆ ಇಟ್ಟ ಕಲ್ಲು ನೀವು ನೋಡಲಿಲ್ಲವೋ?

ಕ್ರಿ. ಭಯವು ನನ್ನನ್ನು ಬೆನ್ನು ಹತ್ತಿದದರಿಂದ ನಾನು ಸ ಮೀಪವಾದ ದಾರಿಯಿಂದ ಓಡಿ ಹುದಿಲಿನಲ್ಲಿ ಬಿದ್ದೆನು.

ಅದಕ್ಕೆ ಸಹಾಯಕನು—ನಿಮ್ಮ ಕೈ ಕೊಡಿರಿ ಎಂದು ಹೇ ಳಿ, ಅವನು ಕೊಟ್ಟ ಕೈ ಹಿಡಿದು, ಅವನನ್ನು ಮೇಲಕ್ಕೆ ಎತ್ತಿ ಒ ಳ್ಳೇ ನೆಲದಲ್ಲಿ ಇರಿಸಿ, ಮುಂದೆ ಹೋಗಿರೆಂದು ಹೇಳಿದ್ದನ್ನು ಕಂಡೆ ನು. ಮತ್ತು ನಾನು ಸಹಾಯಕನ ಹತ್ತರ ಹೋಗಿ, ಐಯ್ಯಾ, ನಾ ಶನಪುರದಿಂದ ಆ ಬಾಗಲಿಗೆ ಹೋಗುವ ಮಾರ್ಗವು ಇತ್ತಲಾಗಿ ಬ ರುವದರಿಂದ ಬಡಪ್ರಯಾಣಸ್ಥರ ಉಪಯೋಗಕ್ಕೆ ಈ ಹುದಿಲನ್ನು ಯಾಕೆ ಸಮ ಮಾಡುವದಿಲ್ಲವೆಂದು ಕೇಳಿದೆನು. ಅವನು ಪ್ರತ್ಯು ತ್ತರವಾಗಿ—ಈ ಕೆಸರಿನ ಹುದಿಲು ಸಮವಾಗಲಾರದ ಸ್ಥಳವಾಗಿದೆ. ಪಾಪದ ತಿಳುವಿಕೆಯಿಂದ ಉಕ್ಕುವ ನೊರೆಯೂ ಮಲಿನವೂ ಯಾ ವಾಗಲೂ ಈ ತಗ್ಗಿಗೆ ಹರಿದು ಬರುವದರಿಂದ ಅದಕ್ಕೆ ಅಧೈರ್ಯದ ಹು ದಿಲು ಎಂದು ಹೆಸರಾಯಿತು. ಪಾಪಿಷ್ಟನು ಎಚ್ಚತ್ತು ತನ್ನ ದಿ ಕ್ಕಿಲ್ಲದ ಸ್ಥಿತಿಯನ್ನು ತಿಳಿದು ಕೊಂಡಂದಿನಿಂದ ಅವನ ಹೃದಯದ ಲ್ಲಿ ಸಂಶಯ ಅಧೈರ್ಯ ಭಯವೆಂಬ ಪಾಳುಗಳು ನೆಗ್ಗಿ ಬಂದು, ಈ ಹುದಿಲಿನಲ್ಲಿ ಕೂಡುತ್ತವೆ. ಆದದರಿಂದ ಈ ಸ್ಥಳ ಕೆಟ್ಟು ಹೋ ದದ್ದು.

ಈ ಸ್ಥಳ ಅಷ್ಟು ಕೆಟ್ಟದ್ದಾಗಿರ ಬೇಕೆಂದು ಮಹಾ ರಾಜನಿಗೆ ಮನಸ್ಸಿಲ್ಲದ ಕಾರಣ ಆತನ ಕೆಲಸದವರು ಮಹಾರಾಜನ ಮಾರ್ಗ ವಿಚಾರಕರ ಅನುಮತಿಯಿಂದ ಈ ಸ್ಥಳವನ್ನು ಸಮ ಮಾಡ ಬೇಕೆಂ ದು ಹೆಚ್ಚು ಕಡಮೆ ಹದಿನೆಂಟು ನೂರು ವರುಷದಿಂದ ಪ್ರಯತ್ನ ಮಾಡಿದ್ದಾರೆ. ಆದರೆ ರಾಜ್ಯದ ಎಲ್ಲಾ ಕಡೆಯಿಂದ ಇಪ್ಪತ್ತು ಸಾವಿರ ಸುಬೋಧೆಗಳ ಬಂಡಿ ಹೊರೆಗಳನ್ನೂ, ಇದು ಸಾಲದೆ ಕೋಟ್ಯಾನು ಕೋಟಿಗಳನ್ನೂ ವೈದು ಹಾಕಿದರೂ ಈ ಸ್ಥಳವು ಅವುಗಳನ್ನೆಲ್ಲಾ ನುಂಗಿ ಬಿಟ್ಟಿತು ಎಂದು ನಾನು ಬಲ್ಲೆನು. ಅದನ್ನು ಸಮ ಮಾಡ ಸಾಧ್ಯವಾಗಿದ್ದರೆ ಅಂಥವುಗಳಿಂದಲೇ ಸಮವಾಗ ಬೇಕಾಗಿತ್ತೆಂದು ತಿಳಿದವರು ಹೇಳುತ್ತಾರೆ. ಆದರೆ ಈಗಿನ ಪರ್ಯಂತರ ಅಧೈರ್ಯದ

ಹುದಿಲೇ ಆಗಿದೆ. ಆದರೆ ಅವರು ಅದನ್ನು ತುಂಬಿಸುವದಕ್ಕೆ ಆದ ಷ್ಟು ಪ್ರಯತ್ನ ಮಾಡಿದರೂ ಅದು ಹಾಗೆಯೇ ಇರುವದು.

ಈ ಹುದಿಲನ್ನು ಹಾದು ಹೋಗಲಿಕ್ಕೆ ಮಧ್ಯದಲ್ಲಿ ಒಳ್ಳೇ ಘಟ್ಟಿಯಾದ ಮೆಟ್ಲುಗಳು ಮಹಾರಾಜನ ಅಪ್ಪಣೆಯಿಂದ ಇಡಲ್ಪ ಟ್ಟವೆ ಹೌದು. ಆದರೆ ಕಾಲ ಬದಲಿಸುವ ಸಮಯದಲ್ಲಿ ಈ ಸ್ಥಳವು ಬಹಳ ಮಲಿನವನ್ನು ಉಬ್ಬಿಸುವದರಿಂದ ಅಂಥಾ ದಿವಸಗಳಲ್ಲಿ ಆ ಮೆಟ್ಲುಗಳು ಚಂನಾಗಿ ಕಾಣ ಬರಲಿಕ್ಕಿಲ್ಲ. ಕಂಡರೂ ಜನರು ತಲೆ ಶಿರುಗಿ ಕಾಲು ತಪ್ಪುಟ್ಟು ಮೆಟ್ಲುಗಳು ಇದ್ದಾಗ್ಯೂ ವ್ಯರ್ಥವಾಗಿ ಮ ಲಿನರಾಗುತ್ತಾರೆ. ಹ್ಯಾಗಾದರೂ ಬಾಗಲು ಶೇರಿದ ಮೇಲೆ ಆಚೆ ನೆಲ ಒಳ್ಳೇದೇ ಸರಿ.

ಅಷ್ಟರೊಳಗೆ ಚಂಚಲನು ತಿರಿಗಿ ಮನೆಗೆ ಬಂದದ್ದನ್ನು ಕನಸಿ ನಲ್ಲಿ ಕಂಡೆನು. ಅವನು ಬರಲು, ನೆರೆಯವರು ಅವನನ್ನು ನೋಡ ಲಿಕ್ಕೆ ಬಂದು, ಕೆಲವರು, ನೀನು ಹಿಂದಕ್ಕೆ ಬಂದದ್ದು ಒಳ್ಳೇ ಬು ದ್ಧಿಯಾಯಿತು ಎಂದು, ಕೆಲವರು, ನೀನು ಕ್ರಿಸ್ತಿಯನ ಸಂಗಡ ಗಂಡಾಂತರ ಪಟ್ಟದ್ದು ಹುಚ್ಚುತನವಾಯಿತು ಎಂದು ಹೇಳಲು, ಕೆಲ ವರು, ಅವನಿಗೆ ಹೇಡಿ ಎಂದು ಬೈದು, ನಾವು ಹೊರಟದ್ದಾದರೆ ಸ್ವ ಲ್ಪ ಉಪದ್ರ ಬಂದರೂ ತಿರುಗುತ್ತಿದ್ದಿಲ್ಲವನ್ನಲು, ಚಂಚಲನು ಕುಗ್ಗಿ ಅವರ ಮಧ್ಯದಲ್ಲಿ ಕೂತನು. ಕಡೆಗೆ ಅವನಿಗೆ ಸ್ವಲ್ಪ ಧೈರ್ಯ ಬಂದ ಮೇಲೆ ಅವರೆಲ್ಲರು ಈ ಮಾತನ್ನು ಬಿಟ್ಟು ಕ್ರಿಸ್ತಿಯನನ್ನು ಹಾಸ್ಯ ಮಾಡಲಾರಂಭಿಸಿದರು. ಚಂಚಲನ ವಿಷಯವಾಗಿ ನಡೆದ ದ್ದು ಇಷ್ಟೆ.

---

## 3. Mr Worldly Wiseman.

## ೩. ಲೋಕಜ್ಞಾನಿ.

---

ತರುವಾಯ ಕ್ರಿಸ್ತಿಯನು ಒಂಟಿಗನಾಗಿ ಹೋಗುವಾಗ ಅಡ್ಡದಾರಿಯಿಂದ ತನ್ನ ಬಳಿಗೆ ಬರುವ ಒಬ್ಬನನ್ನು ನೋಡಿದನು. ದಾರಿಯ ಸಂದಿನಲ್ಲಿ ಅವರಿಬ್ಬರೂ ಕೂಡಿದರು. ಕೂಡಿದ ಗೃಹಸ್ತನಿಗೆ ಲೋಕಜ್ಞಾನಿ ಎಂಬ ಹೆಸರಿತ್ತು. ಅವನು ನಿವಾಸಿಸುವ ಊರು ಕ್ರಿಸ್ತಿಯನ ಊರಿಗೆ ಸವಿಾಪವಾದ ಮಾಂಸೋಪಾಯಪುರವೆಂಬ ದೊಡ್ಡ ಪಟ್ಣವು. ಕ್ರಿಸ್ತಿಯನು ನಾಶನಪುರವನ್ನು ಬಿಟ್ಟು ಹೊರಟ ಸಮಾಚಾರವು ಅವನು ವಾಸಿಸಿದ ಪಟ್ಣದಲ್ಲಿ ಮಾತ್ರವಲ್ಲ ಬೇರೆ ಕೆಲವು ಸ್ಥಳಗಳಲ್ಲಿಯೂ ಪ್ರಸಿದ್ಧಿಯಾದದರಿಂದ ಈ ಲೋಕಜ್ಞಾನಿ ಕ್ರಿಸ್ತಿಯನು ಕಷ್ಟದಿಂದ ನಡೆಯುವದನ್ನೂ ನಿಟ್ಟುಸುರಿಟ್ಟು ಅಳುವದನ್ನೂ ನೋಡುತ್ತಲೇ ಇವನು ಅವನೇ ಎಂದು ನೆನಸಿ ಸಂಭಾಷಣೆ ಮಾಡಲಾರಂಭಿಸಿದನು.

ಲೋ. ಏನೈಯ್ಯಾ, ನೀವು ಇಂಥಾ ಭಾರವಾದ ಹೊರೆ ಹೊತ್ತು ಕೊಂಡು ಎಲ್ಲಿ ಹೋಗುತ್ತೀರಿ?

ಕ್ರಿ. ಭಾರವಾದ ಹೊರೆ ಎಂಬುವದಕ್ಕೆ ಸಂದೇಹವಿಲ್ಲವೈಯ್ಯಾ. ಇಂಥಾದನ್ನು ಯಾವ ಅಲ್ಪ ಜೀವಿಯಾದರೂ ಹೊರಲಿಲ್ಲ. ನಾನು ಎಲ್ಲಿ ಹೋಗುತ್ತೇನಂದರೆ, ನನ್ನ ಮುಂದೆ ಇರುವ ಆ ಇಕ್ಕಟ್ಟಿನ ಬಾಗಲಿಗೆ ಹೋಗುತ್ತೇನೆ. ಅಲ್ಲಿ ನನ್ನ ಭಾರವಾದ ಹೊರೆಯನ್ನು ಬಿಡಿಸುವ ಉಪಾಯವು ಶಿಕ್ಕೀತೆಂಬ ವರ್ತಮಾನವನ್ನು ಕೇಳಿದ್ದೇನೆ.

ಲೋ. ನಿಮಗೆ ಹೆಂಡರು ಮಕ್ಕಳು ಇದ್ದಾರೋ?

ಕ್ರಿ. ಇದ್ದಾರೆ. ಆದಾಗ್ಯೂ ಈ ಭಾರವಾದ ಹೊರೆಯಿಂದ ಅವರ ಮೇಲೆ ಮುಂಚಿನಷ್ಟು ಮನಸ್ಸು ಇಟ್ಟು ಆನಂದ ಪಡುವದಿಲ್ಲ. ಅವರು ಇದ್ದರೂ ಇಲ್ಲದ ಹಾಗಾಯಿತು.

ಲೋ. ನಾನು ನಿಮಗೆ ಬುದ್ಧಿ ಹೇಳಿದರೆ ಕೇಳೀರೋ?

ಕ್ರಿ. ಒಳ್ಳೇದಾದರೆ ಕೇಳೇನು. ಅಂಥಾ ಬುದ್ಧಿಯೇ ನನಗೆ
ಬೇಕು.

ಲೋ. ಹಾಗಾದರೆ ನೀವು ನಿಮ್ಮ ಹೊರೆಯಿಂದ ಬೇಗ ತ
ಪ್ಪಿ ಕೊಳ್ಳ ಬೇಕೆಂದು ಬುದ್ಧಿ ಹೇಳುತ್ತೇನೆ. ಯಾಕಂದರೆ ತಪ್ಪಿಸಿ
ಕೊಳ್ಳುವ ಪರ್ಯಂತರ ನಿಮ್ಮ ಮನಸ್ಸು ಸಮವಾಗದು. ಮತ್ತು
ದೇವರು ನಿಮಗೆ ಕೊಟ್ಟ ಭಾಗ್ಯಗಳಲ್ಲಿ ಆನಂದ ಪಡಲಾರಿರಿ.

ಕ್ರಿ. ಈ ಹೊರೆಯಿಂದ ತಪ್ಪಿ ಕೊಳ್ಳುವಂಥಾದ್ದು ನನಗೆ
ಅವಶ್ಯವು. ಆದರೆ ನಾನು ಅದನ್ನು ತೆಗೆದು ಹಾಕಲಾರೆ. ನನ್ನ ಹೆಗ
ಲಿನಿಂದ ಅದನ್ನು ತೆಗೆದು ಕೊಳ್ಳುವವನು ನಮ್ಮ ದೇಶದಲ್ಲಿ ಇಲ್ಲ.
ಅದಕ್ಕೋಸ್ಕರವೇ ನಾನು ಮುಂಚೆ ಹೇಳಿದ ಹಾಗೆ ನನ್ನ ಹೊರೆ
ಯಿಂದ ತಪ್ಪಿ ಕೊಳ್ಳ ಬೇಕಾಗಿ ಈ ಮಾರ್ಗದಲ್ಲಿ ಹೋಗುತ್ತೇನೆ.

ಲೋ. ಹೊರೆಯಿಂದ ತಪ್ಪಿ ಕೊಳ್ಳುವದಕ್ಕೆ ಈ ಮಾರ್ಗ
ವಾಗಿ ಹೋಗ ಬೇಕೆಂದು ನಿಮಗೆ ಯಾರು ಹೇಳಿದರು?

ಕ್ರಿ. ಘನವುಳ್ಳ ಮಹಾಪುರುಷನಂತೆ ನನಗೆ ತೋರಿದ
ಸುವಾರ್ತಿಕನೆಂಬವನು ನನಗೆ ಹೇಳಿದ್ದಾನೆ.

ಲೋ. ಅವನ ಬುದ್ಧಿ ಸುಡಲಿ. ಅವನು ನಿಮಗೆ ತೋರಿ
ಸಿದ ಮಾರ್ಗಕ್ಕಿಂತ ಗಂಡಾಂತರವೂ ಕಷ್ಟವೂ ಇರುವ ಮಾರ್ಗವು
ಲೋಕದಲ್ಲಿ ಇಲ್ಲ. ಅವನ ಬುದ್ಧಿಯಿಂದ ನಡೆದರೆ ಅನುಭವವಾದೀ
ತು. ಈಗ ಒಂದು ಅನುಭವವಾಯಿತೆಂದು ಕಾಣುತ್ತದೆ. ಹ್ಯಾಗಂ
ದರೆ ಅಪನಂಬಿಕೆ ಎಂಬ ಹುದಿಲಿನ ಕೆಸರು ನಿಮಗೆ ಹತ್ತಿ ಅದೆ. ಆ
ದರೆ ಆ ಹುದಿಲು ಈ ಮಾರ್ಗದಲ್ಲಿ ಹೋಗುವವರಿಗೆ ಬರುವ ಕಷ್ಟ
ಗಳ ಆರಂಭ ಮಾತ್ರವಾಗಿದೆ. ನನ್ನ ಮಾತು ಕೇಳಿರಿ. ನಾನು ನಿ
ಮಗಿಂತ ಪ್ರಾಯ ಹೋದವನು. ನೀವು ಹೋಗುವ ಮಾರ್ಗದ
ಲ್ಲಿ ಆಯಾಸ ಬೇನೆ ಹಸಿವೆ ಗಂಡಾಂತರ ಬೆತ್ತಲೆ ಖಡ್ಗ ಸಿಂಹ
ಘಟಸರ್ಪ ಅಂಧಕಾರ ಮರಣ ಇತ್ಯಾದಿಗಳು ನಿಮಗೆ ಬಂದಾವು.
ಬಾರದ ಕಷ್ಟವು ಒಂದೂ ಇಲ್ಲ. ಅನೇಕ ಸಾಕ್ಷಿಗಳು ಇದ್ದಾರೆ.

ಅದು ಸತ್ಯವೇ ಸರಿ. ಅನ್ಯನ ಮಾತು ಕೇಳಿ ಸುಮ್ಮನೆ ಕೆಟ್ಟು ಹೋಗುವದು ಯಾಕೆ?

ಕ್ರಿ. ಐಯ್ಯಾ, ನೀವು ಹೇಳಿದ ಎಲ್ಲವುಗಳಿಗಿಂತ ನನ್ನ ಬೆನ್ನಿನ ಮೇಲಿರುವ ಹೊರೆಯು ಅತಿ ಭಯಂಕರವಾಗಿದೆ. ಈ ಹೊರೆಯಿಂದ ಮಾತ್ರ ನಾನು ತಪ್ಪಿ ಕೊಳ್ಳ ಬಹುದಾದರೆ ಮಾರ್ಗದಲ್ಲಿ ಏನು ಕಂಡರೂ ಭಯ ಪಡೆನೆಂದು ನೆನಸುತ್ತೇನೆ.

ಲೋ. ಮೊದಲು ಈ ಹೊರೆ ನಿಮಗೆ ಹ್ಯಾಗೆ ಬಂತು?

ಕ್ರಿ. ನನ್ನ ಕೈಯಲ್ಲಿರುವ ಪುಸ್ತಕ ಓದುವಾಗ ಬಂತು.

ಲೋ. ನಾನೂ ಹಾಗೆಯೇ ನೆನಸಿದೆ. ಬುದ್ಧಿಹೀನರು ತಮಗೆ ಅಸಾಧ್ಯವಾದವುಗಳಲ್ಲಿ ಪ್ರಯತ್ನಿಸಿ ಪಕ್ಕನೆ ತೊಂದರೆ ಪಡುವ ಪ್ರಕಾರ ನಿಮಗೂ ಆಯಿತು. ಅಂಥಾ ತೊಂದರೆಗಳು ಮನುಷ್ಯರ ಧೈರ್ಯ ಕೆಡಿಸುವದಲ್ಲದೆ ತಮಗೆ ತಿಳಿಯದವುಗಳನ್ನು ಹೊಂದುವ ಬಗ್ಯೆ ಭಯಂಕರವಾದ ಗಂಡಾಂತರಗಳಲ್ಲಿ ಬೀಳಿಸುತ್ತವೆ ಯೆಂಬುವದು ನಿಮ್ಮಲ್ಲಿ ಪ್ರತ್ಯಕ್ಷವಾಗಿದೆ.

ಕ್ರಿ. ನನಗೆ ಅವಶ್ಯವಾದದ್ದನ್ನು ನಾನು ತಿಳಿಯದವನಲ್ಲ. ನನ್ನ ಭಾರವಾದ ಹೊರೆ ಪರಿಹಾರವಾಗುವದು ಅವಶ್ಯವು.

ಲೋ. ಆದರೆ ಈ ಗಂಡಾಂತರ ಉಳ್ಳ ಮಾರ್ಗದಲ್ಲಿ ನೀವು ಸುಖ ಹುಡುಕುವದು ಯಾಕೆ? ನನ್ನ ಮಾತು ಮಾತ್ರ ತಾಳ್ಮೆಯಿಂದ ಕೇಳಿದರೆ ನೀವು ಅಪೇಕ್ಷಿಸುವ ಸುಖಕ್ಕೆ ಹೋಗುವ ಗಂಡಾಂತರವಿಲ್ಲದ ಮಾರ್ಗ ತೋರಿಸುವೆನು. ಸಹಾಯವು ಸಮೀಪವಾಗಿದೆ. ನಾನು ಹೇಳುವ ಮಾರ್ಗದಲ್ಲಿ ಗಂಡಾಂತರಗಳಿಗೆ ತಪ್ಪಿ ಹೋಗುವದಲ್ಲದೆ ಬಹಳ ಶಾಂತಿಯೂ ಕ್ಷೇಮವೂ ಸ್ನೇಹವೂ ಸಿಕ್ಕ್ಯಾವು.

ಕ್ರಿ. ಐಯ್ಯಾ, ಇದರ ಮರ್ಮ ನನಗೆ ತಿಳಿಸ ಬೇಕು.

ಲೋ. ಅಗೋ ನೇಮಪುರವೆಂಬ ಈಚೆಯ ಊರಿನಲ್ಲಿ ಒಳ್ಳೇ ವಿವೇಕವೂ ಘನವಾದ ಹೆಸರೂ ಉಳ್ಳ ನೇಮಮಹಾಚಾರ್ಯರೆಂಬ ಜಗದ್ಗುರುಗಳು ಇದ್ದಾರೆ. ಅವರಿಗೆ ನಿನ್ನಂಥವರ ಹೊರೆಗಳನ್ನು ತಪ್ಪಿಸುವ ಚಮತ್ಕಾರ ಉಂಟು. ಅವರು ಬಹಳ ಜನರನ್ನು

ತಪ್ಪಿಸಿ ಉಪಕಾರ ಮಾಡಿದ್ದಾರೆಂದು ನಾನು ಬಲ್ಲೆನು. ಅದು ಹೊರ್ತು ಹೊರೆಗೋಸ್ಕರ ತಲೆ ಪಿತ್ತವೇರಿದವರಿಗೆ ಗುಣ ಮಾಡಲಿಕ್ಕೆ ಅವರು ಪ್ರವೀಣರಾಗಿದ್ದಾರೆ. ಅವರ ಹತ್ತಿರ ನೀವು ಹೋದರೆ ಕ್ಷಣದಲ್ಲಿ ಸಹಾಯವಾದೀತು. ಅವರ ಮಠವು ಈ ಸ್ಥಳದಿಂದ ಕೂಗಳತೆ ದೂರ ಅದೆ. ಅವರು ಮಠದಲ್ಲಿ ಇಲ್ಲದಿದ್ದರೂ ಮರಿಯಾದ್ಯಾಚಾರ್ಯರೆಂಬ ಅವರ ಕುಮಾರನು ಇದ್ದಾನೆ. ಇವರು ದಯಾಪೂರಿತವಾದ ಸವಿಮಾತುಳ್ಳವರು. ವೃದ್ಧರಾದ ಗುರುಗಳಿಗೆ ಬರುವ ವಿದ್ಯ ಇವರಿಗೂ ಬರುತ್ತದೆ. ಅಲ್ಲಿಯೇ ನೀವು ಹೊರೆಯಿಂದ ಬಿಡುಗಡೆ ಪಡ ಕೊಳ್ಳ ಬಹುದು. ನಿಮ್ಮ ಮುಂಚಿನ ನಿವಾಸಕ್ಕೆ ತಿರಿಗಿ ಹೋಗ ಮನಸ್ಸಿಲ್ಲದಿದ್ದರೆ ನೀವು ಹೋಗಿರೆಂದು ಹೇಳುವದಕ್ಕೆ ನನಗೂ ಮನಸ್ಸಿಲ್ಲ. ಆದರೆ ಹೆಂಡತಿಯನ್ನೂ ಮಕ್ಕಳನ್ನೂ ಈ ಊರಿಗೆ ಕರೆಸಿ ಈಗ ಬರಿದಾಗಿರುವ ಮನೆಗಳಲ್ಲಿ ಒಂದನ್ನು ಕೊಂಚ ಬಾಡಿಗೆಗೆ ಮಾಡಿ ಕೊಂಡು ಅವರ ಸಂಗಡ ವಾಸಿಸು. ಈ ಊರಿನಲ್ಲಿ ಸಾಮಗ್ರಿ ಸಹ ಅಗ್ಗವಾಗಿಯೂ ಒಳ್ಳೇದಾಗಿಯೂ ಶಿಕ್ಕುವದಲ್ಲದೆ ಒಳ್ಳೇ ನೆರೆಯೂ ಮಾನ ಮರ್ಯಾದೆಯೂ ಶಿಕ್ಕುವದರಿಂದ ಅತಿ ಸೌಖ್ಯವಾಗಿ ಬದುಕ ಬಹುದು.

ಇಷ್ಟೆಲ್ಲಾ ಕೇಳಿದ ಮೇಲೆ ಕ್ರಿಸ್ತಿಯನು ಸ್ವಲ್ಪ ನಿಧಾನಿಸಿ ಈ ದೊಡ್ಡ ಮನುಷ್ಯನು ನನಗೆ ಹೇಳಿದ್ದು ಸತ್ಯವಾದರೆ ಅವನ ಆಲೋಚನೆಯಿಂದ ನಡೆದು ಕೊಳ್ಳುವದೇ ಒಳ್ಳೇದೆಂದು ನೆನಸಿ ಹೇಳಿದ್ದೇನಂದರೆ—

ಕ್ರಿ. ಐಯ್ಯಾ, ಆ ಪುಣ್ಯಾತ್ಮರಾದ ಗುರುಗಳ ಮಠಕ್ಕೆ ಹೋಗುವ ಮಾರ್ಗ ಯಾವದು?

ಲೋ. ಅಗೋ, ಆ ಯೆತ್ತರವಾದ ಗುಡ್ಡವನ್ನು ಕಂಡಿರಾ?

ಕ್ರಿ. ಹೌದು, ಹೌದು, ಕಂಡೆ.

ಲೋ. ಆ ಗುಡ್ಡದ ಬುಡದಲ್ಲೇ ಹೋಗ ಬೇಕು. ನೀವು ಮೊದಲು ಕಾಣುವ ಮಠವು ಅವರದೇ.

ಈ ಮಾತನ್ನು ಕೇಳಿ ಕ್ರಿಸ್ತಿಯನು ತನ್ನ ಮಾರ್ಗ ಬಿಟ್ಟು

ಸಹಾಯ ಹೊಂದುವ ಬಗ್ಯೆ ನೇಮಮಹಾಚಾರ್ಯರ ಮಠಕ್ಕೆ ಹೋಗುತ್ತಿರಲು, ಆ ಗುಡ್ಡಕ್ಕೆ ಸಮೀಪಿಸಿದಾಗ ಅದು ಬಹಳ ಯೆತ್ತರವಾಗಿ ದಾರಿಯ ಮೇಲೆ ಜೊಗ್ಗಿ ಇರುವ ಕಾರಣ ಆ ಗುಡ್ಡವು ತನ್ನ ತಲೆಯ ಮೇಲೆ ಬಿದ್ದೀತೆಂಬ ಭಯದಿಂದ ಕಂಗೆಟ್ಟು ನಿಂತನು. ಅವನ ಹೊರೆ ಸಹ ಹಿಂದಿನ ದಾರಿಯಲ್ಲಿ ಇದ್ದದಕ್ಕಿಂತ ಹೆಚ್ಚು ಭಾರವಾಗಿ ತೋಚಿತು. ಆ ಗುಡ್ಡದೊಳಗಿಂದ ಸಿಡಿಲುಗಳು ಹೊರಡುವದರಿಂದ ಕ್ರಿಸ್ತಿಯನು ತಾನು ಸುಡಲ್ಪಡುವೆನೆಂಬ ಭಯದಿಂದ ಬೆವರಿ, ಲೋಕ ಮತ್ಯಾಚಾರ್ಯನ ಆಲೋಚನೆಯಿಂದ ತಾನು ನಡೆದದಕ್ಕೋಸ್ಕರ ಪಶ್ಚಾತ್ತಾಪ ಪಡುತ್ತಿರುವಾಗ ತನಗೆ ಎದುರಾಗಿ ಬರುವ ಸುವಾರ್ತಿಕನನ್ನು ನೋಡಿ ನಾಚಿಕೆಯಿಂದ ಕಳೆ ಗುಂದಿದನು. ಅಷ್ಟರೊಳಗೆ ಸುವಾರ್ತಿಕನು ಬರ ಬರ ಸಮೀಪಿಸಿ ಅವನ ಹತ್ತಿರ ಬಂದು ಕ್ರೂರ ದೃಷ್ಟಿಯಿಂದಲೂ ಶಿಟ್ಟಿನಿಂದಲೂ ಅವನನ್ನು ನೋಡಿ, ಏನಯ್ಯಾ ನೀವು ಇಲ್ಲಿ ಬಂದದ್ದೇನೆಂದು ಹೇಳಿದ ಮಾತಿಗೆ ಕ್ರಿಸ್ತಿಯನು ಉತ್ತರ ತಿಳಿಯದೆ ಸುಮ್ಮನಿರಲು, ಸುವಾರ್ತಿಕನು ತಿರಿಗಿ—ನಾಶನಪುರದ ಗೋಡೆಗಳ ಹೊರಗೆ ಅಳುತ್ತಾ ಇದ್ದವರು ನೀವೇ ಅಲ್ಲವೋ? ಅಂದನು.

ಕ್ರಿ. ಹೌದಯ್ಯಾ, ಆ ಮನುಷ್ಯನು ನಾನೇ.

ಸು. ಆ ಸಣ್ಣ ಬಾಗಲಿನ ಮಾರ್ಗವನ್ನು ನಾನು ನಿಮಗೆ ತೋರಿಸಿದೆನಲ್ಲವೋ?

ಕ್ರಿ. ತೋರಿಸಿದಿರಿ. ಅಯ್ಯಾ.

ಸು. ಹಾಗಾದರೆ ನೀವು ಇಷ್ಟು ಬೇಗ ಆ ಮಾರ್ಗ ಬಿಟ್ಟು ಯಾಕೆ ವಾರೆ ಹೋದಿರಿ? ಇದು ಬೇರೆ ಮಾರ್ಗವಲ್ಲವೋ?

ಕ್ರಿ. ನಾನು ಅಧೈರ್ಯದ ಹುದಿಲನ್ನು ದಾಟಿದಾಗಲೇ ಒಬ್ಬ ಆಚಾರ್ಯರನ್ನು ಕಂಡೆನು. ಅವರು ನನ್ನ ಮುಂದೆ ಇರುವ ಊರಿನಲ್ಲಿ ನನ್ನ ಹೊರೆ ಇಳಿಸುವವರು ಶಿಕ್ಕುವರೆಂದು ನನಗೆ ಹೇಳಿದರು.

ಸು. ಅವನ್ಯಾರು?

ಕ್ರಿ. ಯಾರೋ ಒಬ್ಬ ಆಚಾರ್ಯರು. ಅವರು ಬಹಳ ಹೇ

ಳಿ ನನ್ನನ್ನು ನಂಬಿಸಿದರು. ಈ ಪ್ರಕಾರ ನಾನು ಇತ್ತಲಾಗಿ ಬಂದು ಈ ಗುಡ್ಡವನ್ನೂ ಅದು ಮಾರ್ಗದ ಮೇಲೆ ಬೊಗ್ಗಿ ಇರುವದನ್ನೂ ನೋಡಿ, ಅದು ನನ್ನ ತಲೆಯ ಮೇಲೆ ಬಿದ್ದೀತೆಂಬ ಭಯದಿಂದ ನಿಂತೆನು.

ಸು. ಆ ಆಚಾರ್ಯನು ನಿಮಗೆ ಏನು ಹೇಳಿದನು?

ಕ್ರಿ. ನೀವು ಎಲ್ಲಿ ಹೋಗುತ್ತೀರಿ? ಎಂದು ಅವರು ಕೇಳಿದಾಗ, ನಾನು ಹೋಗುವದನ್ನು ಹೇಳಿದೆನು.

ಸು. ಅವನು ಮತ್ತೇನು ಹೇಳಿದನು?

ಕ್ರಿ. ಸಂಸಾರವುಂಟೋ? ಎಂದು ಕೇಳಿದರು. ನಾನು ಹೌದು, ಆದರೆ ಈ ಹೊರೆಯ ಭಾರಕ್ಕೋಸ್ಕರ ಅವರ ಮೇಲೆ ಮುಂಚಿನಷ್ಟು ಆನಂದ ಪಡುವದಿಲ್ಲವೆಂದು ಹೇಳಿದೆನು.

ಸು. ಮತ್ತೇನು ಹೇಳಿದನು?

ಕ್ರಿ. ನನ್ನ ಹೊರೆಯಿಂದ ಬೇಗ ಬಿಡಿಸಿ ಕೊಳ್ಳ ಬೇಕೆಂದು ಹೇಳಿದರು. ಅದಕ್ಕೆ ನಾನು, ಬಿಡಿಸಿ ಕೊಳ್ಳುವದೇ ನನಗೆ ಅವಶ್ಯ. ಬಿಡಿಸಿ ಕೊಳ್ಳುವ ಸ್ಥಳಕ್ಕೆ ಶೇರುವದು ಹ್ಯಾಗಾದೀತೆಂದು ತಿಳುಕೊಳ್ಳುವದಕ್ಕೆ ಆ ಬಾಗಲಿನ ಹತ್ತರ ಹೋಗುತ್ತೇನಂದೆನು. ಹಾಗಾದರೆ, ನೀವು ನನಗೆ ತೋರಿಸಿದ ಮಾರ್ಗಕ್ಕಿಂತ ಸಮೀಪ ಒಳ್ಳೇ ಸುಲಭವಾದ ಮಾರ್ಗ ತೋರಿಸಿ, ಈ ಮಾರ್ಗದಿಂದ ಹೋದರೆ ನಿಮ್ಮಂಥವರ ಹೊರೆಗಳನ್ನು ತಪ್ಪಿಸುವದರಲ್ಲಿ ಚಮತ್ಕಾರ ಉಳ್ಳ ಗುರುಗಳ ಮಠಕ್ಕೆ ಶೇರುವಿ, ಅಂದರು. ನಾನು ಅವರ ಮಾತನ್ನು ನಂಬಿ ನನ್ನ ಹೊರೆಯು ಪರಿಹರವಾದೀತೆಂಬ ಆಶೆಯಿಂದ ಆ ಮಾರ್ಗವನ್ನು ಬಿಟ್ಟು ಇದರಲ್ಲಿ ಶೇರಿದೆನು. ಕಡೆಗೆ ಈ ಸ್ಥಳಕ್ಕೆ ಬಂದು, ಇದರ ರೀತಿಯನ್ನು ನೋಡಿ, ಭಯ ಪಟ್ಟು ನಿಂತೆನು. ಈಗ ಏನು ಮಾಡ ಬೇಕೆಂದು ತಿಳಿಯುವದಿಲ್ಲ.

ಸು. ಸ್ವಲ್ಪ ನಿಲ್ಲಿರಿ. ದೇವರ ವಾಕ್ಯಗಳನ್ನು ನಿಮಗೆ ತೋರಿಸುತ್ತೇನೆ.

ಕ್ರಿಸ್ತಿಯನು ನಡುಗುತ್ತಾ ನಿಂತಿರಲು, ಸುವಾರ್ತಿಕನು ಹೇ

ಳಿದ್ದೇನಂದರೆ, ಆ ಮಾತಾಡುವವನನ್ನು ಅಸಡ್ಡೆ ಮಾಡದ ಹಾಗೆ ನೋಡಿ ಕೊಳ್ಳಿರಿ, ಯಾಕಂದರೆ ಭೂಮಿಯ ಮೇಲೆ ದೈವ ಚಿತ್ತವನ್ನು ತಿಳಿಸಿದವನನ್ನು ಅಸಡ್ಡೆ ಮಾಡಿದವರು ತಪ್ಪಿಸಿ ಕೊಳ್ಳದಿದ್ದರೆ ಬಹು ಅಧಿಕವಾಗಿ ಪರಲೋಕದಿಂದ ಬಂದವನನ್ನು ಬಿಟ್ಟು ತಿರುಗುವ ನಾವು. ಇಬ್ರಿ. ೧೨, ೨೫. ಮತ್ತು ಹೇಳಿದ್ದು— ನೀತಿವಂತನು ವಿಶ್ವಾಸದಿಂದ ಬದುಕುವನು. ಆದರೆ ಹಿಂಜರಿಯುವವನಲ್ಲಿ ನನ್ನ ಆತ್ಮವು ಸಂತೋಷ ಪಡುವದಿಲ್ಲ. ಇಬ್ರಿ. ೧೦, ೩೮.

ಇಷ್ಟು ಹೇಳಿದ ಮೇಲೆ ಸುವಾರ್ತಿಕನು ವಿವರಿಸಿ ಬುದ್ಧಿ ಹೇಳಿದ್ದು ಹ್ಯಾಗಂದರೆ, ಈ ಸಂಕಟದಲ್ಲಿ ಬಿದ್ದ ಮನುಷ್ಯನು ನೀವೇ. ನೀವು ಪರಾತ್ಪರನ ಆಲೋಚನೆಯನ್ನು ತಿರಸ್ಕರಿಸಲಿಕ್ಕೂ ನಿಮ್ಮ ಕಾಲು ಸಮಾಧಾನದ ಹಾದಿಯಿಂದ ಹಿಂದಿರುಗಿಸುವದಕ್ಕೂ ಆರಂಭ ಮಾಡಿ ನಾಶನದ ಗಂಡಾಂತರದಲ್ಲಿ ಬಿದ್ದಿರಿ.

ಇದನ್ನು ಕೇಳಿ ಕ್ರಿಸ್ತಿಯನು— ಐಯ್ಯೋ! ನಾನು ಕೆಟ್ಟೆನೆಂದು ಕೂಗಿ, ಸತ್ತವನ ಹಾಗೆ ಸುವಾರ್ತಿಕನ ಕಾಲುಗಳ ಮೇಲೆ ಬಿದ್ದನು. ಸುವಾರ್ತಿಕನು ಅದನ್ನು ನೋಡಿ, ಅವನ ಬಲಗೈ ಹಿಡಿದು, ಸಮಸ್ತ ಪಾಪವೂ ದೂಷಣೆಯೂ ಮನುಷ್ಯರಿಗೆ ಮನ್ನಿಸಲ್ಪಡುವು; (ಮತ್ತಾ. ೧೨, ೩೧.) ಅವಿಶ್ವಾಸಿಯಾಗಿರದೆ ವಿಶ್ವಾಸಿಯಾಗಿರು (ಯೋಹಾನ್. ೨೦. ೨೭.) ಅಂದನು. ಆಗಲು ಕ್ರಿಸ್ತಿಯನು ಸ್ವಲ್ಪ ಸಂಪ್ರಾಣಿಸಿ ಮೊದಲಿನ ಹಾಗೆ ನಡುಗುತ್ತಾ ಸುವಾರ್ತಿಕನ ಮುಂದೆ ನಿಂತನು.

ಆ ಮೇಲೆ ಸುವಾರ್ತಿಕನು— ನಾನು ನಿಮಗೆ ಹೇಳುವ ಕಾರ್ಯಗಳಿಗೆ ಅತಿಜಾಗ್ರತೆ ಪಡ ಬೇಕು ಎಂದು ಹೇಳಿ, ಅವನಿಗೆ ತಿಳಿಸಿದ್ದೇನಂದರೆ, ನಿಮಗೆ ಯೆದುರಾಗಿ ಬಂದ ಮನುಷ್ಯನ ಹೆಸರು ಲೋಕಮತ್ಯಾಚಾರ್ಯ. ಹೆಸರಿನ ಪ್ರಕಾರವೇ ಅವನ ಗುಣವು. ಯಾಕಂದರೆ ಅವನಲ್ಲಿ ಈ ಲೋಕದ ಬೋಧನೆ ಮಾತ್ರ ರುಚಿಯಾಗಿದೆ. ಅವನು ಯಾವಾಗಲೂ ನೇಮಪುರವೆಂಬ ಪಟ್ಟಣದಲ್ಲಿ ಆಗುವ ಪ್ರಸಂಗಗಳನ್ನು ಕೇಳಲಿಕ್ಕೆ ಹೋಗುತ್ತಾನೆ. ಈ ಲೋಕದ ಬೋ

ಧನೆಯಲ್ಲಿ ಶಿಲುಬೆಯ ಅನುಭವವು ಇಲ್ಲದ ಕಾರಣ ಅದೇ ಅವನಿಗೆ ಇಷ್ಟವು. ಈ ಪ್ರಕಾರ ಅವನು ಮಾಂಸಗುಣ ಉಳ್ಳವನಾದದರಿಂದ ಸರಿಯಾದ ನನ್ನ ಮಾರ್ಗಗಳಿಗೆ ಅಡ್ಡಿ ಮಾಡಲಿಕ್ಕೆ ನೋಡುತ್ತಾನೆ. ಈ ಮನುಷ್ಯನ ಬೋಧನೆಯಲ್ಲಿ ನೀವು ಪೂರ್ಣವಾಗಿ ಅಸಹಿಸ ತಕ್ಕ ಮೂರು ಕಾರ್ಯಗಳವೆ.

ಮೊದಲನೇದು. ಸನ್ಮಾರ್ಗ ಹಾನಿಯು.

ಯೆರಡನೇದು. ಶಿಲುಬೆಗೆ ಹಗೆ ಮಾಡ ಬೇಕೆಂಬ ಉಪದೇಶವು.

ಮೂರನೇದು. ಮರಣದ ಸೇವೆಯಲ್ಲಿ ಶೇರಿಸುವ ಮಾರ್ಗದ ಪ್ರವೇಶವು.

ಮೊದಲನೇದು. ಅವನು ನಿಮ್ಮನ್ನು ಮಾರ್ಗದಿಂದ ತೊಲಗಿಸಿದ್ದಕ್ಕೂ ನೀವು ಸಮ್ಮತಿಸಿದಕ್ಕೂ ಅಸಹ್ಯ ಪಡ ಬೇಕು. ಯಾಕಂದರೆ, ಲೋಕಮತ್ಯಾಚಾರ್ಯನ ಆಲೋಚನೆಗೋಸ್ಕರ ದೇವರ ಆಲೋಚನೆಯನ್ನು ನೀವು ತಿರಸ್ಕರಿಸಿದ ಹಾಗಾಯಿತು. ಇಕ್ಕಟ್ಟಾದ ಬಾಗಲಿಂದ ಪ್ರವೇಶಿಸುವದಕ್ಕೆ ಹೋರಾಡಿರಿ, (ಲೂಕ ೧೩. ೨೪.) ಯಾಕಂದರೆ, ಜೀವಕ್ಕೆ ಹೋಗುವ ಬಾಗಲು ಇಕ್ಕಟ್ಟು ಅದನ್ನು ಕಂಡು ಕೊಳ್ಳುವರು ಕೊಂಚಜನವೆಂದು ಕರ್ತನು ಹೇಳುತ್ತಾನೆ. (ಮತ್ತಾ. ೭; ೧೩. ೧೪.) ನಾನು ನಿಮಗೆ ಹೋಗಿರಿ ಎಂದು ಹೇಳಿದ ಬಾಗಲು ಇದೇ. ಈ ಇಕ್ಕಟ್ಟಾದ ಬಾಗಲಿನಿಂದಲೂ ಅದರ ಮಾರ್ಗದಿಂದಲೂ ಆ ದುಷ್ಟನು ನಿಮ್ಮನ್ನು ತಿರುಗಿಸಿ, ನಾಶನಕ್ಕೆ ಸಮೀಪ ಬರ ಮಾಡಿದ್ದಾನೆ. ಆದಕಾರಣ ಅವನು ನಿಮ್ಮನ್ನು ತೊಲಗಿಸಿದ್ದಕ್ಕೂ, ನೀವು ಕಿವಿಗೊಟ್ಟದ್ದಕ್ಕೂ, ಅಸಹ್ಯ ಪಡ ಬೇಕು.

ಯೆರಡನೇದು. ಶಿಲುಬೆಯನ್ನು ಹೇಸ ಬೇಕೆಂಬ ಬೋಧನೆಗೆ ಅಸಹ್ಯ ಪಡ ಬೇಕು. ಯಾಕಂದರೆ, ಐಗುಪ್ತದಲ್ಲಿರುವ ದ್ರವ್ಯಗಳಿಗಿಂತ ಕ್ರಿಸ್ತನ ನಿಂದೆಯು ಅಧಿಕ ಐಶ್ವರ್ಯವೆಂದು ಯೆಣಿಸ ತಕ್ಕದ್ದು. (ಇಬ್ರೀ. ೧೧; ೨೫. ೨೬.) ಇದಲ್ಲದೆ ತನ್ನ ಜೀವವನ್ನು ತಪ್ಪಿಸಿ ಕೊಳ್ಳ ನೋಡುವವನು ಅದನ್ನು ಕಳಕೊಳ್ಳುವನೆಂದೂ, ತಂದೆ ತಾಯಿ ಹೆಂಡರು ಮಕ್ಕಳು ಅಣ್ಣ ತಮ್ಮಂದಿರು ಮೊದಲಾದ

ವರನ್ನೂ ತನ್ನ ಜೀವವನ್ನೂ ಸಹಾ ಹಗೆ ಮಾಡದವನು ನನ್ನ ಶಿಷ್ಯನಾಗಲಾರನೆಂದೂ, ಮಹತ್ತ್ವದ ಅರಸನ ಮಾತು ಉಂಟು. (ಮಾರ್ಕ. ೮, ೩೮. ಯೋಹಾ. ೧೨, ೨೫. ಮತ್ತಾ. ೧೦, ೩೯. ಲೂಕ. ೧೪, ೨೬.) ಹಾಗಾದರೆ ಯಾವದರ ಹೊರ್ತಾಗಿ ನಿತ್ಯಜೀವವು ನಿಮಗೆ ಶಿಕ್ಕಲಾರದೋ ಅದೇ ನಿಮ್ಮ ಮರಣಕ್ಕಾದೀತೆಂದು ಹೇಳುವವನ ಬುದ್ಧಿಯು ನಿಮಗೆ ಅಸಂಹ್ಯವಾಗಿರ ಬೇಕು.

ಮೂರನೇದು. ಅವನು ನಿಮ್ಮ ಹೆಜ್ಜೆಗಳನ್ನು ಮರಣದ ಸೇವೆಗೆ ನಡಿಸುವ ಮಾರ್ಗದಲ್ಲಿ ಇಡಿಸಿದಕ್ಕೆ ನೀವು ಅಸಂಹ್ಯ ಪಡಬೇಕು. ಇದನ್ನು ತಿಳುಕೊಳ್ಳುವ ಬಗ್ಯೆ ಆ ಲೋಕಮತ್ಯಾಚಾರ್ಯನು ನೀವು ಯಾವ ಮನುಷ್ಯನ ಬಳಿಗೆ ಹೋಗ ಬೇಕೆಂದು ಹೇಳಿದನೋ ಅವನು ಯೆಂಥವನೆಂದೂ, ಹ್ಯಾಗೆ ನಿಮ್ಮ ಹೊರೆ ತಪ್ಪಿಸಲಾರನೆಂದೂ, ನೀವು ಆಲೋಚಿಸ ಬೇಕು.

ಹೊರೆ ಬಿಡಿಸುವದಕ್ಕೆ ನೀವು ಹುಡುಕಿದ ಮನುಷ್ಯನಿಗೆ ನೇಮಮಹಾಚಾರ್ಯನೆಂಬ ಹೆಸರುಂಟು. ಅವನು, ಮಕ್ಕಳು ಸಹಿತವಾಗಿ, ದಾಸತ್ವದಲ್ಲಿರುವ ದಾಸಿಯ ಮಗನಾಗಿದ್ದಾನೆ. (ಗಲಾತ್ಯ. ೪; ೨೧. ೨೬.) ಆ ದಾಸಿಯು ಒಳ ಅರ್ಥದ ಪ್ರಕಾರ ಸೀನಾಯಿಪರ್ವತಕ್ಕೆ ಸರಿಯಾಗಿದ್ದಾಳೆ. ತಲೆಯ ಮೇಲೆ ಬೀಳುವದೆಂದು ನೀವು ಭಯ ಪಟ್ಟ ಪರ್ವತವು ಅದೇ. ಹಾಗಾದರೆ ಆ ದಾಸಿಯೂ ಅವಳ ಮಕ್ಕಳೂ ದಾಸತ್ವದಲ್ಲಿ ಇದ್ದರೆ ಅವರ ಮುಖಾಂತರವಾಗಿ ಬಿಡುಗಡೆಯಾಗುವೆನೆಂದು ನೀವು ಕೋರುವದು ಹ್ಯಾಗೆ? ಆ ನೇಮಮಹಾಚಾರ್ಯನು ಹ್ಯಾಗೂ ನಿಮ್ಮ ಹೊರೆಯನ್ನು ಪರಿಹರಿಸಲಾರನು. ಅವನು ಯಾರ ಹೊರೆಯನ್ನಾದರೂ ಎಂದೂ ಪರಿಹರಿಸಲಿಲ್ಲ. ಇನ್ನು ಮೇಲೆಯೂ ಪರಿಹರಿಸುವ ಹಾಗಿಲ್ಲ, ನ್ಯಾಯಪ್ರಮಾಣದ ಕ್ರಿಯೆಗಳಿಂದ ನೀತಿಯುಂಟಾಗದು. ಹೀಗಾದರೆ, ಯಾವ ಮನುಷ್ಯನಾದರೂ ನ್ಯಾಯಪ್ರಮಾಣದ ಕ್ರಿಯೆಗಳಿಂದ ತನ್ನ ಹೊರೆಯನ್ನು ಬಿಡಿಸಿ ಕೊಳ್ಳಲಾರನು. ಹೀಗಿರುವದರಿಂದ ಲೋಕಮತ್ಯಾಚಾರ್ಯನು ಫಟಿಂಗನು. ನೇಮಮಹಾಚಾರ್ಯನು

ಮೋಸಗಾರನು. ಅವನ ಮಗನಾದ ಮರಿಯಾದ್ಯಾಚಾರ್ಯನು ನಗೆ ಮುಖ ತೋರಿಸಿದಾಗ್ಯೂ ವಂಚಕನು. ಅವನು ನಿಮಗೆ ಸಹಾಯ ಮಾಡಲಾರನು. ಈ ಮೂಢರು ಮಾಡಿದ ಗುಲ್ಲು, ನಾನು ನಿಮಗೆ ತೋರಿಸಿದ ಮಾರ್ಗದಿಂದ ನಿಮ್ಮನ್ನು ತಿರುಗಿಸಿ ನಿಮ್ಮ ರಕ್ಷಣೆಯನ್ನು ಮೋಸದಿಂದ ಅಪಹರಿಸುವದನ್ನಲ್ಲದೆ ಮತ್ತ್ಯಾವದಕ್ಕೂ ಉಂಟಾಗಲಿಲ್ಲವೆಂದು ನಂಬ ಬಹುದು.

ಇಷ್ಟು ಹೇಳಿದ ಮೇಲೆ ಸುವಾರ್ತಿಕನು ಆಕಾಶವನ್ನು ನೋಡಿ, ತಾನು ಹೇಳಿದಕ್ಕೆ ದೃಷ್ಟಾಂತವಾಗ ಬೇಕೆಂದು ಬೇಡಿ ಕೊಳ್ಳಲು, ಕ್ರಿಸ್ತಿಯನ ಮೇಲೆ ಬೊಗ್ಗಿರುವ ಗುಡ್ಡದೊಳಗಿಂದ ವಾಕ್ಯಗಳೂ ಸಿಡಿಲುಗಳೂ ಹೊರಟು ಅವನಿಗೆ ನಿಲುಗೂದಲು ಉಂಟಾಗುವ ಹಾಗೆ ಮಾಡಿದವು. ಆ ವಾಕ್ಯಗಳ ತಾತ್ಪರ್ಯವೇನಂದರೆ, ನಿಶ್ಚಯವಾಗಿ ನ್ಯಾಯಪ್ರಮಾಣದ ಕ್ರಿಯೆಗಳವರಷ್ಟೂ ಶಾಪಕ್ಕೊಳಗಾಗಿದ್ದಾರೆ. ನ್ಯಾಯಪ್ರಮಾಣದ ಪುಸ್ತಕದಲ್ಲಿ ಬರೆದ ಎಲ್ಲವುಗಳಲ್ಲಿ, ಅವುಗಳನ್ನು ಮಾಡುವ ಹಾಗೆ, ನೆಲೆಯಾಗಿರದೆ ಇರುವ ಯಾವನಾದರೂ ಶಾಪಗ್ರಸ್ತನು.

ಆಗಲು ಕ್ರಿಸ್ತಿಯನು ತನಗೆ ಮರಣವೇ ಪ್ರಾಪ್ತಿ ಎಂದು ಬಿಕ್ಕಿ ಬಿಕ್ಕಿ ಅಳುತ್ತಾ, ಆ ಲೋಕಮತ್ಯಾಚಾರ್ಯನನ್ನು ಕಂಡ ಹೊತ್ತು ಎಂಥಾದೋ ಅನ್ನುತ್ತಾ, ಅವನ ಆಲೋಚನೆಯನ್ನು ಕೇಳಿ ಇರುವಾಗ ಹುಚ್ಚನಾದೆ ಅನ್ನುತ್ತಾ, ಆ ಆಚಾರ್ಯರ ಮಾಂಸಭಾವವಾದ ಬೋಧನೆಗಳಿಂದ ತಾನು ಮೋಸಗೊಂಡು ಸತ್ಯ ಮಾರ್ಗವನ್ನು ಬಿಟ್ಟದಕ್ಕೋಸ್ಕರ ಬಹಳ ನಾಚಿಕೆ ಪಟ್ಟನು. ತರುವಾಯ ಅವನು ಸುವಾರ್ತಿಕನಿಗೆ ಮಾಡಿದ ವಿಜ್ಞಾಪನೆ ಏನಂದರೆ—

ಕ್ರಿ. ಏನ್ಯೈಯಾ, ನನಗೇನಾದರೂ ಗತಿ ಉಂಟೋ? ಈಗ ತಿರಿಗಿ ಆ ಇಕ್ಕಟ್ಟಿನ ಬಾಗಲಿಗೆ ಹೋಗ ಬಹುದೋ? ಅಲ್ಲಿ ಹೋದರೆ, ಈ ಕರ್ಮಕ್ಕೋಸ್ಕರ ತಳ್ಳಲ್ಪಟ್ಟವನಾಗಿ ನಾಚಿಕೆ ಪಟ್ಟೇನೋ; ಆ ಮನುಷ್ಯನ ಆಲೋಚನೆಗೆ ನಾನು ಕಿವಿಗೊಟ್ಟದದರಿಂದ ದುಃಖ ಪಡುತ್ತೇನೆ. ಆದರೆ ನನ್ನ ಪಾಪವು ಮನ್ನಿಸ ತಕ್ಕದ್ದೋ? ಅಂದನು.

ಸು. ನಿಮ್ಮ ಪಾಪವು ದೊಡ್ಡದು, ಹೌದು. ಯಾಕಂದರೆ, ನೀವು ಎರಡು ಅಪರಾಧಗಳನ್ನು ಮಾಡಿದಿರಿ. ಒಳ್ಳೇ ಮಾರ್ಗದಿಂದ ತೊಲಗಿದ್ದಲ್ಲದೆ, ತಡೆಯಾದ ಹಾದಿಗಳಲ್ಲಿ ಶೇರಿದಿರಿ. ಆದಾಗ್ಯೂ ಆ ಬಾಗಲಿನ ಹತ್ತರ ಇರುವ ಮನುಷ್ಯನು ನಿಮ್ಮನ್ನು ಶೇರಿಸಿ ಕೊಳ್ಳುವನು. ಯಾಕಂದರೆ, ಆತನು ಮನುಷ್ಯರ ಮೇಲೆ ಸುಚಿತ್ತವಾಗಿದ್ದಾನೆ. ಇನ್ನು ಮೇಲೆ ಮಾತ್ರ ನೀವು ಮಾರ್ಗದಿಂದ ತೊಲಗದ ಹಾಗೆ ಜಾಗ್ರತೆಯಾಗಿರಿ. ಇಲ್ಲವಾದರೆ ಆತನ ಕೋಪವು ಸ್ವಲ್ಪ ಉರಿದಾಗ ಮಾರ್ಗದಲ್ಲಿ ನಶಿದು ಹೋಗುವದಾದೀತು.

ತರುವಾಯ ಕ್ರಿಸ್ತಿಯನು ತಿರಿಗಿ ಹೋಗಲಿಕ್ಕಿದ್ದಾಗ, ಸುವಾರ್ತಿಕನು ಅವನಿಗೆ ಹಸನ್ಮುಖದಿಂದ ಮುದ್ದಿಟ್ಟು, ದೇವರು ಸೌಖ್ಯ ಮಾಡಲಿ ಎಂದು ಹೇಳಿದನು. ಆ ಮೇಲೆ ಕ್ರಿಸ್ತಿಯನು ಬೇಗ ಹೋಗಿ ಮಾರ್ಗದಲ್ಲಿ ಯಾರ ಸಂಗಡಲೂ ಮಾತಾಡಲಿಲ್ಲ. ಕೇಳಿದವರಿಗೆ ಉತ್ತರ ಕೊಡಲಿಕ್ಕೆ ಮನಸ್ಸಿರಲಿಲ್ಲ. ಲೋಕಮತ್ಯಾಚಾರ್ಯನು ಹೇಳಿದ ಆಲೋಚನೆಯಿಂದ ಬಿಟ್ಟ ಮಾರ್ಗದಲ್ಲಿ ಅವನು ತಿರಿಗಿ ಶೇರುವ ತನಕ, ಪೂರ್ಣ ಕ್ಷೇಮವಿಲ್ಲದೆ ತಡೆಯಾದ ಸ್ಥಳದಲ್ಲಿ ಸಂಚರಿಸುವವನ ಹಾಗಿದ್ದನು.

---

## 4. The Wicket gate.

## ೪. ಇಕ್ಕಟ್ಟಿನ ಬಾಗಲು.

---

ಈ ಪ್ರಕಾರ ಪಯಣ ಗತಿಯಿಂದ ಕ್ರಿಸ್ತಿಯನು ಬಾಗಲಿನ ಹತ್ತರ ಬಂದನು. ಆ ಬಾಗಲಿನ ಮೇಲೆ ಬರೆದದ್ದೇನಂದರೆ— ತಟ್ಟು ಆಗಲು ನಿನಗೆ ತೆರೆಯಲ್ಪಡುವದು. ಆದಕಾರಣ ಅವನು ಕೆಲವು ಸಾರಿ ತಟ್ಟಿ ಹೇಳಿದ್ದೇನಂದರೆ,

ಶೇರಲು ಬಹುದೋ ಇದರೊಳು ಕಾವಲಿ
ಗಾರನೆ ತೆರದೊಡೆ ನೀನೆನಗೆ
ಮೀರಿದ ಪಾಪಿಗೆ ನಿತ್ಯವು ಸ್ತೋತ್ರವ
ಸಾರುತ ಪಾಡುವೆನುನ್ನತದಿ.

ಸ್ವಲ್ಪ ಹೊತ್ತಾದ ಮೇಲೆ ಸುಚಿತ್ತನೆಂಬ ಒಬ್ಬ ಘನ ಮನುಷ್ಯನು ಬಾಗಲಿಗೆ ಬಂದು, ಯಾರು? ಎಲ್ಲಿಂದ ಬಂದಿರಿ? ಏನು ಬೇಕು? ಎಂದು ಕೇಳಿದನು.

ಕ್ರಿ. ಕ್ರಿಸ್ತಿಯನು ಹೇಳಿದ್ದು—ಹೊರೆ ಹೊತ್ತ ಬಡ ಪಾಪಿಯಾದ ನಾನು ನಾಶನಪುರದಿಂದ ಹೊರಟು ಮುಂದೆ ಬರುವ ಕೋಪಕ್ಕೆ ತಪ್ಪಿಸಿ ಕೊಳ್ಳುವ ಆಲೋಚನೆಯಿಂದ ದೇವರ ಚಿಯೋನೆಂಬ ಪಟ್ಣಕ್ಕೆ ಹೋಗುವವನಾಗಿದ್ದೇನೆ. ಅಲ್ಲಿ ಹೋಗುವ ಮಾರ್ಗವು ಇದೇ ಎಂದು ನಾನು ತಿಳಿದದರಿಂದ ನನ್ನನ್ನು ಒಳಗೆ ಹೋಗಗೊಡಿಸುವಿರೋ? ಎಂದು ಬಾಗಲು ತಟ್ಟಿದೆನು.

ಸುಚಿ. ಮನಃಪೂರ್ವಕವಾಗಿ ಬರ ಗೊಡಿಸುತ್ತೇನೆಂದು ಹೇಳಿ ಬಾಗಲ ತೆರದನು.

ಕ್ರಿ. ಕ್ರಿಸ್ತಿಯನು ಒಳಗೆ ಹೋಗುವಷ್ಟರಲ್ಲಿ ಸುಚಿತ್ತನು ಕೈ ಹಿಡಿದು ಥಟ್ಟನೆ ಎಳೆ ಕೊಂಡದರಿಂದ ಕ್ರಿಸ್ತಿಯನು ಅದ್ಯಾಕೆಂದು ಕೇಳಿದ್ದಕ್ಕೆ, ಅವನು ಹೇಳಿದ್ದೇನಂದರೆ—ಈ ಬಾಗಲಿಗೆ ಸ್ವಲ್ಪ ದೂರ ಬಂದು ಬಲವಾದ ಕೋಟೆ ಅದೆ. ಅದರ ಅಧಿಪತಿಯು ಸೈತಾನನು. ಅವನೂ ಅವನ ಸಂಗಡ ಇರುವವರೂ ಈ ಬಾಗಲಿನ ಹತ್ತರ ಬರುವವರು ಶೇರುವ ಮುಂಚೆ ಅವರನ್ನು ಕೊಂದು ಹಾಕ ಬೇಕೆಂಬ ಆಲೋಚನೆಯಿಂದ ಅಂಬುಗಳನ್ನು ಎಸೆಯುತ್ತಾರೆ, ಅಂದನು. ಈ ಮಾತುಗಳನ್ನು ಕೇಳಿ ಕ್ರಿಸ್ತಿಯನು ನಾನು ನಡುಗುತ್ತಲೇ ಸಂತೋಷಿಸುತ್ತೇನಂದನು. ಅವನು ಒಳಗೆ ಪ್ರವೇಶಿಸಿದ ಮೇಲೆ ಆ ಬಾಗಲಿನವನು ಇಲ್ಲಿ ಬರ ಬೇಕೆಂದು ನಿಮಗೆ ಹೇಳಿದವರು ಯಾರೆಂದು ಕೇಳಿದನು.

ಕ್ರಿ. ಇಲ್ಲಿ ಬಂದು ತಟ್ಟ ಬೇಕೆಂದು ಸುವಾರ್ತಿಕನು ನನಗೆ ಹೇಳಿದದರಿಂದ ನಾನು ಆ ಪ್ರಕಾರ ಮಾಡಿದ್ದೇನೆ; ಮತ್ತು ನಾನು ಮಾಡ ತಕ್ಕದ್ದನ್ನು ನೀವು ಹೇಳುವಿರಿ, ಅಂದನು.

ಸು ಚಿ. ನಿಮ್ಮ ಮುಂದೆ ತೆರದ ಬಾಗಲು ಅದೆ, ಅದನ್ನು ಯಾರೂ ಮುಚ್ಚ ಲಾರರು.

ಕ್ರಿ. ಹಾಗಾದರೆ ನಾನು ಪಟ್ಟ ಕಷ್ಟಗಳಿಗೆ ಫಲ ಪ್ರಾಪ್ತಿಯಾಗುವದಕ್ಕೆ ಆರಂಭವಾಯಿತು.

ಸು ಚಿ. ಆದರೆ ನೀವು ಒಬ್ಬರೇ ಯಾಕೆ ಬಂದಿರಿ?

ಕ್ರಿ. ನಾನು ತಿಳಿದ ಹಾಗೆ ಮುಂದಿನ ಕಷ್ಟಗಳನ್ನು ನೆರೆಯವರಲ್ಲಿ ಒಬ್ಬನೂ ತಿಳಿಯಲಿಲ್ಲ.

ಸು ಚಿ. ನೀವು ಹೊರಟದ್ದು ಅವರು ತಿಳಿಯಲಿಲ್ಲವೋ?

ಕ್ರಿ. ತಿಳಿದರು. ಹೌದು, ಆರಂಭದಲ್ಲಿಯೇ ನನ್ನ ಹೆಂಡತಿಗೂ ಮಕ್ಕಳಿಗೂ ತಿಳಿದಿತ್ತು, ತಿರಿಗಿ ಬರ ಬೇಕೆಂದು ಅವರು ನನ್ನ ಹಿಂದಗಡೆ ಕೂಗಿದರು. ನೆರೆಯವರಲ್ಲಿ ಕೆಲವರು ನಿಂತು, ನಾನು ಹಿಂದಕ್ಕೆ ಬರ ಬೇಕೆಂದು ಕೂಗಿದರು. ಆದರೆ ನಾನು ಕಿವಿಗಳಲ್ಲಿ ಬೆರಳಿಟ್ಟು ಮಾರ್ಗ ಹಿಡಿದು ಬಂದೆನು.

ಸು ಚಿ. ತಿರುಗ ಬೇಕೆಂದು ನಿಮಗೆ ಸಮ್ಮತಿಸುವದಕ್ಕೆ ಯಾರೂ ಹಿಂಬಾಲಿಸಲಿಲ್ಲವೋ?

ಕ್ರಿ. ಹೌದು. ಮೂರ್ಖನು ಚಂಚಲನು ಎಂಬ ಇಬ್ಬರು ಹಿಂಬಾಲಿಸಿದರು. ಅನುಕೂಲವಾಗುವದಿಲ್ಲವೆಂದು ನೋಡಿದ ಮೇಲೆ ಮೂರ್ಖನು ಬೈದು ಹಿಂದಕ್ಕೆ ಹೋದನು. ಚಂಚಲನು ಸ್ವಲ್ಪ ದೂರದ ವರೆಗೆ ನನ್ನ ಸಂಗಡ ಬಂದನು.

ಸು ಚಿ. ಅವನು ಯಾಕೆ ಇಲ್ಲಿವರಿಗೆ ಬರಲಿಲ್ಲ?

ಕ್ರಿ. ಅಧೈರ್ಯವೆಂಬ ಹುದಿಲಿನ ಪರ್ಯಂತರ ನಾವಿಬ್ಬರು ಕೂಡಿ ಬಂದು ಅಕಸ್ಮಾತ್ತಾಗಿ ಅದರಲ್ಲಿ ಬಿದ್ದೆವು. ಬಿದ್ದ ಮೇಲೆ ನೆರೆಯವನಾದ ಚಂಚಲನು ಧೈರ್ಯಗುಂದಿ ಮುಂದೆ ಬರುವದಕ್ಕೆ ಮನಸ್ಸಿಲ್ಲದೆ ಮನೆಯ ಕಡೆಗೆ ಹೊರಟು, ಆ ಒಳ್ಳೇ ದೇಶವು ತನಗೆ

ಬೇಡ, ನಿನಗಿರಲಿ, ಎಂದು ಹೇಳಿ, ಮೂರ್ಖನ ಹಿಂದೆ ಹತ್ತಿ, ತನ್ನ ಮಾರ್ಗದಲ್ಲಿ ಹೋದನು. ನಾನು ನನ್ನ ಮಾರ್ಗದಲ್ಲಿ ಬಂದು ಈ ಬಾಗಲಿಗೆ ಸೇರಿದೆನು.

ಸು ಚಿ. ಅಯ್ಯೋ ಪಾಪಿ! ಪರಲೋಕದಲ್ಲಿ ಆಗುವ ಮಹಿಮೆಯು ಅವನಿಗೆ ಅಲ್ಪವೆಂದು ತೋರಿತೋ? ಅದನ್ನು ಹೊಂದುವದಕ್ಕೋಸ್ಕರ ಸ್ವಲ್ಪ ಕಷ್ಟವನ್ನಾದರೂ ತಾಳ ಕೂಡದೆ ಇದ್ದನೋ?

ಕ್ರಿ. ಚಂಚಲನ ಚರಿತ್ರೆಯು ಹೀಗದೆ ಹೌದು. ಆದಾಗ್ಯೂ ನನ್ನ ವಿಷಯ ಸತ್ಯ ಹೇಳಿದರೆ ಅವನಿಗಿಂತ ನಾನು ಕೆಟ್ಟವನೆಂದು ಕಂಡೀತು. ಅವನು ಮನೆಗೆ ತಿರುಗಿದನು ಹೌದು. ಆದರೆ ನಾನು ಲೋಕಮುಖ್ಯಾಚಾರ್ಯನೆಂಬವನ ಮಾಂಸಭಾವದ ಆಲೋಚನೆಯನ್ನು ಕೇಳಿ ಮರಣದ ಮಾರ್ಗದಲ್ಲಿ ನಡೆಯುವದಕ್ಕೆ ತಿರುಗಿದೆನು.

ಸು ಚಿ. ಓಹೋ, ಆ ಲೋಕಮುಖ್ಯಾಚಾರ್ಯನು ನಿಮಗೆ ಸಿಕ್ಕಿದನೋ? ಮತ್ತು ನೇಮಮಹಾಚಾರ್ಯನ ಕೈಯಿಂದ ಹೊರೆ ಬಿಡಿಸಿಕೊಳ್ಳುವದಕ್ಕೆ ನಿಮಗೆ ಹೇಳಿದನೋ? ಅವರಿಬ್ಬರೂ ಮೋಸಗಾರರೇ ಸರಿ. ಅವನ ಆಲೋಚನೆಯ ಪ್ರಕಾರ ನೀವು ನಡೆದು ಕೊಂಡಿರೋ?

ಕ್ರಿ. ನನ್ನಿಂದಲಾಗುವ ಮಟ್ಟಿಗೆ ನಡೆದು ಕೊಂಡೆನು. ನೇಮಮಹಾಚಾರ್ಯನನ್ನು ಹುಡುಕುವ ಮಾರ್ಗದಲ್ಲಿ ಸೇರಿದೆನು. ಆದರೆ ಅವನ ಮಠದ ಸಮೀಪದಲ್ಲಿರುವ ಗುಡ್ಡವು ನನ್ನ ತಲೆಯ ಮೇಲೆ ಬಿದ್ದೀತೆಂಬ ಭಯದಿಂದ ಹಿಂದೆ ನಿಂತೆನು.

ಸು ಚಿ. ಆ ಗುಡ್ಡವು ಅನೇಕರನ್ನು ಕೊಂದು ಹಾಕಿ ಅದೆ, ಇನ್ನು ಮೇಲೆ ಅನೇಕರನ್ನು ಕೊಲ್ಲುವದು. ಅದರಿಂದ ಪುಡಿ ಪುಡಿಯಾಗದ ಹಾಗೆ ತಪ್ಪಿ ಹೋದದ್ದು ಒಳ್ಳೇದಾಯಿತು.

ಕ್ರಿ. ಹೌದು, ಹೌದು, ತೊಂದರೆ ಪಡುವಷ್ಟರಲ್ಲಿ ನಾನು ಆಲೋಚನೆ ಮಾಡುತ್ತಿರುವಾಗ ಸುವಾರ್ತಿಕನು ನನ್ನ ಹತ್ತಿರ ಬಾರದಿದ್ದರೆ ಏನಾಗುತ್ತಿತ್ತೋ ಅರಿಯೆನು. ಆತನು ಬಂದದ್ದು ದೇವರ ದಯವೇ ಸರಿ. ಇಲ್ಲದಿದ್ದರೆ ನಾನು ಇಲ್ಲಿವರೆಗೆ ಎಂದಿಗೂ ಬರುತ್ತಿ

ದ್ದಿಲ್ಲ. ಹ್ಯಾಗಾದರೂ ಈಗ ನಾನು ಬಂದು, ಇದ್ದ ಹಾಗೆಯೇ ಇದ್ದೇನೆ. ಇಲ್ಲಿ ನಿಮ್ಮ ಹತ್ತರ ನಿಂತು ಮಾತಾಡುವದಕ್ಕೆ ಪಾತ್ರನಾಗದೆ ಆ ಗುಡ್ಡ ಬಿದ್ದು ಸಾಯುವದಕ್ಕೆ ನಾನು ಪಾತ್ರನಾಗಿದ್ದೆನು. ಇಲ್ಲಿ ನಾನು ಪ್ರವೇಶಿಸಿದ್ದು ಎಂಥಾ ದಯವೋ!

ಸುಚಿ. ಇಲ್ಲಿ ಬಂದವರು ಮುಂಚೆ ಯಾವ ಕರ್ಮ ಮಾಡಿದಾಗ್ಯೂ ಒಬ್ಬನಿಗೂ ನಾವು ತಡೆಯುವದಿಲ್ಲ. ಅವರು ಹ್ಯಾಗಿದ್ದರೂ ಅವರನ್ನು ಹೊರಗೆ ಹಾಕುವದಿಲ್ಲ. ಹಾಗಾದರೆ ಒಳ್ಳೇ ಕ್ರಿಸ್ತಿಯನೇ ಸ್ವಲ್ಪ ದೂರ ನನ್ನ ಸಂಗಡ ಬನ್ನಿ, ಹೋಗ ತಕ್ಕ ಮಾರ್ಗವನ್ನು ನಿಮಗೆ ತೋರಿಸುತ್ತೇನೆ. ಮುಂದುಗಡೆ ಆ ಸಣ್ಣ ಹಾದಿ ಕಂಡಿರೋ? ನೀವು ಹೋಗ ತಕ್ಕ ಮಾರ್ಗವು ಅದೇ. ಪಿತೃಗಳೂ ಪ್ರವಾದಿಗಳೂ ಕ್ರಿಸ್ತನೂ ಆತನ ಅಪೊಸ್ತಲರೂ ಮಾಡಿದ ಮಾರ್ಗವು ಇದೇ. ಸೂತ್ರ ಹಿಡಿದ ಹಾಗೆ ನೆಟ್ಟಗದೆ. ನೀವು ಹೋಗ ತಕ್ಕ ಮಾರ್ಗವು ಅದೇ ಸರಿ.

ಕ್ರಿ. ಆದರೆ ತಿಳಿಯದವನು ತಪ್ಪುವ ಹಾಗೆ ಅಡ್ಡದಾರಿಗಳೂ ಸುತ್ತು ದಾರಿಗಳೂ ಉಂಟೋ?

ಸುಚಿ. ಇದಕ್ಕೆ ಅಡ್ಡವಾದ ಮಾರ್ಗಗಳು ಅನೇಕವಾಗಿವೆ. ಅವು ಡೊಂಕಾಗಿಯೂ ಅಗಲವಾಗಿಯೂ ಅವೆ. ಇದು ಸರಿಯಾಗಿಯೂ ಇಕ್ಕಟ್ಟಾಗಿಯೂ ಇರುವದರಿಂದ ಒಳ್ಳೆ ಮಾರ್ಗವನ್ನೂ ಕೆಟ್ಟ ಮಾರ್ಗಗಳನ್ನೂ ವಿವೇಕಿಸ ಬಹುದು.

ತರುವಾಯ ಕ್ರಿಸ್ತಿಯನು ತನ್ನ ಬೆನ್ನಿನ ಮೇಲೆ ಇರುವ ಹೊರೆ ಪರಿಹರಿಸ ಬಹುದೋ? ಎಂದು ಕೇಳಿದ್ದನ್ನು ಕನಸಿನಲ್ಲಿ ಕಂಡೆನು. ಯಾಕಂದರೆ ಈ ವರೆಗೆ ಆ ಹೊರೆ ಅವನಿಂದ ಬಿದ್ದು ಹೋಗಲಿಲ್ಲ.

ಆಗ ಆ ಸುಚಿತ್ತನು, ನೀವು ಬಿಡುಗಡೆಯ ಸ್ಥಳಕ್ಕೆ ಮುಟ್ಟುವ ಪರ್ಯಂತರ ನಿಮ್ಮ ಹೊರೆ ಹ್ಯಾಗಾದರೂ ತಾಳ ಬೇಕು. ಅಲ್ಲಿ ಅದು ತನ್ನಷ್ಟಕ್ಕೆ ತಾನೇ ನಿಮ್ಮ ಬೆನ್ನಿನಿಂದ ಬಿದ್ದು ಹೋಗುವದು ಅಂದನು.

ಆ ಮೇಲೆ ಕ್ರಿಸ್ತಿಯನು ನಡುವನ್ನು ಕಟ್ಟಿ ಕೊಂಡು ಪ್ರಯಾಣಕ್ಕೆ ಹೊರಡುವಾಗ, ಸುಚಿತ್ತನು, ನೀವು ಬಾಗಲಿಂದ ಸ್ವಲ್ಪ ದೂರ ಹೋದ ಮೇಲೆ ವ್ಯಾಖ್ಯಾನಿಯ ಮನೆಗೆ ಸೇರುವಿರಿ. ಅವನ ಬಾಗಲಲ್ಲಿ ತಟ್ಟ ಬೇಕು. ಆತನು ಉತ್ತಮವಾದವುಗಳನ್ನು ನಿಮಗೆ ತೋರಿಸುವನು, ಅಂದ ಮೇಲೆ ಕ್ರಿಸ್ತಿಯನು ತನ್ನ ಸ್ನೇಹಿತನಿಗೆ ವಂದನೆ ಮಾಡಿದನು. ಅದಕ್ಕೆ ಸುಚಿತ್ತನು, ದೇವರು ನಿಮಗೆ ಸೌಖ್ಯ ಕೊಡಲಿ! ಎಂದು ಆಶೀರ್ವಾದ ಮಾಡಿ, ಕಳುಹಿಸಿದನು.

---

## 5. The Interpreter's house.

## ೫. ವ್ಯಾಖ್ಯಾನಿಯ ಮನೆಯು.

---

ತರುವಾಯ ಕ್ರಿಸ್ತಿಯನು ಪಯಣಗತಿಯಿಂದ ವ್ಯಾಖ್ಯಾನಿಯ ಮನೆಯ ಹತ್ತಿರ ಬಂದು ಬಹಳವಾಗಿ ಬಾಗಲಿಗೆ ತಟ್ಟಿದ ಮೇಲೆ ಒಬ್ಬನು ಬಾಗಲ ಹತ್ತಿರ ಬಂದು ಅದ್ಯಾರೆಂದು ಕೇಳಿದನು.

ಕ್ರಿ. ನಾನು ಮಾರ್ಗಸ್ಥನು. ಈ ಮನೆಯ ಯಜಮಾನನನ್ನು ಕಂಡು ಹೋದರೆ ನನಗೆ ಒಳ್ಳೇದಾದೀತೆಂದು ಅವನ ಸ್ನೇಹಿತರಲ್ಲಿ ಒಬ್ಬನು ನನಗೆ ಹೇಳಿದದರಿಂದ ಮನೆಯ ಯಜಮಾನನನ್ನು ಕಾಣ ಬೇಕು ಅನ್ನಲು, ಬಾಗಲಿಗೆ ಬಂದವನು ಹೋಗಿ ಯಜಮಾನನನ್ನು ಕರೆದನು. ಸ್ವಲ್ಪ ಹೊತ್ತಿನ ಮೇಲೆ ಅವನು ಕ್ರಿಸ್ತಿಯನ ಹತ್ತಿರ ಬಂದು, ನೀವು ಬಂದದ್ದೇನೆಂದು ಕೇಳಿದ್ದಕ್ಕೆ, ಐಯ್ಯಾ, ನಾನು ನಾಶನಪುರದಿಂದ ಹೊರಟು ಚಿಯೋನ ಪರ್ವತಕ್ಕೆ ಹೋಗುವ ಮಾರ್ಗಸ್ಥನಾಗಿದ್ದೇನೆ. ಈ ಮಾರ್ಗದ ಬುಡದ ಬಾಗಲಲ್ಲಿ ನಿಂತಿರುವ ಒಬ್ಬ ಮನುಷ್ಯನು, ನಾನು ಇಲ್ಲಿ ಹೋದರೆ ಪ್ರಯಾಣಕ್ಕೆ ಉಪಯೋಗವಾಗುವ ಉತ್ತಮವಾದವುಗಳನ್ನು ನನಗೆ ತೋರಿಸೀರಿ, ಎಂದು ಹೇಳಿದನು.

ವ್ಯಾಖ್ಯಾನಿಯು. ಒಳಗೆ ಬನ್ನಿ, ಉಪಯೋಗವಾದವುಗಳನ್ನು ನಿಮಗೆ ತೋರಿಸುತ್ತೇನೆ, ಎಂದು ಹೇಳಿ, ತನ್ನ ಸೇವಕನಿಗೆ ದೀಪ ಹಚ್ಚು ಎಂದು ಆಜ್ಞಾಪಿಸಿ, ಕ್ರಿಸ್ತಿಯನಿಗೆ ತನ್ನ ಹಿಂದೆ ಬರಲಿಕ್ಕೆ ಹೇಳಿ, ಅವನನ್ನು ಒಂದು ಕೊತಡಿ ಒಳಗೆ ಕರೆಕೊಂಡು ಹೋಗಿ ಅದರಲ್ಲಿರುವ ಒಂದು ಬಾಗಲನ್ನು ತೆರೆಯ ಬೇಕೆಂದು ಸೇವಕನಿಗೆ ಹೇಳಿದನು. ಅದು ತೆರೆದ ಮೇಲೆ ಕ್ರಿಸ್ತಿಯನು ಅತಿ ಗಂಭೀರವಾದ ಒಬ್ಬ ಮನುಷ್ಯನರೂಪವು ಗೋಡೆಗೆ ಕಟ್ಟಿರುವದನ್ನು ನೋಡಿದನು. ಆ ರೂಪದ ವಿಧವು ಯಾವದಂದರೆ, ಅದರ ಮುಖವು ಆಕಾಶವನ್ನು ನೋಡುತ್ತಿತ್ತು. ಅದರ ಕೈಯಲ್ಲಿ ಸರ್ವೋತ್ತಮವಾದ ಪುಸ್ತಕವು ಇತ್ತು. ಅದರ ತುಟಿಗಳ ಮೇಲೆ ಸತ್ಯದ ನೇಮವು ಬರೆದಿತ್ತು. ಅದರ ಹಿಂದುಗಡೆ ಪ್ರಪಂಚವು. ಅದು ಮನುಷ್ಯರ ಸಂಗಡ ತರ್ಕ ಮಾಡುವ ಪ್ರಕಾರ ನಿಂತು ಕೊಂಡಿತ್ತು. ಅದರ ತಲೆಯ ಮೇಲೆ ಚಿನ್ನದ ಕಿರೀಟವು ಹೊಳೆಯುತ್ತಿತ್ತು.

ಕ್ರಿ. ಇದರ ಅರ್ಥವೇನು?

ವ್ಯಾ. ಈ ಚಿತ್ರದಲ್ಲಿ ಬರೆದ ಮನುಷ್ಯನು ಸಾವಿರ ಜನರಲ್ಲಿ ಒಬ್ಬನಾಗಿದ್ದಾನೆ. ಅವನು ಜ್ಞಾನದ ವಾಕ್ಯದಿಂದ ಮಕ್ಕಳನ್ನು ಪಡೆಯಲೂ, ತಾಳ್ಮೆಯಿಂದ ಪ್ರಸವ ವೇದನೆ ಪಡಲೂ, ಹುಟ್ಟಿದವರನ್ನು ಪ್ರೀತಿಯಿಂದ ಸಾಕಲೂ, ಬಲ್ಲನು. ಅವನ ಕಣ್ಣುಗಳು ಆಕಾಶವನ್ನು ದೃಷ್ಟಿಸುತ್ತವೆಂದೂ, ಅವನ ಕೈಯಲ್ಲಿ ಸರ್ವೋತ್ತಮ ಪುಸ್ತಕವದೆ ಎಂದೂ, ಅವನ ತುಟಿಗಳ ಮೇಲೆ ಸತ್ಯದ ನೇಮವು ಬರೆದದೆ ಎಂದೂ, ನೀವು ನೋಡುವದರಿಂದ ಮರೆಯಾದ ಅಭಿಪ್ರಾಯಗಳನ್ನು ಶೋಧಿಸಿ ಪಾಪಿಷ್ಟರಿಗೆ ಬಿಡುಗಡೆ ಪಡಿಸುವದೇ ಅವನ ಕೆಲಸವೆಂದು ತಿಳುಕೊಳ್ಳ ಬೇಕು. ಅವನು ಮನುಷ್ಯರ ಸಂಗಡ ತರ್ಕ ಮಾಡುತ್ತಾ ನಿಂತಿರುವ ಪ್ರಕಾರ ಇರುವದನ್ನು ನೋಡಿದಿರಲ್ಲ? ಮತ್ತು ಪ್ರಪಂಚವು ಅವನ ಹಿಂದುಗಡೆ ಬಿದ್ದ ಪ್ರಕಾರವೂ, ಅವನ ತಲೆಯ ಮೇಲೆ ಕಿರೀಟವು ಹೊಳೆಯುವ ಪ್ರಕಾರವೂ, ನೀವು ನೋಡುವದರಿಂದ ಅವನು ತನ್ನ ಯಜಮಾನನಾದ ದೇವರ ಸೇವೆಯ ಪ್ರೀತಿಗೋಸ್ಕರ

ಲೋಕದ ಕಾರ್ಯಗಳನ್ನು ಅಲ್ಪವೆಂದೆಣಿಸಿ, ಅವುಗಳನ್ನು ತಿರಸ್ಕರಿಸಿ, ಪರಲೋಕದಲ್ಲಿ ಸಂದೇಹವಿಲ್ಲದೆ ಮಹಿಮೆಯನ್ನು ಸಂಬಳವಾಗಿ ಹೊಂದುವನೆಂದು ತಿಳುಕೊಳ್ಳ ಬೇಕು. ಈ ಚಿತ್ರದಲ್ಲಿ ಬರೆದ ಮನುಷ್ಯನೇ ನೀವು ನಡೆಯುವದಕ್ಕೆ ಕಷ್ಟವಾದ ಎಲ್ಲಾ ಸ್ಥಳಗಳಲ್ಲಿ ನಿಮಗೆ ಮಾರ್ಗ ತೋರಿಸಲಿಕ್ಕೆ, ನೀವು ಹೋಗುವ ಸ್ಥಳದ ಯಜಮಾನನಿಂದ ಅಪ್ಪಣೆ ಹೊಂದಿದ ಕಾರಣ ಈ ಚಿತ್ರವನ್ನು ನಿಮಗೆ ತೋರಿಸಿದ್ದೇನೆ. ಹೀಗಿರುವದರಿಂದ ನಾನು ನಿಮಗೆ ತೋರಿಸಿದಂಥಾದ್ದನ್ನು ಚನ್ನಾಗಿ ಆಲೋಚಿಸಿ ನೀವು ನೋಡಿದಂಥಾದನ್ನು ಮನಸ್ಸಿನಲ್ಲಿಟ್ಟುಕೊಳ್ಳಿರಿ. ಇಲ್ಲವಾದರೆ ಸತ್ಯ ಮಾರ್ಗ ತೋರಿಸುತ್ತೇವೆಂದು ಹೇಳಿ, ಮರಣದ ಮಾರ್ಗವನ್ನು ತೋರಿಸುವವರಾದ ಕೆಲವರು ಪ್ರಯಾಣದಲ್ಲಿ ನಿಮಗೆ ಶಿಕ್ಕ್ಯಾರು.

ಅದರ ಮೇಲೆ ವ್ಯಾಖ್ಯಾನಿಯು ಕ್ರಿಸ್ತಿಯನ ಕೈ ಹಿಡಿದು, ಎಂದೂ ಗುಡಿಸದೆ ಧೂಳು ತುಂಬಿದ ದೊಡ್ಡ ಪಡಸಾಲೆಗೆ ಅವನನ್ನು ಕರೆ ಕೊಂಡು ಹೋದನು. ಅವನು ಅದನ್ನು ಸ್ವಲ್ಪ ಕಾಲ ನೋಡಿದ ಮೇಲೆ, ವ್ಯಾಖ್ಯಾನಿಯು ಗುಡಿಸಲಿಕ್ಕೆ ಯಾರಾದರೂ ಬರಲಿ, ಅಂದ ಬಳಿಕ, ಒಬ್ಬನು ಬಂದು ಗುಡಿಸಲಿಕ್ಕೆ ಆರಂಭಿಸಿದಾಗ, ಧೂಳು ಬಹಳವಾಗಿ ಎದ್ದದರಿಂದ ಕ್ರಿಸ್ತಿಯನು ಉಸುರು ಕಟ್ಟಿ ಕೊಂಡನು. ಆಗಲು ವ್ಯಾಖ್ಯಾನಿಯು ಹತ್ತರ ನಿಂತ ಒಬ್ಬ ಹುಡಿಗಿಗೆ, ನೀರು ತಂದು ಪಡಸಾಲೆಯಲ್ಲಿ ಚಿಮಿಕಿಸು ಅಂದಾಗ, ಅವಳು ಹಾಗೆ ಮಾಡಿದ ಮೇಲೆ ಆ ಕೊಠಡಿಯನ್ನು ಗುಡಿಸಿ ಶುದ್ಧ ಮಾಡಲಿಕ್ಕೆ ಸುಲಭವಾಯಿತು.

ಕ್ರಿ. ಇದರ ಅರ್ಥವೇನು?

ವ್ಯಾ. ಈ ಪಡಸಾಲೆ ಏನಂದರೆ, ಸುವಾರ್ತೆಯ ಆನಂದಕರವಾದ ದಯದಿಂದ ಎಂದೂ ಶುದ್ಧವಾಗದೆ ಇದ್ದಂಥ ಮನುಷ್ಯನ ಹೃದಯವು. ಧೂಳು ಏನಂದರೆ, ಅದರ ಮೂಲ ಪಾಪವೂ, ಸಂಪೂರ್ಣ ಮನುಷ್ಯನನ್ನು ಅಶುದ್ಧ ಮಾಡಿದ ಒಳಗಿನ ದುರ್ಗುಣಗಳೂ. ಗುಡಿಸಲಿಕ್ಕೆ ಮೊದಲು ಆರಂಭಿಸಿದ ಮನುಷ್ಯನು ನ್ಯಾಯ ಪ್ರಮಾಣವೇ. ನೀರು ತಂದು ಚಿಮಿಕಿಸಿದವಳು ಸುವಾರ್ತೆಯೇ.

ಹೀಗಿರಲಾಗಿ ಆ ಮೊದಲಿನವನು ಗುಡಿಸಲಿಕ್ಕೆ ಆರಂಭಿಸಿದಾಗ ಕೊಠಡಿಯು ಶುದ್ಧವಾಗಲಾರದ ಹಾಗೆ ಧೂಳೆದ್ದು ನಿಮ್ಮ ಉಸುರು ಕಟ್ಟಿದ ಹಾಗಾದದರಿಂದ ನೀವು ತಿಳುಕೊಳ್ಳ ತಕ್ಕದ್ದೇನಂದರೆ, ನ್ಯಾಯ ಪ್ರಮಾಣವು ಹೃದಯವನ್ನು ಶುದ್ಧ ಮಾಡ ಶಕ್ತಿ ಇಲ್ಲದೆ, ಪಾಪವನ್ನು ಮನುಷ್ಯನಿಗೆ ತೋರಿಸಿ, ಅದನ್ನು ಮಾಡ ಬಾರದೆಂದು ಹೇಳಿದಾಗ್ಯೂ ಅದನ್ನು ಜಯಿಸುವ ತ್ರಾಣವನ್ನು ಅವನಿಗೆ ಕೊಡದೆ ಇರುವದರಿಂದ, ಪಾಪವನ್ನು ಮನಸ್ಸಿನಲ್ಲಿ ಎಚ್ಚರಿಸಿ, ಬಲ ಪಡಿಸಿ, ಬೆಳಿಸುವದು. ಮತ್ತು ಆ ಹುಡಿಗಿಯು ಕೊಠಡಿಗೆ ನೀರು ಚಿಮಿಕಿಸಿದ ಮೇಲೆ ಅದು ಸುಲಭವಾಗಿ ಶುಚಿಯಾಯಿತೆಂದು ನೀವು ನೋಡಿದದರಿಂದ ತಿಳಿದು ಕೊಳ್ಳ ತಕ್ಕದ್ದೇನಂದರೆ, ಸುವಾರ್ತೆಯ ಆನಂದಕರವಾದ ಸುಬೋಧೆಗಳು ಹೃದಯದೊಳಗೆ ಪ್ರವೇಶಿಸಿದಾಗ ಆ ಹುಡಿಗಿಯು ನೀರು ಚಿಮಿಕಿಸಿ ಧೂಳು ಅಣಗುವ ಹಾಗೆ ಮಾಡಿದ ಪ್ರಕಾರವೇ ಸುವಾರ್ತೆಯ ವಿಶ್ವಾಸದಿಂದ ಪಾಪವು ಅಪಜಯವಾಗಿ ಅಡಗಲ್ಪಟ್ಟ ಮೇಲೆ ಆತ್ಮವು ಶುಚಿಯಾಗಿ ಮಹಿಮೆಯ ಅರಸನ ನಿವಾಸಕ್ಕೆ ಯೋಗ್ಯವಾಗುವದು.

ಮತ್ತು ವ್ಯಾಖ್ಯಾನಿಯು ಕ್ರಿಸ್ತಿಯನನ್ನು ಸಣ್ಣ ಒಂದು ಕೊಠಡಿಗೆ ಕರೆ ಕೊಂಡು ಹೋದ ಪ್ರಕಾರ ಕಂಡೆನು. ಆ ಕೊಠಡಿಯಲ್ಲಿ ಇಬ್ಬರು ಚಿಕ್ಕ ಹುಡುಗರು ಕುರ್ಚಿಗಳ ಮೇಲೆ ಕೂತು ಕೊಂಡಿದ್ದರು. ಹಿರಿಯ ಹುಡುಗನ ಹೆಸರು ಆಶೆ. ಕಿರಿಯವನ ಹೆಸರು ತಾಳ್ಮೆ. ಆಶೆ ಯೆಂಬುವನು ಬಹಳ ಕರಕರೆಯಿಂದಿರುವವನಾಗಿ ತೋರುತ್ತಿದ್ದನು. ತಾಳ್ಮೆ ಎಂಬವನು ಅತಿ ಶಾಂತನಾಗಿದ್ದನು. ಆಶೆ ಎಂಬವನು ಕರಕರೆ ಪಡುವದಕ್ಕೆ ಏನು ಕಾರಣವೆಂದು ಕ್ರಿಸ್ತಿಯನು ಕೇಳುವಾಗ, ವ್ಯಾಖ್ಯಾನಿಯು ಹೇಳಿದ್ದು —ಈ ಇಬ್ಬರ ಉಪಾಧ್ಯನು ಉತ್ತಮವಾದ ಒಡವೆಗಳು ಶಿಕ್ಕುವ ಹಾಗೆ ಬರುವ ವರುಷದ ಪರ್ಯಂತರ ತಾಳ ಬೇಕನ್ನುತ್ತಾನೆ. ಆಶೆ ಎಂಬವನು ಎಲ್ಲಾ ಈಗಲೇ ಬೇಕನ್ನುತ್ತಾನೆ. ತಾಳ್ಮೆ ಎಂಬವನು ಕಾದು ಕೊಳ್ಳ ಮನಸ್ಸಾಗಿದ್ದಾನೆ. ತರುವಾಯ ಒಬ್ಬನು ಆಶೆ ಎಂಬವನ ಹತ್ತರ ಬಂದು ಹಣದ ಚೀ

ಅವನ್ನು ಅವನ ಕಾಲುಗಳ ಮುಂದೆ ಸುರಿದದ್ದನ್ನು ಕಂಡೆನು. ಅವನು ಹಣವನ್ನು ತೆಗದು ಕೊಂಡು ಸಂತೋಷಿಸಿ ತಾಳ್ಮೆ ಎಂಬವನಿಗೆ ಹಾಸ್ಯ ಮಾಡಿದನು. ಆದರೆ ಸ್ವಲ್ಪ ಹೊತ್ತಿನ ಮೇಲೆ ನಾನು ನೋಡುತ್ತಾ ಅವನು ಹರಕು ವಸ್ತ್ರಗಳು ಮಾತ್ರ ಉಳಿಯುವ ಹಾಗೆ ಎಲ್ಲಾ ವೆಚ್ಚ ಮಾಡಿದ್ದನ್ನು ಕಂಡೆನು.

ಕ್ರಿ. ವ್ಯಾಖ್ಯಾನಯ್ಯಾ, ದಯ ಮಾಡಿ ಇದರ ವಿವರವನ್ನು ನನಗೆ ತಿಳಿಸಿರಿ.

ವ್ಯಾ. ಹೇಳುತ್ತೇನೆ. ಈ ಇಬ್ಬರು ಹುಡುಗರು ಸಾಮ್ಯ ರೂಪಗಳಾಗಿರುತ್ತಾರೆ. ಆಶೆ ಎಂಬವನು ಈಲೋಕದವರಿಗೂ ತಾಳ್ಮೆ ಎಂಬವನು ಮುಂದಿನ ಲೋಕದವರಿಗೂ ಸಾಮ್ಯವಾಗಿರುತ್ತಾನೆ. ಆಶೆ ಎಂಬವನು ಎಲ್ಲಾ ಈಗಲೇ ತನಗೆ ಬೇಕೆಂಬುವದನ್ನು ನೋಡಿದಿರಲ್ಲ? ಈ ಲೋಕದ ಮನುಷ್ಯರ ಗುಣವು ಹೀಗೆಯೇ. ಎಲ್ಲಾ ಒಡವೆಗಳು ಅವರಿಗೆ ಈಗಲೇ ಬೇಕನ್ನುತ್ತಾರೆ. ಅವರು ಮುಂದಿನ ಲೋಕವೆಂಬ ಬರುವ ವರುಷದ ಪರ್ಯಂತರ ತಮ್ಮ ಒಡವೆಗಳಿಗೋಸ್ಕರ ಕಾದು ಕೊಳ್ಳಲಾರರು. ಮುಂದಿನ ಲೋಕದಲ್ಲಿ ಶಿಕ್ಕುವ ಒಡವೆಗಳ ವಿಷಯವಾದ ದಿವ್ಯ ಸಾಕ್ಷಿಗಳೆಲ್ಲವುಗಳಿಗಿಂತ ಅವರಿಗೆ ಮುಂದಿನ ಮುಕ್ತಿಗಿಂತ ಇಂದಿನ ಭುಕ್ತಿಯೇ ಲೇಸು ಎಂಬ ಗಾದೆಯು ದೊಡ್ಡದಾಗಿದೆ. ಆದಾಗ್ಯೂ ಆ ಆಶೆ ಎಂಬವನು ಹರಕು ವಸ್ತ್ರಗಳು ಮಾತ್ರ ತನಗೆ ಉಳಿಯುವ ಹಾಗೆ ಬೇಗ ಎಲ್ಲಾ ಖರ್ಚು ಮಾಡಿದ್ದನ್ನು ನೀವು ನೋಡಿದ ಹಾಗೆಯೇ ಈ ಲೋಕದ ಮನುಷ್ಯರಿಗೆ ಅಂತ್ಯದಲ್ಲಿ ಸಂಭವಿಸುವದು.

ಕ್ರಿ. ಈ ತಾಳ್ಮೆ ಎಂಬವನಿಗೆ ಒಳ್ಳೇ ಬುದ್ಧಿ ಉಂಟೆಂದು ನಾನು ತಿಳುಕೊಳ್ಳುತ್ತೇನೆ. ಅವನು ಉತ್ತಮವಾದ ವಸ್ತುಗಳಿಗೋಸ್ಕರ ಕಾದು ಕೊಂಡಿರುವದಲ್ಲದೆ ಆ ಮತ್ತೊಬ್ಬನಿಗೆ ಹರಕು ವಸ್ತ್ರಗಳು ಮಾತ್ರ ಉಳಿಯುವ ಸಮಯದಲ್ಲಿ ಇವನು ತನ್ನ ಸಂಪತ್ತಿನ ಮಹಿಮೆಯನ್ನು ಹೊಂದುವನು.

ವ್ಯಾ. ಇನ್ನೊಂದು ಮಾತು ಹೇಳ ಬಹುದು. ಅದೇನಂದರೆ, ಮುಂದಿನ ಲೋಕದ ಮಹಿಮೆಯೂ ಎಂದೂ ಕ್ಷಯವಾಗದು. ಈಗಿನದು ನಿಮಿಷದಲ್ಲಿ ನಾಶವಾಗುವದು. ಆದದರಿಂದ ಆಶೆ ಎಂಬವನು ತಾನು ಸಂಪತ್ತನ್ನು ಮೊದಲು ಹೊಂದಿದೆನೆಂದು ತಾಳ್ಮೆ ಎಂಬವನಿಗೆ ಹಾಸ್ಯ ಮಾಡುವದಕ್ಕೆ ಕಾರಣವಿಲ್ಲ. ತಾಳ್ಮೆ ಎಂಬವನು ಕಡೇಲಿ ತಾನು ಸಂಪತ್ತನ್ನು ಹೊಂದಿದವನಾಗಿ ಆಶೆ ಎಂಬವನಿಗೆ ಹಾಸ್ಯ ಮಾಡುವದಕ್ಕೆ ಕಾರಣವಿರುವದು. ಯಾಕಂದರೆ, ಮುಂದಿನ ಕಾಲವು ಕಡೆಯುವನದಾಗಿರುವದು. ಮೊದಲಿನವನು ಕಡೆಯುವನಿಗೆ ಸ್ಥಳ ಬಿಟ್ಟು ಕೊಡ ಬೇಕು. ಆದರೆ ಕಡೆಯುವನು ಸ್ಥಳ ಬಿಡುವ ಅವಶ್ಯವಿಲ್ಲ, ಯಾಕಂದರೆ ಅವನ ತರುವಾಯ ಯಾರೂ ಬರುವದಿಲ್ಲ. ಆದದರಿಂದ ಮೊದಲಾಗಿ ಪಾಲು ಹೊಂದಿದವನು ಅದನ್ನು ಖರ್ಚು ಮಾಡುವದಕ್ಕೆ ಸಮಯ ಇರುವದು. ಆದರೆ ಕಡೆಯಲ್ಲಿ ಪಾಲು ಹೊಂದುವವನಿಗೆ ಅದು ಸ್ಥಿರವಾಗಿದೆ. ಇದಕ್ಕೋಸ್ಕರ ಭಕ್ತಿಹೀನರಾಗಿ ಸತ್ತು ಹೋಗಿ ಪಾತಾಳದಲ್ಲಿ ಯಾತನೆ ಪಡುವ ಐಶ್ವರ್ಯವಂತರಿಗೆ, ನೀವು ಜೀವದಿಂದಿರುವಾಗಲೇ ನಿಮ್ಮ ಮೇಲುಗಳನ್ನು ಅನುಭವಿಸಿದಿರಿ ಎಂದೂ, ಬಡವರಾಗಿ ಈ ಲೋಕದಲ್ಲಿ ಶ್ರಮೆ ಪಟ್ಟ ಭಕ್ತರು ಈಗ ಸುಖಿಯಾಗಿದ್ದಾರೆಂದೂ, ಹೇಳಲ್ಪಡುವದು.

ಕ್ರಿ. ಹಾಗಾದರೆ ಇಹದವುಗಳನ್ನು ಹಾರೈಸದೆ ಪರದವುಗಳಿಗೋಸ್ಕರ ಕಾದು ಕೊಳ್ಳುವದೇ ಒಳ್ಳೇದೆಂದು ತಿಳಕೊಳ್ಳುತ್ತೇನೆ.

ವ್ಯಾ. ನೀವು ಹೇಳಿದ್ದು ಸರಿ. ಹ್ಯಾಗಂದರೆ, ಕಾಣುವವುಗಳು ತಾತ್ಕಾಲಿಕವೂ, ಕಾಣದವುಗಳು ನಿತ್ಯವೂ, ಆಗಿವೆ. ಹ್ಯಾಗಂದರೆ, ಈಗಿನ ವಸ್ತುಗಳೂ ನಮ್ಮ ಮಾಂಸದ ಇಷ್ಟಗಳೂ ಬಹು ಸಮೀಪವಾದ ನೆರೆಯಾಗಿರುವದರಿಂದಲೂ, ಮುಂದಿನ ವಸ್ತುಗಳೂ ಮಾಂಸೇಂದ್ರಿಯಗಳೂ ಏನು ಪರಚಿತಿ ಇಲ್ಲದ ದೂರವಾಗಿರುವದರಿಂದಲೂ ಅವುಗಳಲ್ಲಿ ತಕ್ಷಣವೇ ಅತಿ ಸ್ನೇಹ ಹುಟ್ಟುತ್ತದೆ. ಆದರೆ ಇವುಗಳಲ್ಲಿ ಎಂದಿಗೂ ಗೊಡವೆ ಇಲ್ಲ.

ತರುವಾಯ ವ್ಯಾಖ್ಯಾನಿಯು ಕ್ರಿಸ್ತಿಯನ ಕೈ ಹಿಡಿದು ಮತ್ತೊಂದು ಸ್ಥಳಕ್ಕೆ ಕರೆ ಕೊಂಡು ಹೋಗುವದನ್ನು ಕನಸಿನಲ್ಲಿ ಕಂಡೆನು. ಅಲ್ಲಿ ಒಂದು ಗೋಡೆಯ ಹತ್ತರ ಬೆಂಕಿ ಉರಿಯುತ್ತಿತ್ತು. ಒಬ್ಬನು ಅದರ ಬಳಿಯ ನಿಂತು ಆ ಬೆಂಕಿಯನ್ನಾರಿಸ ಬೇಕೆಂದು ಅದರ ಮೇಲೆ ಬಹಳ ನೀರು ಹೊಯ್ಯುತ್ತಿದ್ದನು. ಹಾಗೆ ಹೊಯಿದಾಗ್ಯೂ ಆ ಬೆಂಕಿಯು ಹೆಚ್ಚು ಹೆಚ್ಚಾಗಿ ಉರಿಯುತ್ತಿತ್ತು.

ಕ್ರಿ. ಇದರ ಅರ್ಥವೇನು?

ವ್ಯಾ. ಈ ಬೆಂಕಿ ಎಂಬುವದು ಮನುಷ್ಯರ ಹೃದಯದಲ್ಲಿ ದೇವರ ದಯದಿಂದ ಉಂಟಾಗುವ ಭಕ್ತಿಯು. ಅದರ ಮೇಲೆ ನೀರು ಹೊಯಿದು ಅದನ್ನು ಆರಿಸಿ ಅಡಗಿಸುವದಕ್ಕೆ ನೋಡುವವನು ಸೈತಾನನು. ಎಷ್ಟು ನೀರು ಹಾಕಿದಾಗ್ಯೂ ಅದು ಹೆಚ್ಚು ಹೆಚ್ಚಾಗಿ ಉರಿಯುತ್ತಾ ಬರುವ ಕಾರಣವನ್ನು ಈಗ ನೋಡಿರಿ ಎಂದು ಹೇಳಿ, ಗೋಡೆಯಾಚೆಗೆ ಅವನನ್ನು ಕರ ಕೊಂಡು ಹೋಗಿ, ಕೈಯಲ್ಲಿ ಎಣ್ಣೆಯ ಪಾತ್ರೆ ಹಿಡಿದು, ರಹಸ್ಯವಾಗಿ ಎಡೆಬಿಡದೆ ಆ ಬೆಂಕಿಯಲ್ಲಿ ಹೊಯ್ಯುವ ಮನುಷ್ಯನನ್ನು ತೋರಿಸಿದನು.

ಕ್ರಿ. ಅದರ ಅರ್ಥವೇನು?

ವ್ಯಾ. ಇತನು ಹೃದಯದಲ್ಲಿ ಆರಂಭವಾದ ಭಕ್ತಿಯನ್ನು ತನ್ನ ಕೃಪೆ ಎಂಬ ಎಣ್ಣೆಯಿಂದ ನಿತ್ಯವಾಗಿ ಕಾಯುವ ಕ್ರಿಸ್ತನು. ಹೀಗೆ ಆತನು ಮಾಡುವದರಿಂದ ಆತನ ಜನರ ಆತ್ಮಗಳು ಸೈತಾನನು ಏನು ಮಾಡಿದಾಗ್ಯೂ ಇನ್ನೂ ಭಕ್ತಿಯಲ್ಲಿ ಸ್ಥಿರವಾಗಿವೆ. ಬೆಂಕಿ ಕಾಯುವ ಮನುಷ್ಯನು ಗೋಡೆಯ ಆಚೆಯಲ್ಲಿ ನಿಂತದ್ದೇನಂದರೆ, ಭಕ್ತಿಯು ಆತ್ಮದಲ್ಲಿ ಹ್ಯಾಗೆ ಕಾಯಲ್ಪಡುವದೋ ಇದನ್ನು ತಿಳಿಯುವದು ಭಕ್ತರಿಗೂ ಸಹ ಕಷ್ಟವಾಗಿದೆ.

ತರುವಾಯ ವ್ಯಾಖ್ಯಾನಿಯು ತಿರಿಗಿ ಅವನ ಕೈಯನ್ನು ಹಿಡಿದು, ನೋಟಕ್ಕೆ ಸೌಂದರ್ಯವಾದ ಚಲೋ ಅರಮನೆಯು ಕಟ್ಟಲ್ಪಟ್ಟಿರುವ ರಮಣೀಯ್ಯವಾದ ಸ್ಥಳಕ್ಕೆ ಅವನನ್ನು ಕರೆ ಕೊಂಡು ಹೋಗುವದನ್ನು ಕನಸಿನಲ್ಲಿ ಕಂಡೆನು. ಕ್ರಿಸ್ತಿಯನು ಇದನ್ನು ನೋ

ಷಿದಾಗ ಮಹಾ ಸಂತೋಷ ಪಟ್ಟನು. ಅದರ ಮಾಳಿಗೆಯ ಮೇಲೆ ಶುದ್ಧ ಭಂಗಾರದ ವಸ್ತ್ರಗಳನ್ನು ಹೊದ್ದ ಮನುಷ್ಯರು ತಿರುಗಾಡುವದನ್ನು ನೋಡಿದನು.

ಕ್ರಿ. ನಾವು ಇಲ್ಲಿ ಪ್ರವೇಶಿಸ ಬಹುದೋ?

ವ್ಯಾಖ್ಯಾನಿಯು. ಆ ಅರಮನೆಯ ಬಾಗಲ ಬಳಿಗೆ ಅವನನ್ನು ಕರೆ ಕೊಂಡು ಹೋಗುತ್ತಿರುವಾಗ, ಪ್ರವೇಶಿಸಲಿಕ್ಕೆ ಮನಸ್ಸಾಗಿ ಪ್ರವೇಶಿಸಲಾರದ ಮನುಷ್ಯರ ದೊಡ್ಡ ಗುಂಪು ಬಾಗಲಲ್ಲಿ ನಿಂತಿತ್ತು. ಮತ್ತು ಬಾಗಲಿನ ಸ್ವಲ್ಪ ದೂರದಲ್ಲಿ ಒಬ್ಬ ಮನುಷ್ಯನು ಮೇಜಿನ ಹತ್ತರ ಕೂತು, ಪುಸ್ತಕವನ್ನೂ ಮಶಿಕುಡಿಕೆಯನ್ನೂ ಇಟ್ಟು ಕೊಂಡು, ಪ್ರವೇಶಿಸುವವರ ಹೆಸರುಗಳನ್ನು ಬರಿಯುತ್ತಿದ್ದನು. ಮತ್ತು ಕವಚ ಧರಿಸಿದ ಅನೇಕ ಮನುಷ್ಯರು ಅರಮನೆಯನ್ನು ಕಾಯುತ್ತಾ, ಪ್ರವೇಶಿಸುವವರಿಗೆ ಆದಷ್ಟು ತೊಂದರೆಯೂ ನಷ್ಟವೂ ಪಡಿಸಲಿಕ್ಕೆ ನಿಶ್ಚಯಿಸಿ ಕೊಂಡವರಾಗಿ ಹೆಬ್ಬಾಗಲಲ್ಲಿ ನಿಂತಿದ್ದರು.

ಇದನ್ನು ನೋಡಿ ಕ್ರಿಸ್ತಿಯನು ಆಶ್ಚರ್ಯ ಪಡಲಾಗಿ, ಕಡೆಗೆ ಆ ಯುದ್ಧಸ್ಥರ ಭಯದಿಂದ ಎಲ್ಲರು ಹಿಂದಿರುಗಿ ಹೋದ ಮೇಲೆ, ಧೈರ್ಯ ಮುಖ ಉಳ್ಳ ಒಬ್ಬನು ಬರೆಯಲಿಕ್ಕೆ ಕೂತ ಆ ಮನುಷ್ಯನ ಹತ್ತರ ಬಂದು, ಐಯ್ಯಾ, ನನ್ನ ಹೆಸರನ್ನು ಬರೆಯಿರಿ ಎಂದು ಹೇಳಿದ ತರುವಾಯ ಕತ್ತಿಯನ್ನು ಸೆಳದು, ತಲೆಗೆ ಶಿರಸ್ತ್ರಾಣವನ್ನಿಟ್ಟು, ಮರಣಕರವಾದ ಘಾಯಗಳನ್ನು ಮಾಡುವ ಯುದ್ಧಸ್ಥರಿಗೆದುರಾಗಿ ಬಾಗಲ ಸಮೀಪಕ್ಕೆ ಓಡಿ, ಏನೂ ಅಧೈರ್ಯ ಪಡದೆ ಶೂರನಾಗಿ ಕತ್ತರಿಸಿ ಕೆಡಹುವದನ್ನು ನೋಡಿದನು. ಅವನಿಗೂ, ಅವನನ್ನು ಸೇರಗೊಡಿಸದವರಿಗೂ, ಅನೇಕ ಘಾಯಗಳು ಆದ ಮೇಲೆ, ಅವನು ಅವರ ನಡುವೆ ದಾರಿ ಮಾಡಿ ಕೊಂಡು, ಅರಮನೆಯೊಳಗೆ ನುಗ್ಗಿದಾಗ ಮಾಳಿಗೆಯ ಮೇಲೆ ಸಂಚರಿಸುವವರಿಂದ ರಮ್ಯವಾದ ಶಬ್ದ ಉಂಟಾಯಿತು. ಅದು ಹ್ಯಾಗಂದರೆ,

ಬಾರೈ ನೀನೊಳಗೆ ನಿತ್ಯದ ಮಹಿಮೆಗೆ
ಸೇರೈ ನೀನೊಳಗೆ.

ಈ ಪ್ರಕಾರ ಅವನು ಪ್ರವೇಶಿಸಿ ಅವರಂತೆ ವಸ್ತ್ರವನ್ನು ಹೊಂದಿದನು.

ಕ್ರಿಸ್ತಿಯನು ನಕ್ಕು, ಇದರ ಅರ್ಥವು ತಿಳಿದ ಹಾಗಿದೆ, ಅಂದನು. ತರುವಾಯ ಕ್ರಿಸ್ತಿಯನು ನನಗೆ ಅಪ್ಪಣೆಯೋ? ಅಂದಾಗ, ವ್ಯಾಖ್ಯಾನಿಯು ಸ್ವಲ್ಪ ಇರಿ, ಇನ್ನೂ ಕೆಲವು ನೋಡಿ ಹೋಗಿರಿ, ಅಂದನು. ಈ ಪ್ರಕಾರ ತಿರಿಗಿ ಅವನ ಕೈಯನ್ನು ಹಿಡಿದು ಬಹಳ ಕತ್ತಲೆಯಾದ ಕೊಠಡಿಗೆ ಕರೆ ಕೊಂಡು ಹೋದಾಗ, ಕಬ್ಬಿಣದ ಪಂಜರದಲ್ಲಿ ಕೂತಿರುವ ಮನುಷ್ಯನನ್ನು ಕಂಡನು.

ಆ ಮನುಷ್ಯನು ನೆಲವನ್ನು ನೋಡಿ, ಕೈ ಮುಗಿದು ಕೊಳ್ಳುತ್ತಾ, ಎದೆ ಒಡೆಯುವ ಹಾಗೆ ನಿಟ್ಟುಸುರಿಡುತ್ತಾ, ಅಧಿಕ ದುಃಖದಿಂದ ಆಕ್ರಾಂತನಾಗಿದ್ದದನ್ನು ಕಂಡನು. ಕ್ರಿಸ್ತಿಯನು ಇದರ ಅರ್ಥವೇನ ನ್ನಲು, ವ್ಯಾಖ್ಯಾನಿಯು, ಆ ಮನುಷ್ಯನ ಸಂಗಡ ಮಾತಾಡು, ಅಂದನು. ಆಗಲು ಕ್ರಿಸ್ತಿಯನು ಆ ಮನುಷ್ಯನಿಗೆ, ನೀವು ಯಾರು? ಅನ್ನಲು, ಅವನು, ನಾನು ಮುಂಚೆ ಇರದ ಸ್ಥಿತಿಯಲ್ಲಿ ಈಗ ಇದ್ದೇನೆ, ಅಂದನು.

ಕ್ರಿ. ನೀವು ಮುಂಚೆ ಹ್ಯಾಗಿದ್ದಿರಿ?

ಆ ಮನುಷ್ಯ. ನಾನು ಒಳ್ಳೇ ಚುರುಕಾದ ಶಿಷ್ಯನೆಂದು ಮುಂಚೆ ನನಗೂ ಮತ್ತೊಬ್ಬರಿಗೂ ಕಾಣಿಸಿ ಕೊಂಡೆನು. ದೇವರ ಪಟ್ಟಣವು ನನಗೆ ತಪ್ಪದೆಂದು ನೆನಸಿ, ಅದರಲ್ಲಿ ಶೇರುವೆನೆಂಬ ಆಲೋಚನೆಯಿಂದ ಸಂತೋಷ ಪಡುತ್ತಿದ್ದೆನು.

ಕ್ರಿ. ಹಾಗಾದರೆ ಈಗ ನಿಮಗೆ ಏನಾಯಿತು.

ಮನ. ಈಗ ನಾನು ಅಲ್ಲಿ ಶೇರಲಿಕ್ಕಿಲ್ಲವೆಂದು ಅದರ ಆಶೆ ಕೆಟ್ಟವನಾಗಿದ್ದೇನೆ. ಅದರಿಂದ ನಿರಾಶೆ ಎಂಬ ಈ ಕಬ್ಬಿಣದ ಪಂಜರದಲ್ಲಿ ಮುಚ್ಚಲ್ಪಟ್ಟಿದ್ದೇನೆ. ಹೊರಗೆ ಬರಲಾರೆ, ಇನ್ನು ಮೇಲೆಯೂ ಬರಲಾರೆನು.

ಕ್ರಿ. ಹಾಗಾದರೆ ನೀವು ಈ ಅವಸ್ಥೆಯಲ್ಲಿ ಬಿದ್ದದ್ದು ಯಾಕೆ?

ಮನ. ನಾನು ಜಾಗ್ರತೆಯನ್ನೂ ಮಿತಾನುಭೋಗವನ್ನೂ ತೊರದು, ನನ್ನ ಇಷ್ಟೆಗಳ ಕಡಿವಾಣ ಬಿಟ್ಟು, ವಾಕ್ಯದ ಬೆಳಕಿಗೂ

ದೇವರ ದಯೆಕ್ಕೂ ವಿರೋಧವಾದ ಪಾಪಗಳನ್ನು ನಡಸಿದೆನು. ನಾನು ದೇವರ ಆತ್ಮವನ್ನು ದುಖ್ಖ ಪಡಿಸಿದದರಿಂದ ಅದು ನನ್ನನ್ನು ಬಿಟ್ಟು ಹೋಯಿತು. ಸೈತಾನನಿಗೆ ಆಸ್ಪದ ಕೊಟ್ಟದರಿಂದ ಅವನು ನನ್ನ ಹತ್ತರ ಬಂದನು. ದೇವರಿಗೆ ಕೋಪವೆಬ್ಬಿಸಿದದರಿಂದ ಅವನು ನನ್ನನ್ನು ತಳ್ಳಿ ಬಿಟ್ಟನು. ನಾನು ನನ್ನ ಹೃದಯವನ್ನು ಕಠಿಣ ಮಾಡಿದದರಿಂದ ಪಶ್ಚಾತ್ತಾಪ ಪಡಲಾರೆನು.

ಕ್ರಿಸ್ತಿಯನು. ವ್ಯಾಖ್ಯಾನಿಗೆ, ಇವನಂಥಾ ಮನುಷ್ಯನಿಗೆ ಏನೂ ಗತಿ ಇಲ್ಲವೊ? ಅನ್ನಲು, ವ್ಯಾಖ್ಯಾನಿಯು ಅವನನ್ನು ಕೇಳಿರಿ, ಅಂದನು.

ಕ್ರಿ. ಎಲೇ ಬಡವನೇ! ನಿಮಗೆ ಏನೂ ಗತಿ ಇಲ್ಲವೋ? ನಿರಾಶೆ ಎಂಬ ಈ ಕಬ್ಬಿಣದ ಪಂಜರದಲ್ಲಿ ಎಂದೂ ಇರ ಬೇಕೋ?

ಮನ್. ಗತಿ ಇಲ್ಲವೇ ಇಲ್ಲ.

ಕ್ರಿ. ಅದ್ಯಾಕೆ? ಸ್ತುತಿಸ ತಕ್ಕವನ ಕುಮಾರನು ಅತಿ ಕನಿಕರ ಉಳ್ಳವನಾಗಿದ್ದಾನೆ.

ಮನ್. ನಾನು ಅವನನ್ನು ಎರಡನೇ ಸಾರಿ ಶಿಲುಬೆಗೆ ಹಾಕಿದ್ದೇನೆ. ಅವನನ್ನೂ ಅವನ ನೀತಿಯನ್ನೂ ತಿರಸ್ಕರಿಸಿ, ಅವನ ರಕ್ತವನ್ನು ಸಾಧಾರಣವಾದದ್ದೆಂದು ಎಣಿಸಿ, ಕೃಪೆಯುಳ್ಳ ಆತ್ಮವನ್ನು ನಿಂದಿಸಿ, ವಾಗ್ದತ್ತಗಳನ್ನೆಲ್ಲಾ ನಾನು ತಿರಸ್ಕರಿಸಿದದರಿಂದ ನಿಶ್ಚಯವಾದ ನ್ಯಾಯ ತೀರ್ವಿಕೆಯೂ ಉರಿಯುವ ಕೋಪವೂ ಹಗೆಗಾರನಾದ ನನ್ನನ್ನು ಸಂಹರಿಸುವವೆಂಬ ಅಘೋರ ಭಯವೇ ಹೊರ್ತು ಮತ್ತೇನೂ ನನಗೆ ಉಳಿಯಲಿಲ್ಲ.

ಕ್ರಿ. ನೀವು ಯಾತಕ್ಕೆ ಈ ಅವಸ್ಥೆಯಲ್ಲಿ ಬಿದ್ದಿರಿ?

ಮನ್. ಈ ಪ್ರಪಂಚದ ಆಶೆ ಸುಖ ಲಾಭಗಳಿಗೋಸ್ಕರವೇ ಬಿದ್ದೆನು. ಅವುಗಳ ಅನುಭವದಿಂದ ಬಹಳ ಸಂತೋಷವಾದೀತೆಂದು ನೆನಸಿದೆನು. ಆದರೆ ಈಗ ಅವುಗಳೇ ಅಗ್ನಿ ಕೀಟದ ಹಾಗೆ ನನ್ನನ್ನು ಪೀಡಿಸಿ ಕೊರೆಯುತ್ತವೆ.

ಕ್ರಿ. ಆದರೆ ಈಗ ಪಶ್ಚಾತ್ತಾಪ ಪಟ್ಟು ತಿರುಗ ಕೂಡದೋ?

ಮನ. ದೇವರು ನನಗೆ ಪಶ್ಚಾತ್ತಾಪ ದಯ ಮಾಡುವದಿಲ್ಲ. ಅವನ ವಾಕ್ಯವು ವಿಶ್ವಾಸಿಸುವ ಹಾಗೆ ನನಗೆ ಧೈರ್ಯ ಕೊಡುವದಿಲ್ಲ. ಅವನೇ ನನ್ನನ್ನು ಈ ಕಬ್ಬಿಣದ ಪಂಜರದಲ್ಲಿ ಮುಚ್ಚಿದ್ದಾನೆ. ಮನುಷ್ಯರಾಗಿ ಹುಟ್ಟಿದವರಲ್ಲಿ ಒಬ್ಬನಾದರೂ ನನ್ನನ್ನು ಬಿಡಿಸಲಾರನು. ಅಯ್ಯೋ! ಅನಂತ ಕಾಲವೇ! ಅನಂತ ಕಾಲವೇ! ಅನಂತ ಕಾಲದ ವರೆಗೆ ಬರುವ ಸಂಕಟವನ್ನು ನಾನು ತಾಳುವದು ಹ್ಯಾಗೆ?

ವ್ಯಾ. ಕ್ರಿಸ್ತಿಯನೇ, ಈ ಮನುಷ್ಯನ ಸಂಕಟವು ನಿಮಗೆ ಜ್ಞಾಪಕವಿರಲಿ; ಅದನ್ನು ನೆನಸಿ, ನಿತ್ಯ ಜಾಗ್ರತೆಯಿಂದ ಇರ್ರಿ.

ಕ್ರಿ. ಅದು ಭಯಂಕರವೇ ಸರಿ. ನಾನು ಜಾಗ್ರತೆಯೂ ಮಿತಾನುಭೋಗವೂ ಉಳ್ಳವನಾಗಿ ಇವನನ್ನು ಕೆಡಿಸಿದ ಮೋಸಗಳಿಗೆ ದೂರವಾಗುವ ಹಾಗೆ ದೇವರು ಸಹಾಯ ಮಾಡಲಿ. ಈಗ ಪ್ರಯಾಣದಲ್ಲಿ ಮುಂದೆ ಹೋಗುವ ಸಮಯವಾಯಿತೋ?

ವ್ಯಾ. ಇನ್ನೊಂದು ನಾನು ತೋರಿಸುವ ಪರ್ಯಂತರ ನಿಲ್ಲಿರಿ. ಅದರ ಮೇಲೆ ಹೋಗ ಬಹುದು.

ಆಗಲವನು ತಿರಿಗಿ ಕ್ರಿಸ್ತಿಯನ ಕೈ ಹಿಡಿದು, ಒಂದು ಕೋಣೆಗೆ ಕರೆ ಕೊಂಡು ಹೋದನು. ಅಲ್ಲಿ ಒಬ್ಬನು ಮಂಚದಿಂದ ಇಳಿಯುವವನಾಗಿದ್ದನು. ಅವನು ತನ್ನ ವಸ್ತ್ರಗಳನ್ನು ಹೊದ್ದುಕೊಳ್ಳುವಾಗ ನಡುಗುತ್ತಾ ಇದ್ದನು. ಈ ಮನುಷ್ಯನು ಇಷ್ಟು ನಡುಗುವದು ಯಾಕೆಂದು ಕ್ರಿಸ್ತಿಯನು ಕೇಳಿದಾಗ, ವ್ಯಾಖ್ಯಾನಿಯು, ನಿನ್ನ ನಡುಗುವಿಕೆಯ ಕಾರಣವನ್ನು ಕ್ರಿಸ್ತಿಯನಿಗೆ ತಿಳಿಸ ಬೇಕೆಂದು ಆ ಮನುಷ್ಯನಿಗೆ ಆಜ್ಞಾಪಿಸಿದನು. ಅವನು ಹೇಳಿದ್ದೇನಂದರೆ, ಈ ರಾತ್ರಿ ನಾನು ನಿದ್ರೆ ಮಾಡುತ್ತಿರುವಾಗ ಆಕಾಶವು ಕಗ್ಗತ್ತಲೆಯಾಗುವದನ್ನು ಕನಸಿನಲ್ಲಿ ಕಂಡೆನು. ಭಯಂಕರವಾದ ಗುಡುಗು ಮಿಂಚುಗಳು ಉಂಟಾಗುವದರಿಂದ ನಾನು ಭಯಸ್ತನಾಗಿ ಮೇಲಕ್ಕೆ ನೋಡುವಾಗ, ನಾನು ಎಂದಿಗೂ ನೋಡದಂಥ ಮೋಡವು ಆಕಾಶದಲ್ಲಿ ಕಂಡೆನು. ತುತೂರಿಯ ಮಹಾಧ್ವನಿಯನ್ನು ಕೇಳಿ ಪರಲೋಕದ ಸಹಸ್ರ

ವಾಸಿಗಳ ಸಂಗಡ ಕೂಡಿ ಇರುವ ಪುರುಷನು ಮೇಘದ ಮೇಲೆ ಕೂತಿರುವದನ್ನು ನೋಡಿದೆನು. ಆಕಾಶಗಳು ಅಗ್ನಿಯಿಂದ ದಹಿಸುತ್ತಿದ್ದವು. ಅದರ ಮೇಲೆ, ಸತ್ತವರೇ, ಎದ್ದು ನ್ಯಾಯಕ್ಕೆ ಬರ್ರಿ ಎಂಬ ಶಬ್ದ ಉಂಟಾದಾಗ, ಬಂಡೆಗಳು ಒಡೆದು, ಸಮಾಧಿಗಳು ತೆರದು, ಅವುಗಳಲ್ಲಿರುವ ಸತ್ತವರು ಹೊರಗೆ ಬಂದರು. ಕೆಲವರು ಅತಿ ಹರ್ಷದಿಂದ ಮೇಲಕ್ಕೆ ನೋಡುತ್ತಾ, ಕೆಲವರು ಪರ್ವತಗಳ ಬುಡದಲ್ಲಿ ಅಡಗಿ ಕೊಳ್ಳುವದಕ್ಕೆ ನೋಡುತ್ತಾ, ಇದ್ದರು. ಆಗಲು ಆ ಮೇಘದ ಮೇಲೆ ಕೂತ ಪುರುಷನು ಪುಸ್ತಕವನ್ನು ತೆರದು, ಲೋಕದವರೇ, ಬರ್ರಿ, ಎಂದು ಆಜ್ಞಾಪಿಸುವದನ್ನು ಕಂಡೆನು. ಆದಾಗ್ಯೂ ಆತನ ಸುತ್ತಲೂ ಇರುವ ಆತನಿಂದ ಹೊರಟ ಅಗ್ನಿ ಜ್ವಾಲೆಗೋಸ್ಕರ ನ್ಯಾಯಾಧಿಪತಿಗೆ ಅಪರಾಧಿಗಳು ದೂರ ನಿಲ್ಲುವ ಪ್ರಕಾರ ಆತನಿಗೆ ಲೋಕದವರು ದೂರ ಇದ್ದರು. ಮತ್ತು ಆ ಮೇಘದ ಮೇಲೆ ಕೂತ ಪುರುಷನು ತನ್ನ ಸೇವಕರಿಗೆ, ಹೊಟ್ಟು ಕೂಳೆಗಳನ್ನು ಕೂಡಿಸಿ ಬೆಂಕಿಯಲ್ಲಿ ಹಾಕಿರೆಂದು ಆಜ್ಞಾಪಿಸಿದ್ದನ್ನು ಕೇಳಿದೆನು. ಕೇಳಿದಾಗಲೇ ನಾನು ನಿಂತಲ್ಲಿ ಅಗಾಧವಾದ ಕುಣಿ ತೆರೆಯಿತು. ಅದರ ಬಾಯಿಯೊಳಗಿಂದ ಹೊಗೆಯೂ ಪುರಿಕೆಂಡಗಳೂ ಭಯಂಕರವಾದ ಬೊಬ್ಬೆಗಳೂ ಬಹಳವಾಗಿ ಹೊರಟವು. ಅದೇ ಜನರಿಗೆ, ನನ್ನ ಧಾನ್ಯವನ್ನು ಕಣಜಕ್ಕೆ ತುಂಬಿಸಿರೆಂದು ಅಪ್ಪಣೆಯಾದಾಗ, ಅನೇಕರು ಎತ್ತಲ್ಪಟ್ಟು ಮೇಘಗಳ ಮೇಲೆ ವೈಯಲ್ಪಟ್ಟದ್ದನ್ನು ನೋಡಿದೆನು. ಆದರೆ ನನ್ನನ್ನು ಅವರು ಬಿಟ್ಟು ಹೋದರು. ನಾನು ಅಡಗಿ ಕೊಳ್ಳಲಿಕ್ಕೆ ನೋಡುವಾಗ ಸ್ಥಳ ಶಿಕ್ಕಲಿಲ್ಲ. ಯಾಕಂದರೆ ಆ ಮೇಘದ ಮೇಲೆ ಕೂತವನು ನನ್ನ ಮೇಲೆ ಕಣ್ಣಿಡುತ್ತಾ ಇದ್ದನು. ನನ್ನ ಪಾಪಗಳು ಸಹ ನನ್ನ ನೆನಪಿಗೆ ಬಂದವು. ನನ್ನ ಮನಸ್ಸಾಕ್ಷಿಯು ಎಲ್ಲಾ ಕಡೆಯಿಂದ ನನಗೆ ಅಪರಾಧವನ್ನು ಹೊರಿಸುತ್ತಾ ಇತ್ತು. ಅಷ್ಟರೊಳಗೆ ನಾನು ನಿದ್ರೆ ತಿಳಿದೆನು.

ಕ್ರಿ. ಆಗ ನೋಡಿದದಕ್ಕೆ ನೀವು ಅಷ್ಟು ಭಯ ಪಟ್ಟದ್ದು ಯಾಕೆ?

ಮ ನ. ನ್ಯಾಯತೀರ್ವಿಕೆಯ ದಿವಸವು ಬಂತೆಂದೂ, ಅದಕ್ಕೆ ನಾನು ಸಿದ್ಧವಾಗಲಿಲ್ಲವೆಂದೂ, ನೆನಸಿದೆನು. ಆದರೆ ದೂತರು ಅನೇಕರನ್ನು ಎತ್ತಿ ನನ್ನನ್ನು ಉಳಿಸಿದದರಿಂದಲೂ, ನರಕವೆಂಬ ಕುಣಿಯು ನಾನು ನಿಂತಲ್ಲೇ ಬಾಯಿಯನ್ನು ತೆರದದರಿಂದಲೂ, ನಾನು ಹೆಚ್ಚಾಗಿ ಭಯ ಪಟ್ಟೆನು. ನನ್ನ ಮನಸ್ಸಾಕ್ಷಿಯು ಸಹ ನನ್ನನ್ನು ಹೆದರಿಸಿತು. ಮತ್ತು ನ್ಯಾಯಾಧಿಪತಿಯು ಕೋಪ ದೃಷ್ಟಿಯಿಂದ ನನ್ನನ್ನೇ ನೋಡುತ್ತಿದ್ದನೆಂದು ತಿಳು ಕೊಂಡೆನು.

ವ್ಯಾ. ಕ್ರಿಸ್ತಿಯನೇ, ಇವುಗಳನ್ನೆಲ್ಲಾ ನೀವು ಚನ್ನಾಗಿ ಆಲೋಚಿಸಿದಿರೋ?

ಕ್ರಿ. ಹೌದು, ಅವು ನಂಬಿಗೆಯನ್ನೂ ಭಯವನ್ನೂ ನನಗೆ ಹುಟ್ಟಿಸುತ್ತವೆ.

ವ್ಯಾ. ಒಳ್ಳೇದು, ಅವುಗಳನ್ನೆಲ್ಲಾ ಮನಸ್ಸಿನಲ್ಲಿ ಇಡಿರಿ. ಹೋಗ ತಕ್ಕ ಮಾರ್ಗದಲ್ಲಿ ಅವು ನಿಮ್ಮನ್ನು ಎಚ್ಚರಿಸುವ ಮುಳ್ಳುಗೋಲಿನ ಹಾಗೆ ಇರುವವು.

ತರುವಾಯ ಕ್ರಿಸ್ತಿಯನು ನಡು ಕಟ್ಟಿ ಕೊಂಡು ಪ್ರಯಾಣಕ್ಕೆ ಹೊರಡುವಾಗ ವ್ಯಾಖ್ಯಾನಿಯು, ದಿವ್ಯ ಸಮುದಾಯಿಸುವಾತನು ಎಂದಿಗೂ ನಿಮ್ಮ ಸಂಗಡ ಇದ್ದು ಪಟ್ಟಣಕ್ಕೆ ಹೋಗುವ ಮಾರ್ಗದಲ್ಲಿ ನಿಮ್ಮನ್ನು ನಡೆಸಲಿ ಎಂದು ಆಶೀರ್ವದಿಸಿದನು. ಆ ಮೇಲೆ ಕ್ರಿಸ್ತಿಯನು ಮಾರ್ಗ ಹಿಡಿದು ಹೇಳಿದ್ದೇನಂದರೆ—

ಕಂಡೆ ನಾನಪರೂಪನೋಟವ
ಕಂಡೆ ನಾನುಪಯೋಗ ಕಾರ್ಯವ
ಕಂಡೆನತಿಸಂತೋಷ ಭಯಗಳನುಂಟುಮಾಡುತಿರೇ |
ಕಂಡೆನ್ನನು ನಿಲಿಸುವದ ಮುಂ
ಗೊಂಡ ಕೆಲಸದಿ ನಿತ್ಯ ನೇನವುತ
ಮಂಡೆಯನು ಬಾಗಿಸುವೆನವುಗಳ ತೋರಿದೈ
ಪ್ರಿಯನೇ ||

---

## 6. The Cross.

## ೬. ಶಿಲುಬೆ.

ಕ್ರಿಸ್ತಿಯನು ನಡೆಯುವ ಮಾರ್ಗದ ಎಡ ಬಲಕ್ಕೆ ಗೋಡೆ ಇರುವದನ್ನು ಕನಸಿನಲ್ಲಿ ಕಂಡೆನು. ಆ ಗೋಡೆಗೆ ರಕ್ಷಣೆ ಎಂಬುವ ಹೆಸರು ಇತ್ತು. ಈ ಪ್ರಕಾರ ಕ್ರಿಸ್ತಿಯನು ಆ ಮಾರ್ಗದಲ್ಲಿ ಓಡುತ್ತಾ ತನ್ನ ಬೆನ್ನಿನ ಮೇಲಿನ ಹೊರೆಗೋಸ್ಕರ ಬಹಳ ಕಷ್ಟ ಪಡುತ್ತಿದ್ದನು.

ಅವನು ಓಡುತ್ತಾ ಸ್ವಲ್ಪ ಎತ್ತರವಾದ ಸ್ಥಳಕ್ಕೆ ಬಂದನು. ಅದರ ಮೇಲೆ ಒಂದು ಶಿಲುಬೆಯೂ, ಸಮೀಪವಾದ ತಗ್ಗಿನಲ್ಲಿ ಒಂದು ಸಮಾಧಿಯೂ, ಇತ್ತು. ಕ್ರಿಸ್ತಿಯನು ಆ ಶಿಲುಬೆಯ ಹತ್ತರ ಬಂದಾಗ ಆ ಹೊರೆ ಅವನ ಬೆನ್ನಿನಿಂದ ಕಳಚಿ ಬಿದ್ದು ಆ ಸಮಾಧಿಯ ಬಾಯಿಯ ತನಕ ಹೊರಳಿ ಅದರೊಳಗೆ ಬೀಳುವದನ್ನು ಕಂಡೆನು. ಆ ಮೇಲೆ ನಾನು ಆ ಹೊರೆ ನೋಡಲಿಲ್ಲ.

ಆಗಲು ಕ್ರಿಸ್ತಿಯನು ಸಂತೋಷದಿಂದಲೂ ಸುಖದಿಂದಲೂ ಇದ್ದು, ಅವನು ಆನಂದ ಪಟ್ಟು, ನನಗೆ ವಿಶ್ರಾಂತಿಯನ್ನೂ, ಮರಣ ಪಟ್ಟು ನನಗೆ ಜೀವವನ್ನೂ, ಕೊಟ್ಟಿದ್ದಾನೆಂದು ಮನೋ ವಿಲಾಸದಿಂದ ಹೇಳಿ, ಆ ಶಿಲುಬೆ ನೋಡುತ್ತಲೇ ತನ್ನ ಹೊರೆ ಬಿದ್ದು ಹೋದದ್ದು ಹ್ಯಾಗೆಂದು ಆಶ್ಚರ್ಯ ಪಟ್ಟು ಶಿಲುಬೆಯನ್ನು ನೋಡುತ್ತಾ ನಿಂತನು. ಅವನು ನೋಡಿ ನೋಡಿ ಇರುವಾಗ ತಲೆಯಲ್ಲಿರುವ ಬುಗ್ಗೆಗಳು ಕೆನ್ನೆಗಳ ಮೇಲೆ ಕಣ್ಣೀರು ಸುರಿಸಿದವು. ಈ ಪ್ರಕಾರ ಅವನು ನೋಡಿ ಅಳುತ್ತಾ ನಿಂತಿರುವಾಗ ಪ್ರಕಾಶ ಉಳ್ಳವರಾದ ಮೂವರು ಅವನ ಹತ್ತರ ಬಂದು ನಿನಗೆ ಸಮಾಧಾನವೆಂದು ಹೇಳಿ ವಂದಿಸಿದರು. ಮೊದಲನೆಯವನು, ನಿನ್ನ ಪಾಪಗಳು ಪರಿಹರಿಸಲ್ಪಟ್ಟಿವೆ ಎಂದು ಹೇಳಿದನು. ಎರಡನೆಯವನು, ಅವನ ಹರಕು ಬಟ್ಟೆಗಳನ್ನು ತೆಗದು ಹಾಕಿ ಬದಲು ವಸ್ತ್ರಗಳನ್ನು ತೊಡಿಸಿದನು. ಮೂರ

ನೆಯುವನು, ಅವನ ಹಣೆಯ ಮೇಲೆ ಒಂದು ಗುರುತನ್ನಿಟ್ಟು, ಮುದ್ರೆ ಮಾಡಿದ ಒಂದು ಸುರಳಿಯನ್ನು ಕೊಟ್ಟನು, ಮತ್ತು ಓಡುವಾಗ ಇದನ್ನೆ ನೋಡ ಬೇಕು. ಪರಲೋಕದ ಬಾಗಲಿಗೆ ಮುಟ್ಟಿದಾಗ ದ್ವಾರಪಾಲಕರಿಗೆ ಅದನ್ನು ಕೊಡ ಬೇಕು, ಎಂದು ಹೇಳಿ, ಅವರು ಹೋದರು. ಆಗ ಕ್ರಿಸ್ತಿಯನು ಅತಿ ಹರ್ಷದಿಂದ ಮೂರು ಸಾರಿ ಹಾರಿ, ಮುಂದಿನ ಮಾರ್ಗ ಹಿಡಿದು ಹಾಡಿದ್ದೇನಂದರೆ—

ಪಾಪದ ಹೊರೆಯಿಂದೀಪರಿಯಂತರ
ತಾಪವ ಗೊಂಡೆನು ಹೋಯಿತದು
ಆಪತ್ತಿಲ್ಲದ ಸುಖವೆನಗಾಯಿತು
ಈ ಪರಿಶುದ್ಧ ಸ್ಥಳವೇನೊ || ೧ ||
ಉತ್ತಮ ಶಿಲ್ಬೆಯ ಸ್ತೋತ್ರ ಸಮಾಧಿಯೆ
ಬಿತ್ತದು ಬೆನ್ನಿನ ಹೊರೆ ಈಗ
ಒತ್ತಾಳೆಮ್ಮೆಯ ನಿಂದೆಯ ಪಟ್ಟು
ಸತ್ತವಗಾಗಲಿ ಘನ ಸ್ತೋತ್ರ. || ೨ ||

## 7. The Hill Difficulty.

## ೭. ಪ್ರಯಾಸ ಗುಡ್ಡವು.

ತರುವಾಯ ಅವನು ಈ ಪ್ರಕಾರ ನಡೆದು ದಿನ್ನೆಯ ಬುಡಕ್ಕೆ ಬಂದಾಗ ಅಲ್ಲಿ ಗಾಢ ನಿದ್ರೆ ಗೈಯ್ಯುವ ಕಣಕಾಲಿಗೆ ಸಂಕೋಲೆ ಕಟ್ಟಿದ ಮೂರು ಮಂದಿಯನ್ನು ಅವನು ನೋಡಿದ್ದನ್ನು ನಾನು ಕನಸಿನಲ್ಲಿ ಕಂಡೆನು. ಅವರಲ್ಲಿ ಒಬ್ಬನ ಹೆಸರು ಹೆಡ್ಡನು. ಮತ್ತೊಬ್ಬನ ಹೆಸರು ಮೈಗಳ್ಳನು. ಇನ್ನೊಬ್ಬನ ಹೆಸರು ಗರ್ವಿಯು.

ಈ ಅವಸ್ಥೆಯಲ್ಲಿ ಬಿದ್ದಿರುವವರನ್ನು ಕ್ರಿಸ್ತಿಯನು ನೋಡಿ, ಒಂದು ವೇಳೆ ಎಬ್ಬಿಸ ಬಹುದೋ? ಎಂದು ಅವರ ಹತ್ತಿರ ಹೋಗಿ, ಕೂಗಿ, ನೀವು ಹಡಗ ಸ್ತಂಭದ ಕೊನೆಯಲ್ಲಿ ಮಲಗುವವರ ಹಾಗಿ

ದ್ಧೀರಿ. ಮರಣದ ಸಮುದ್ರವೂ ನೆಲವಿಲ್ಲದ ಗುಂಡಿಯೂ ನಿಮ್ಮ ಕೆಳಗಿವೆ. ಹೀಗಿರುವದರಿಂದ ನೀವು ಎಚ್ಚತ್ತು ಬನ್ನಿ. ನಿಮಗೆ ಮನಸ್ಸಿದ್ದರೆ ನಿಮ್ಮ ಸಂಕೋಲೆಗಳನ್ನು ಬಿಡಿಸಿ ಕೊಳ್ಳುವದಕ್ಕೆ ಸಹಾಯ ಮಾಡುವೆನು. ಗರ್ಜಿಸುವ ಸಿಂಹದಂತೆ ತಿರುಗಾಡುವವನು ಹತ್ತಿರ ಬಂದರೆ ಅವನ ಹಲ್ಲುಗಳಲ್ಲಿ ನೀವು ಶಿಕ್ಕಿ ಬೀಳುವಿರಿ ಎಂದು ಹೇಳಿದನು. ಈ ಮಾತುಗಳನ್ನು ಕೇಳಿ ಅವರು ಅವನನ್ನು ನೋಡಿ ಪ್ರತ್ಯುತ್ತರವಾಗಿ, ಹೆಡ್ಡನು, ನಾನು ಗಂಡಾಂತರವನ್ನು ಕಾಣೆನೆಂದನು. ಮೈಗಳ್ಳನು, ಇನ್ನೂ ಸ್ವಲ್ಪ ನಿದ್ರೆ ಮಾಡುತ್ತೇನೆಂದನು. ಗರ್ವಿಯು, ತನಗೆ ತಾನು ಮನೆಗೆ ಕಂಭವೆಂದು ಹೇಳಿದನು. ಈ ಪ್ರಕಾರ ಅವರು ತಿರಿಗಿ ಮಲಗಿದರು. ಕ್ರಿಸ್ತಿಯನು ತನ್ನ ಮಾರ್ಗ ಹಿಡಿದು ಹೋದನು.

ಆದಾಗ್ಯೂ ಅಂಥಾ ಗಂಡಾಂತರದಲ್ಲಿರುವ ತಮ್ಮನ್ನು ಎಚ್ಚರಿಸಿ, ಆಲೋಚನೆ ಹೇಳಿ, ಸಂಕೋಲೆಗಳಿಂದ ಬಿಡಿಸುತ್ತೇನೆಂದು ಮಾತು ಕೊಟ್ಟ ಉಪಕಾರವನ್ನು ಆ ಮನುಷ್ಯರು ಅಲ್ಪವೆಂದೆಣಿಸಿದದರಿಂದ ಕ್ರಿಸ್ತಿಯನು ದುಖ್ಖ ಪಟ್ಟನು. ಈ ದುಖ್ಖದಲ್ಲಿ ಅವನು ಇರಲಾಗಿ ಆ ಸಣ್ಣ ಹಾದಿಯ ಎಡಗಡೆ ಗೋಡೆಯ ಮೇಲಿನಿಂದ ಇಬ್ಬರು ಮನುಷ್ಯರು ದುಮುಕಿ ತ್ವರೆಯಾಗಿ ತನ್ನ ಹತ್ತಿರ ಬರುವದನ್ನು ನೋಡಿದನು. ಅವರಲ್ಲಿ ಒಬ್ಬನಿಗೆ ಕರ್ಮಕನು ಮತ್ತೊಬ್ಬಗೆ ಕಪಟಸ್ತನು ಎಂಬ ಹೆಸರುಗಳಿದ್ದವು. ಅವರು ಅವನನ್ನು ಶೇರಿದ ಮೇಲೆ ಉಂಟಾದ ಸಂಭಾಷಣೆ ಏನಂದರೆ,

ಕ್ರಿ. ಎಲ್ಲಿಂದ ಬರೋಣಾಯಿತು? ಎಲ್ಲಿಗೆ ಹೋಗುತ್ತೀರಿ?

ಕರ್ಮಕ. ಕಪಟ. ನಾವು ಡಂಭಾಟ ದೇಶದಲ್ಲಿ ಹುಟ್ಟಿ ಕೀರ್ತಿಗೋಸ್ಕರ ಚಿಯೋನ ಪರ್ವತಕ್ಕೆ ಹೋಗುತ್ತೇವೆ.

ಕ್ರಿ. ಈ ಹಾದಿಯ ಬುಡದ ಬಾಗಲಿನಿಂದ ನೀವು ಯಾಕೆ ಪ್ರವೇಶಿಸಲಿಲ್ಲ? ಬಾಗಲಿನಿಂದ ಪ್ರವೇಶಿಸದೆ ಬೇರೆ ಮಾರ್ಗವಾಗಿ ಹತ್ತುವವನು ಕಳ್ಳನೂ ಮನೆ ಮುರುಕನೂ ಆಗಿರುತ್ತಾನೆಂಬ ಬರಹವನ್ನು ತಿಳಿಯಲಿಲ್ಲವೋ?

ಕರ್ಮ. ಕಪ. ನಮ್ಮ ದೇಶದವರೆಲ್ಲರು ಬಾಗಲಿಂದ ಪ್ರವೇಶಿಸುವದು ಬಹಳ ಸುತ್ತುವೆಂದು ನೆನಸಿ, ಸಾಧಾರಣವಾಗಿ ನೆಟ್ಟಗೆ ಕಾಡಿನಿಂದ ಬಂದು ಗೋಡೆ ಏರಿ ದಾಟುವದರಿಂದ ನಾವೂ ಹಾಗೆಯೇ ಮಾಡಿದೆವು.

ಕ್ರಿ. ನಾವು ಹೋಗುವ ಪಟ್ಣದ ಯಜಮಾನನು ನಮಗೆ ತಿಳಿಸಿದ ಚಿತ್ತವನ್ನು ಹೀಗೆ ಶೇರಿ ಮೀರುವದು ದ್ರೋಹ ಮಾಡಿದ ಹಾಗೆ ಅಲ್ಲವೋ?

ಕ. ಕ. ಇದು ನಿಮಗೇನು? ನಾವು ಮಾಡಿದ್ದೇ ನಮಗೆ ಸಂಪ್ರದಾಯು. ಅವಶ್ಯವಾದರೆ ಸಾವಿರ ವರುಷಗಳಿಂದ ಈ ಪ್ರಕಾರ ನಡಿಯಿತೆಂಬುವದಕ್ಕೆ ಸಾಕ್ಷಿ ತಂದೇವು.

ಕ್ರಿ. ನಿಮ್ಮ ನಡತೆಯನ್ನು ನ್ಯಾಯದ ಪ್ರಕಾರ ಪರೀಕ್ಷೆ ಮಾಡಿದರೆ ಅದು ಸಮವಾಗುವದೋ?

ಕ. ಕ. ಸಾವಿರ ವರುಷದ ಆಚೆಯಿಂದ ನಡೆದ ಸಂಪ್ರದಾಯವು ಮುಖದಾಕ್ಷಿಣ್ಯ ನೋಡದ ನ್ಯಾಯಾಧಿಪತಿಗೆ ನ್ಯಾಯವಾಗಿಯೇ ಕಾಣುವದು. ಮಾರ್ಗದಲ್ಲಿ ಶೇರಿದರೆ, ಸಾಕಲ್ಲವೋ? ಯಾವ ಪ್ರಕಾರ ಶೇರಿದರೂ ಚಿಂತೆ ಇಲ್ಲ. ಶೇರಿದ ಮೇಲೆ ಒಳಗಾದರು. ಬಾಗಲಿಂದ ಪ್ರವೇಶಿಸಿದ ನೀವೂ ಒಳಗಿದ್ದೀರಿ. ಗೋಡೆಯ ಮೇಲಿನಿಂದ ದುಮುಕಿದ ನಾವೂ ಒಳಗಿದ್ದೇವೆ. ನಿಮಗೂ ನಮಗೂ ಹೆಚ್ಚು ಕಡಮೆ ಏನು?

ಕ್ರಿ. ನಾನು ನನ್ನ ಯಜಮಾನನ ಸೂತ್ರದಿಂದ ನಡೆಯುತ್ತೇನೆ. ನೀವು ಕಂಡಾಬಟ್ಟೆ ಮನಸೋ ಇಚ್ಛೆಯಾಗಿ ನಡೆಯುತ್ತೀರಿ. ಮಾರ್ಗದ ಯಜಮಾನನು ಈಗ ನಿಮ್ಮನ್ನು ಕಳ್ಳರೆಂದು ನೆನಸುತ್ತಾನೆ. ಆದ ಕಾರಣ ಮಾರ್ಗದ ಅಂತ್ಯದಲ್ಲಿ ನೀವು ಸತ್ಯವಂತರಾಗಿ ಕಾಣಲಿಕ್ಕಿಲ್ಲವೆಂದು ಯೋಚಿಸುತ್ತೇನೆ. ಆತನ ಅಪ್ಪಣೆ ಇಲ್ಲದೆ ನಿಮ್ಮಷ್ಟಕ್ಕೆ ಪ್ರವೇಶಿಸಿದಿರಿ. ಹಾಗೆಯೇ ಆತನ ಕನಿಕರವಿಲ್ಲದೆ ಹೊರಡುವಿರಿ.

ಈ ಮಾತಿಗೆ ಅವರು ಪೂರ್ಣ ಉತ್ತರವನ್ನು ಕೊಡದೆ, ನಿಮ್ಮ

ಕೆಲಸ ನೀವು ನೋಡಿ ಕೊಳ್ಳಿರಿ, ಅಂದರು. ತರುವಾಯ ಅವರು ವಿಶೇಷವಾದ ಸಂಭಾಷಣೆ ಮಾಡದೆ ಸ್ವಲ್ಪ ದೂರ ಹೋದ ಮೇಲೆ ಅವರಿಬ್ಬರು ಕ್ರಿಸ್ತಿಯನಿಗೆ ಹೇಳಿದ್ದೇನಂದರೆ, ನ್ಯಾಯಗಳನ್ನೂ ಕಟ್ಟಳೆಗಳನ್ನೂ ನೀವು ಕೈ ಕೊಂಡ ಹಾಗೆಯೇ ನಾವು ಸಹ ಜಾಗ್ರತೆಯಿಂದ ಕೈ ಕೊಂಡೇವು. ಹೀಗಿರುವದರಿಂದ ನಿಮ್ಮ ಬೆತ್ತಲೆತನದ ನಾಚಿಕೆಯನ್ನು ಮರೆ ಮಾಡುವದಕ್ಕೆ ನೆರೆಯುವರಲ್ಲಿ ಕೆಲವರು ನಿಮಗೆ ಕೊಟ್ಟ ಈ ವಸ್ತ್ರಗಳ ಹೊರ್ತಾಗಿ ನಿಮಗೂ ನಮಗೂ ಬೇರೆ ಏನೂ ಭೇದ ಕಾಣೆವು.

ಕ್ರಿ. ನೀವು ಬಾಗಲಿನಿಂದ ಪ್ರವೇಶಿಸದೆ ಇದ್ದದರಿಂದ ನೇಮನಿಷ್ಠೆ ಕೈ ಕೊಳ್ಳುವದರಿಂದ ನೀವು ರಕ್ಷಣೆ ಹೊಂದಲಾರಿರಿ. ನನ್ನ ಮೈ ಮೇಲೆ ಇರುವ ಈ ವಸ್ತ್ರಗಳನ್ನು ನಾನು ಹೋಗುವ ಸ್ಥಳದ ಯಜಮಾನನು ನೀವು ಹೇಳಿದ ಹಾಗೆಯೇ ನನ್ನ ಬೆತ್ತಲೆತನವನ್ನು ಮರೆ ಮಾಡುವದಕ್ಕೋಸ್ಕರ ಕೊಟ್ಟಿದ್ದಾನೆ. ಮುಂಚೆ ಹರಕು ವಸ್ತ್ರಗಳೇ ಹೊರ್ತು ನನಗೆ ಏನೂ ಇಲ್ಲದ ಕಾರಣ ಅವನು ವಸ್ತ್ರ ಕೊಟ್ಟದ್ದು ದಯೆಪಾಯಿತೆಂದು ನೆನಸುತ್ತೇನೆ. ಇದಲ್ಲದೆ ನಾನು ಪಟ್ಣದ ಬಾಗಲಿಗೆ ಮುಟ್ಟಿದಾಗ ಆ ಪಟ್ಣದ ಯಜಮಾನನು ತಾನು ಕೊಟ್ಟ ವಸ್ತ್ರಗಳು ಹೊದ್ದಿರುವ ನನ್ನನ್ನು ದಯದಿಂದ ನೋಡುವನೆಂದು ನಾನು ಹೋಗುವ ಮಾರ್ಗದಲ್ಲಿ ಸಂತೈಸಿ ಕೊಳ್ಳುತ್ತೇನೆ. ಆತನು ನನ್ನ ಹರಕು ವಸ್ತ್ರಗಳನ್ನು ತೆಗದು ಹಾಕುವ ದಿನದಲ್ಲಿ ಈ ವಸ್ತ್ರಗಳನ್ನು ಉಚಿತವಾಗಿ ನನಗೆ ಕೊಟ್ಟನು. ಇದಲ್ಲದೆ ನನ್ನ ಹಣೆಯ ಮೇಲೆ ಒಂದು ಗುರುತು ಉಂಟು, ಅದನ್ನು ನೀವು ನೋಡಲಿಲ್ಲವೆಂದು ಕಾಣುತ್ತದೆ. ನನ್ನ ಹೊರೆ ನನ್ನ ಹೆಗಲಿನಿಂದ ಕಳಚಿ ಹೋದ ದಿವಸದಲ್ಲಿ ನನ್ನ ಯಜಮಾನನ ಪರಮ ಮಿತ್ರರಲ್ಲಿ ಒಬ್ಬನು ಅದನ್ನು ಹಚ್ಚಿದ್ದಾನೆ. ಇದರ ಹೊರ್ತಾಗಿ ಮಾರ್ಗದಲ್ಲಿ ಉಪಶಮನ ಹೊಂದುವ ಬಗ್ಯೆ ನಾನು ಓದ ತಕ್ಕ ಮುದ್ರಿತವಾದ ಸುರಳಿಯು ಆ ದಿನದಲ್ಲಿ ನನಗೆ ಕೊಡಲ್ಪಟ್ಟಿತು. ನಾನು ನಿಶ್ಚಯವಾಗಿ ಪ್ರವೇಶಿಸ ಬಹುದೆಂಬುವದಕ್ಕೆ ಸಾಕ್ಷಿಗಾಗಿ, ಪರಲೋಕದ ದ್ವಾರದಲ್ಲಿ ದ್ವಾರಪಾಲಕ

ರಿಗೆ ಅದನ್ನು ಕೊಟ್ಟು ಬಿಡ ಬೇಕೆಂದು ಅಪ್ಪಣೆಯಾಯಿತು. ಇವು ಗಳೆಲ್ಲಾ ಬಾಗಲಿನಿಂದ ಪ್ರವೇಶಿಸದ ನಿಮಗೆ ಇರುವದಿಲ್ಲವೆಂಬ ಹಾಗೆ ಕಾಣುತ್ತದೆ.

ಈ ಮಾತುಗಳಿಗೆ ಅವರು ಉತ್ತರ ಕೊಡದೆ ತಮ್ಮ ತಮ್ಮೊಳಗೆ ಮುಖಗಳನ್ನು ನೋಡಿ ಕೊಂಡು ನಕ್ಕರು. ಆ ತರುವಾಯ ಅವರೆಲ್ಲರು ಮುಂದಕ್ಕೆ ಹೋಗುವದನ್ನು ನೋಡಿದೆನು. ಕ್ರಿಸ್ತಿಯನು ಮಾತ್ರ ಮುಂದಾಗಿ ನಡೆದು ಒಂದು ವೇಳೆ ಧಾನತಿಯಿಂದ ಉಸುರು ಬಿಡುತ್ತಾ, ಒಂದು ವೇಳೆ ಸಮಾಧಾನ ಪಡುತ್ತಾ, ತನ್ನೊಳಗೆ ತಾನೇ ಮಾತಾಡಿ ಕೊಂಡು, ಆ ಕಾಂತಿಯುಳ್ಳವರಲ್ಲಿ ಒಬ್ಬನು ತನಗೆ ಕೊಟ್ಟ ಸುರಳಿಯನ್ನು ತಿರಿಗಿ ತಿರಿಗಿ ಓದುತ್ತಾ ಸಂತೋಷ ಪಟ್ಟನು.

ಈ ಪ್ರಕಾರ ಅವರೆಲ್ಲರು ಪಯಣಗತಿಯಿಂದ ಕಷ್ಟವೆಂಬ ಬೆಟ್ಟದ ಅಡಿಗೆ ಬಂದರು. ಆ ಸ್ಥಳದಲ್ಲಿ ಒಂದು ಬುಗ್ಗೆ ಇತ್ತು. ಇಕ್ಕಟ್ಟಿನ ಬಾಗಲಿನಿಂದ ನೆಟ್ಟಗೆ ಬರುವ ಮಾರ್ಗದ ಹೊರ್ತು ಇನ್ನೆರಡು ಮಾರ್ಗಗಳು ಇದ್ದವು. ಅವುಗಳಲ್ಲಿ ಒಂದು ಆ ಬೆಟ್ಟದ ಬಲಗಡೆಗೂ ಒಂದು ಎಡಗಡೆಗೂ ಹೋಗಿತ್ತು. ಸಣ್ಣ ಹಾದಿಯು ಮಾತ್ರ ಸರಿಯಾಗಿ ಕಷ್ಟವೆಂಬ ಪರ್ವತದ ಮೇಲಕ್ಕೆ ಏರಿ ಇತ್ತು. ಹೀಗಿರಲಾಗಿ ಕ್ರಿಸ್ತಿಯನು ಆ ಬುಗ್ಗೆಯ ಹತ್ತರ ಹೋಗಿ ನೀರು ಕುಡಿದು, ಆಯಾಸ ತೀರಿಸಿ ಕೊಂಡು, ಬೆಟ್ಟ ಏರಲಿಕ್ಕೆ ಆರಂಭಿಸಿ ಹೇಳಿದ್ದೇನಂದರೆ,

ಏರ ಬೇಕೀ ಉನ್ನತದಗಿರಿ
ಬೇರೆ ಮಾರ್ಗವ ಕಾಣೆ ಜೀವಕೆ
ಶೇರಲಾರೆನು ನಿತ್ಯ ರಾಜ್ಯದಿ ತಾಳದತಿ ಶ್ರಮವ ||
ಮಾರಿ ಸಾವುದಕ್ಕಿಂತ ಉತ್ತಮ
ದಾರಿಯೊಳಗಣ ಕಷ್ಟವೇಸದೆ
ಧೀರತನದಲಿ ಬೆಟ್ಟ ಕಡರುವೆ ತ್ಯಜಿಸಿ ಕಡುಭಯವ ||

ಆ ಬೇರೆ ಇಬ್ಬರು ಬೆಟ್ಟದ ಬುಡಕ್ಕೆ ಬಂದು ಅದು ಎತ್ತರವೂ ಕಡದೂ ಆಗಿರುವದನ್ನೂ ಅದರ ಹೊರ್ತು ಬೇರೆ ಎರಡು ಮಾರ್ಗ

ಗಳು ಇರುವದನ್ನೂ ಕಂಡರು. ಹೀಗಿರಲಾಗಿ ಆ ಎರಡು ಮಾರ್ಗ ಗಳು ಬೆಟ್ಟದ ಆಚೆಯಲ್ಲಿ ಕ್ರಿಸ್ತಿಯನು ಹೋದ ಮಾರ್ಗಕ್ಕೆ ಕೂಡ್ಯಾವೆಂದು ನೆನಸಿ, ಆ ಮಾರ್ಗಗಳನ್ನು ಹಿಡಿಯ ಬೇಕೆಂದು ನಿಶ್ಚಯಿಸಿದರು. ಅವುಗಳಲ್ಲಿ ಒಂದಕ್ಕೆ ಗಂಡಾಂತರವೂ ಒಂದಕ್ಕೆ ನಾಶನವೂ ಎಂಬ ಹೆಸರುಗಳಿದ್ದವು. ಅವರಲ್ಲಿ ಒಬ್ಬನು ಗಂಡಾಂ ತರವೆಂಬ ಮಾರ್ಗದಲ್ಲಿ ಸೇರಿ ದೊಡ್ಡ ಅಡವಿಯಲ್ಲಿ ಬಿದ್ದನು. ಮತ್ತೊಬ್ಬನು ನಾಶನದ ಮಾರ್ಗವನ್ನು ಪ್ರವೇಶಿಸಿ ಬಂಡೆಗಳು ತುಂಬಿ ರುವ ಒಂದು ಬೈಲಿಗೆ ಬಂದು ಎಡವಿ ಬಿದ್ದು ತಿರಿಗಿ ಏಳದೆ ಹೋದನು.

ಕ್ರಿಸ್ತಿಯನು ಆ ಬೆಟ್ಟವನ್ನು ಹ್ಯಾಗೆ ಏರುವನೋ ಎಂದು ನಾನು ನೋಡುವಾಗ, ಅವನು ಮೊದಲು ಓಡುತ್ತಾ ಆ ಮೇಲೆ ನಡೆ ಯುತ್ತಾ ಕಡೆಯಲ್ಲಿ ಬಹಳ ಕಡಿದಾದ ಸ್ಥಳದಲ್ಲಿ ಅಂಬೆಗಾಲಾಗಿ ಹೋಗುತ್ತಾ ಇರುವದನ್ನು ಕಂಡೆನು. ಹೆಚ್ಚು ಕಡಿಮೆ ಬೆಟ್ಟದ ಮಧ್ಯ ಮಾರ್ಗದಲ್ಲಿ ಬೆಟ್ಟದ ಯಜಮಾನನು ಆಯಾಸದಿಂದ ಬರುವ ಪ್ರಯಾಣಸ್ಥರಿಗೋಸ್ಕರ ಮಾಡಿಸಿದ ರಮ್ಯವಾದ ತೋಪು ಇತ್ತು. ಅದಕ್ಕೆ ಕ್ರಿಸ್ತಿಯನು ಸೇರಿ ವಿಶ್ರಮಿಸಲಿಕ್ಕೆ ಕೂತು ಕೊಂಕುಳಿಂದ ತನ್ನ ಸುರಳಿಯನ್ನು ತೆಗೆದು ಅದರಲ್ಲಿ ಓದಿ ಸಮಾಧಾನ ಪಟ್ಟನು. ಶಿಲುಬೆಯ ಹತ್ತರ ನಿಂತ ಸಮಯದಲ್ಲಿ ತನಗೆ ಹೊಸದಾಗಿ ಶಿಕ್ಕಿದ ವಸ್ತ್ರಗಳನ್ನು ಪರೀಕ್ಷಿಸಿ ಸ್ವಲ್ಪ ಹೊತ್ತು ಆನಂದ ಪಡುತ್ತಾ ಇರು ವ ವೇಳೆಯಲ್ಲಿ ಮೊದಲು ತೂಕಡಿಸಿ ಆ ಮೇಲೆ ಪೂರ್ಣ ನಿದ್ರೆ ಯಿಂದ ತುಂಬಿದವನಾಗಿ ಅಲ್ಲಿ ಮಲಗಿದನು. ಈ ಕಾರಣದಿಂದ ರಾತ್ರಿ ಸಮೀಪಿಸುವ ಪರ್ಯಂತರ ಆ ಸ್ಥಳದಲ್ಲಿ ತಡವಾಗಿ ಅವನ ಸುರಳಿಯು ಅವನ ಕೈಯಿಂದ ಬಿದ್ದು ಹೋಯಿತು. ಹೀಗೆ ಅವನು ನಿದ್ರೆ ಮಾಡುತ್ತಾ ಇರುವಾಗ ಒಬ್ಬನು ಅವನ ಹತ್ತರ ಬಂದು, ಮೈಗಳ್ಳನೇ, ಇರುವೆಯ ಹತ್ತರ ಹೋಗಿ ಅದರ ನಡತೆಯನ್ನು ನೋಡಿ ಬುದ್ಧಿ ತಂದುಕೊ, ಎಂದು ಹೇಳಿ, ಎಚ್ಚರಿಸಿದನು. ಕ್ರಿಸ್ತಿ ಯನು ಅದನ್ನು ಕೇಳಿದಾಗಲೇ ಶೀವ್ರದಿಂದ ಎದ್ದು ತ್ವರಿತವಾಗಿ

ಮಾರ್ಗವನ್ನು ಹಿಡಿದು ಬೆಟ್ಟದ ತುದಿಗೆ ಮುಟ್ಟುವ ಪರ್ಯಂತರ
ಓಡಿದನು.

ಅವನು ಬೆಟ್ಟದ ತುದಿಗೆ ಮುಟ್ಟಿದಾಗ ಹೇಡಿಯಪ್ಪನು, ಅಧೈ
ರ್ಯಸ್ತನು ಎಂಬ ಇಬ್ಬರು ಅವನಿಗೆ ಎದುರಾಗಿ ಓಡಿ ಬಂದರು. ಅವ
ರನ್ನು ಕ್ರಿಸ್ತಿಯನು ನೋಡಿ, ಐಯ್ಯಗಳೇ, ನೀವು ಹಿಂದಕ್ಕೆ ಓಡು
ವದು ಯಾಕೆ? ಎಂದು ಕೇಳಿದನು. ಹೇಡಿಯಪ್ಪ, ನಾವು ಚೆಯೋನ್
ಪಟ್ಣಕ್ಕೆ ಹೋಗುವ ಮಾರ್ಗದಲ್ಲಿ ಈ ಪ್ರಯಾಸವಾದ ಸ್ಥಳವನ್ನು
ಹತ್ತಿದೆವು. ಆದರೆ ನಾವು ಮುಂದೆ ಮುಂದೆ ಹೋದರೆ ಗಂಡಾಂತ
ರವು ಹೆಚ್ಚು ಹೆಚ್ಚು ಆದೀತೆಂದು ನೆನಸಿ ನಾವು ಹಿಂದಕ್ಕೆ ತಿರುಗಿ
ಮನೆಗೆ ಹೋಗುತ್ತೇವೆ, ಅಂದನು.

ಅಧೈರ್ಯಸ್ತನು. ಹೌದು. ಎರಡು ಸಿಂಹಗಳು ನಮ್ಮ
ಮುಂದೆಯೇ ಮಾರ್ಗದಲ್ಲಿ ಮಲಗಿವೆ. ಅವು ಎಚ್ಚರವಾಗಿವೆಯೋ
ನಿದ್ರೆ ಮಾಡುತ್ತವೋ ನಮಗೆ ತಿಳಿಯದು. ಆದಾಗ್ಯೂ ನಾವು ಹತ್ತರ
ಹೋದರೆ ಅವು ನಮ್ಮನ್ನು ಶೀಳಿ ಬಿಡುವದರಲ್ಲಿ ಸಂದೇಹವಿಲ್ಲವೆಂದು
ನೆನಸಿದೆವು.

ಕ್ರಿ. ನೀವು ನನಗೆ ಭಯ ಹುಟ್ಟಿಸುತ್ತೀರಿ. ಆದರೆ ನಾನು
ನನ್ನ ರಕ್ಷಣೆಗೋಸ್ಕರ ಎಲ್ಲಿಗೆ ಓಡಲಿ? ನನ್ನ ಸ್ವದೇಶಕ್ಕೆ ತಿರಿಗಿ
ಹೋದರೆ, ಅದು ಬೆಂಕಿ ಗಂಧಕಗಳಿಗೆ ಸಿದ್ಧವಾಗಿರುವದರಿಂದ ಅಲ್ಲಿ
ನಾನು ನಾಶವಾಗುವದೇ ಸರಿ. ಪರಲೋಕದ ಪಟ್ಣಕ್ಕೆ ನಾನು ಮುಟ್ಟ
ಬಹುದಾದರೆ ಅಲ್ಲಿ ನಿಶ್ಚಯವಾಗಿ ಕ್ಷೇಮವು. ಹ್ಯಾಗಾದರೂ ಧೈರ್ಯ
ಮಾಡಿ ಕೊಳ್ಳ ಬೇಕು. ಹಿಂದಕ್ಕೆ ಹೋದರೆ ಮರಣವೇ ಪ್ರಾಪ್ತಿ.
ಮುಂದಕ್ಕೆ ಹೋದರೆ ಮರಣದ ಭಯವೂ ಅದರ ಮೇಲೆ ನಿತ್ಯ
ಜೀವವೂ ಪ್ರಾಪ್ತಿಸುವದು. ಆದದರಿಂದ ನಾನು ಹ್ಯಾಗಾದರೂ ಮುಂದ
ಕ್ಕೆ ಹೋಗುತ್ತೇನೆಂದು ಹೇಳಿದನು.

ತರುವಾಯ ಹೇಡಿಯಪ್ಪನೂ ಅಧೈರ್ಯಸ್ತನೂ ಓಡಿ ಹೋಗಿ
ಬೆಟ್ಟವನ್ನು ಇಳಿದರು. ಕ್ರಿಸ್ತಿಯನು ಮುಂದಾಗಿ ಮಾರ್ಗವನ್ನು
ಹಿಡಿದನು. ಆದರೆ ಆ ಮನುಷ್ಯರು ತನಗೆ ಹೇಳಿದ್ದನ್ನು ಆಲೋಚಿ

ಸಿ ಸಮಾಧಾನವನ್ನು ಹೊಂದುವ ಬಗ್ಯೆ ತನ್ನ ಸುರಳಿಯಲ್ಲಿ ಓದ ಬೇಕೆಂದು ಹುಡುಕುವಾಗ್ಯೆ ಅದು ಕಾಣದೆ ಹೋಯಿತು. ಆಗ ಕ್ರಿಸ್ತಿಯನು ಬಹಳ ದುಖ್ಖದಿಂದಿದ್ದು ತನ್ನನ್ನು ಧೈರ್ಯ ಪಡಿಸಿ ಪರ ಲೋಕದ ಪಟ್ಣಕ್ಕೆ ಪ್ರವೇಶವನ್ನುಂಟು ಮಾಡಿದ ಸುರಳಿಯೇ ಬಿದ್ದು ಹೋದದರಿಂದ ಅದಕ್ಕೋಸ್ಕರ ಏನು ಮಾಡ ಬೇಕೆಂದರಿಯದೆ ಹೋದನು. ಈ ಪ್ರಕಾರ ಅವನು ಕಂಗೆಟ್ಟು ಬಹಳ ವ್ಯಾಕುಲದಿಂ ದಿದ್ದು ಕಡೆಯಲ್ಲಿ ಅರೆ ಮಾರ್ಗದಲ್ಲಿರುವ ತೋಪಿನಲ್ಲಿ ತಾನು ನಿದ್ರೆ ಮಾಡಿದ್ದನ್ನು ನೆನಸಿದನು. ನೆನಪಾಗುತ್ತಲೇ ಅವನು ಮೊಣಕಾಲೂರಿ ತಾನು ಮಾಡಿದ ಹುಚ್ಚುತನಕ್ಕೆ ದೇವರಿಂದ ಕ್ಷಮೆಯನ್ನು ಬೇಡಿ ಕೊಂಡು, ತನ್ನ ಸುರಳಿಯನ್ನು ಹುಡುಕುವದಕ್ಕೆ ಹಿಂದಕ್ಕೆ ಹೋದನು. ಅವನು ಹಿಂದಕ್ಕೆ ಹೋಗುವಾಗ ಮಾರ್ಗದಲ್ಲಿ ಪಟ್ಟ ಚಿಂತೆ ಯಾ ರು ವಿವರಿಸುವರು. ಅವನು ಒಂದುವೇಳೆ ಉಸುರು ಬಿಡುತ್ತಾ, ಒಂ ದುವೇಳೆ ಅಳುತ್ತಾ, ಒಂದುವೇಳೆ ಸ್ವಲ್ಪ ಮಾತ್ರ ವಿಶ್ರಾಂತಿ ಪಡ ತಕ್ಕ ಸ್ಥಳದಲ್ಲಿ ತಾನು ಮಲಗಿದ್ದು ಅತಿ ಹುಚ್ಚುತನವೆಂದು ಹೇಳು ತ್ತಾ ಇರುತ್ತಿದ್ದನು. ಈ ಪ್ರಕಾರ ಪ್ರಯಾಣದಲ್ಲಿ ಅನೇಕ ಸಾರಿ ತನ್ನನ್ನು ಸಮಾಧಾನ ಪಡಿಸಿದ ಸುರಳಿಯು ಸಿಕ್ಕುವದೋ ಏನೋ ಎಂದು ಅತಿಜಾಗ್ರತೆಯಿಂದ ಹಾದಿಯ ಇಕ್ಕಡೆಯಲ್ಲಿಯು ನೋಡು ತ್ತಾ ತಾನು ಕೂತು ಮಲಗಿದ ತೋಪನ್ನು ತಿರಿಗಿ ಕಂಡನು. ಅದು ಅವನು ನೋಡುವಾಗ ತಾನು ಮಲಗಿದ ತಪ್ಪು ಹೆಚ್ಚಾಗಿ ನೆನಸಿ ಮತ್ತು ಅಧಿಕವಾದ ಚಿಂತೆ ಪಟ್ಟನು. ಈ ಪ್ರಕಾರ ಅವನು ತನ್ನ ನಿದ್ರೆ ಎಂಬ ಪಾಪಕ್ಕೆ ಗೋಳಾಡುತ್ತಾ, ಅಯ್ಯೋ! ದಿಕ್ಕಿಲ್ಲದ ನಾನು ಮಧ್ಯಾಹ್ನದಲ್ಲಿಯೂ, ಕಷ್ಟದ ಮಧ್ಯದಲ್ಲಿಯೂ, ಮಲಗ ಬೇಕಾ ಯಿತೇ? ಪ್ರಯಾಣದವರ ಆತ್ಮೋಪಶಮನಕ್ಕಾಗಿ ಬೆಟ್ಟದ ಯಜ ಮಾನನು ನೇಮಿಸಿದ ವಿಶ್ರಾಂತಿಯನ್ನು ಮಾಂಸದ ಸುಖಕ್ಕಾಗಿ ಪ್ರ ಯೋಗಿಸ ಬೇಕಾಯಿತೇ? ಎಷ್ಟೋ ಹೆಜ್ಜೆಗಳು ವ್ಯರ್ಥವಾದವು! ಇಸ್ರಾಯೇಲ್ಯರು ತಮ್ಮ ಪಾಪಗಳಿಗೋಸ್ಕರ ಕೆಂಪು ಸಮುದ್ರದ ಮಾರ್ಗವಾಗಿ ತಿರುಗಿದ ಹಾಗೆ ನನಗೂ ಸಂಭವಿಸಿತಲ್ಲವೋ?

ಪಾಪವಾದ ನಿದ್ರೆಯು ಬಾರದಿದ್ದರೆ ಈ ಮಾರ್ಗದಲ್ಲಿ ಪೂರ್ಣ ಸಂತೋಷದಿಂದ ಹೋಗ ಬಹುದಾಗಿತ್ತು. ಈಗ ನಾನು ದುಖ್ಖದಿಂದಲೇ ಹೋಗ ಬೇಕಾಯಿತು. ಇಷ್ಟರೊಳಗೆ ಎಷ್ಟೋ ದೂರ ಹೋಗ ಬಹುದಾಗಿತ್ತು. ಒಂದು ಸಾರಿ ನಡೆಯ ಬೇಕಾದ ಮಾರ್ಗ ಮೂರು ಸಾರಿ ನಡೆಯ ಬೇಕಾಯಿತು. ಮತ್ತು ಹಗಲು ಸ್ವಲ್ಪ ಉಳಿದ ಕಾರಣ ರಾತ್ರಿಯಲ್ಲಿಯು ನಡೆಯ ಬೇಕಾಗುವದು. ಅಯ್ಯೋ! ನಾನು ನಿದ್ರೆ ಮಾಡ ಬಾರದಾಗಿತ್ತು, ಅಂದನು. ಈ ಪ್ರಕಾರ ಅವನು ಅಂಗಲಾಚುತ್ತಾ, ತಿರಿಗಿ ಆ ತೋಪಿಗೆ ಶೇರಿ, ಸ್ವಲ್ಪ ಕೂತು ಕೊಂಡು, ಅತ್ತು, ಕಡೆಯಲ್ಲಿ ತಾನು ಮುಂಚೆ ಕೂತ ಸ್ಥಳದಲ್ಲಿ ಅತಿ ವ್ಯಾಕುಲದಿಂದ ಹುಡುಕಿ, ತನ್ನ ಸುರಳಿಯನ್ನು ಕಂಡು, ಸಂತೋಷದಿಂದ ನಡುಗಿ, ಅದನ್ನು ಎತ್ತಿ ಕೊಂಡು, ತನ್ನ ಮಡಲಲ್ಲಿ ಇಟ್ಟು ಕೊಂಡನು. ಯಾಕಂದರೆ ಆ ಸುರಳಿಯಲ್ಲಿ ಅವನ ಜೀವದ ನಿಶ್ಚಯವೂ, ತಾನು ಅಪೇಕ್ಷಿಸುವ ರೇವಿನಲ್ಲಿ ಶೇರ ಬಹುದೆಂಬ ಅಪ್ಪಣೆಯೂ, ಬರದಿತ್ತು. ಆದಕಾರಣ ಅವನು ತನ್ನ ಸುರಳಿಯನ್ನು ತಿರಿಗಿ ಕಂಡ ಮೇಲೆ ಪಟ್ಟ ಸಂತೋಷವನ್ನು ವಿವರಿಸುವದು ಹ್ಯಾಗೆ? ಅವನು ಅದನ್ನು ತನ್ನ ಮಡಲಲ್ಲಿ ಹಾಕಿ ಕೊಂಡ ಮೇಲೆ ಅದು ಬಿದ್ದಿದ್ದ ಸ್ಥಳದಲ್ಲಿ ತನ್ನ ಕಣ್ಣನ್ನು ಹರಿಸಿದ ದೇವರಿಗೆ ಸ್ತೋತ್ರ ಮಾಡಿ, ಸಂತೋಷಿಸುತ್ತಾ ಕಣ್ಣೀರಿಡುತ್ತಾ, ಮುಂದೆ ಹೋಗಲಾರಂಭಿಸಿ, ಉಳಿದ ಪರ್ವತವನ್ನು ಬಹಳ ತ್ವರೆಯಿಂದ ಏರಿದನು. ಆದಾಗ್ಯೂ ಅವನು ಪೂರ್ಣವಾಗಿ ಏರುವದಕ್ಕಿಂತ ಮುಂಚೆ ಹೊತ್ತು ಬಿದ್ದದರಿಂದ ತಾನು ಮೊದಲು ವ್ಯರ್ಥವಾಗಿ ನಿದ್ರೆ ಮಾಡಿದ್ದನ್ನು ತಿರಿಗಿ ನೆನಸಿ, ಅಯ್ಯೋ! ಪಾಪವಾದ ನಿದ್ರೆಯೇ, ನಿನಗೋಸ್ಕರ ಈಗ ಕತ್ತಲೆಯಲ್ಲಿ ಬೀಳುವದಾಯಿತೇ? ಈ ಪಾಪವಾದ ನಿದ್ರೆಗೋಸ್ಕರ ಸೂರ್ಯ ಮುಣುಗಿದ ಮೇಲೆ ಪ್ರಯಾಣ ಮಾಡಿ ಕತ್ತಲೆ ಮುತ್ತಿದ ಹಾದಿಯಲ್ಲಿ ಸಂಚರಿಸಿ, ಅಮಂಗಳ ಶಬ್ದಗಳನ್ನು ಕೇಳ ಬೇಕಾಯಿತಲ್ಲ? ಎಂದು ತನ್ನಲ್ಲೇ ದುಖ್ಖ ಪಟ್ಟನು. ಮತ್ತು ಹೇಡಿಯಪ್ಪನೂ ಅಧೈರ್ಯಸ್ಥನೂ ಆ ಸಿಂಹಗಳನ್ನು ನೋಡಿ ಪಟ್ಟ ಭಯ

ವು ಸಹ ನೆನಪಿಗೆ ಬಂದು, ಆ ಕಾಡ ಮೃಗಗಳು ರಾತ್ರಿ ಕಾಲದಲ್ಲಿ
ತಮ್ಮ ಆಹಾರಕ್ಕೋಸ್ಕರ ತಿರುಗಾಡುವದರಿಂದ ನಾನು ಅಂಧಕಾರದ
ಲ್ಲಿ ಅವುಗಳಿಗೆ ಶಿಕ್ಕಿದರೆ ಹ್ಯಾಗೆ ತಪ್ಪುವೆನು. ಅವು ನನ್ನನ್ನು ಶೀಳ
ದ ಹಾಗೆ ಏನು ಉಪಾಯ ಮಾಡಲಿ? ಎಂದು ಹೇಳಿ, ತನ್ನ ದುರ್ಗ
ತಿಗೋಸ್ಕರ ಗೋಳಾಡುತ್ತಾ ನಡೆಯುವ ಸಮಯದಲ್ಲಿ ಕ್ರಿಸ್ತಿಯನು
ತನ್ನ ಕಣ್ಣುಗಳನ್ನೆತ್ತಿದಾಗ ಮಾರ್ಗದ ಪಾರ್ಶ್ವದಲ್ಲೇ ಸುಂದ
ರಾಲಯವೆಂಬ ಹೆಸರುಳ್ಳ ಅತಿ ಘನವಾದ ಅರಮನೆಯನ್ನು ಕಂ
ಡನು.

---

## 8. The House Beautiful.

## ೮. ಸುಂದರಾಲಯವೆಂಬ ಅರಮನೆ.

---

ಆ ಅರಮನೆಯಲ್ಲಿ ಇಳುಕೊಳ್ಳಲಿಕ್ಕೆ ಆದೀತೋ? ಎಂ
ದು ಕ್ರಿಸ್ತಿಯನು ಬಹು ತ್ವರೆಯಾಗಿ ಮುಂದೆ ಹೋಗುವದನ್ನು
ಕಂಡೆನು. ಅವನು ಸ್ವಲ್ಪ ದೂರ ಹೋದ ಮೇಲೆ ದ್ವಾರ ಪಾಲಕ
ನ ಮನೆಗೆ ಕೂಗಳತೆ ದೂರವಾದ ಬಹಳ ಇಕ್ಕಟ್ಟಾದ ಸ್ಥಳದಲ್ಲಿ
ಪ್ರವೇಶಿಸಿದನು. ಅಲ್ಲಿ ಅತಿ ಜಾಗ್ರತೆಯಾಗಿ ಮುಂದೆ ನೋಡುವ
ಸಮಯದಲ್ಲಿ ಮಾರ್ಗದೊಳಗೆ ಎರಡು ಸಿಂಹಗಳನ್ನು ಕಂಡನು.
ಆಗ ಅವನು ಹೇಡಿಯುಪ್ಪನೂ ಅಧೈರ್ಯಸ್ತನೂ ಹೇಳಿದ ಗಂ
ಡಾಂತರವನ್ನು ನೋಡಿದ ಹಾಗಾಯಿತೆಂದು ನೆನಸಿದನು. ಆ ಸಿಂ
ಹಗಳು ಸಂಕೋಲೆಗಳಿಂದ ಬಂಧಿಸಲ್ಪಟ್ಟಿದ್ದವು. ಆದರೆ ಆ ಸಂ
ಕೋಲೆಗಳನ್ನು ಅವನು ನೋಡದೆ, ಬಹಳ ಹೆದರಿ, ತನಗೆ ಮರಣ
ಪ್ರಾಪ್ತಿ ಹೊರ್ತು ಮತ್ತೇನೂ ಗತಿ ಇಲ್ಲದ ಕಾರಣ ಹಿಂದಕ್ಕೆ ಹೋ
ಗ ಬೇಕೆಂದು ನೆನಸುವಾಗ, ಎಚ್ಚರಪ್ಪನೆಂಬ ದ್ವಾರಪಾಲಕನು ಹಿಂ
ದೆ ಹೋಗುವವನ ಹಾಗೆ ನಿಂತಿರುವ ಕ್ರಿಸ್ತಿಯನನ್ನು ನೋಡಿ, ನಿನ್ನ
ತ್ರಾಣವು ಇಷ್ಟೇನೋ? ಆ ಸಿಂಹಗಳಿಗೆ ಭಯ ಪಡ ಬೇಡ. ಅವು
ಕಟ್ಟಲ್ಪಟ್ಟವೆ. ವಿಶ್ವಾಸವಿದ್ದವರ ಪರೀಕ್ಷೆಗೂ ಇಲ್ಲದವರ ಪ್ರತ್ಯಕ್ಷ

ಕ್ಕೊ ಅಲ್ಲಿ ನಿಲ್ಲಿಸಲ್ಪಟ್ಟಿವೆ. ನಡುದಾರಿಯನ್ನು ಹಿಡಿದು ಬಂದರೆ ನಿನಗೆ ಕೇಡು ಬರಲಿಕ್ಕಿಲ್ಲವೆಂದು ಕೂಗಿ ಹೇಳಿದನು.

ಆಗಲವನು ಸಿಂಹಗಳ ಭಯದಿಂದ ನಡುಗುತ್ತಾ ಮುಂದೆ ಹೋಗುವದನ್ನು ನೋಡಿದೆನು. ಆದರೆ ಆ ದ್ವಾರಪಾಲಕನು ತನಗೆ ಹೇಳಿದ ಪ್ರಕಾರ ಅವನು ಮಾಡಿದದರಿಂದ ಸಿಂಹಗಳು ಗರ್ಜಿಸುವ ಶಬ್ದ ಕೇಳಿದಾಗ್ಯೂ ಮೋಸವಾಗದೆ ತಪ್ಪಿದನು. ತಪ್ಪಿದ ಮೇಲೆ ಅವನು ಚಪ್ಪಳೆ ಬಡಿದು, ದ್ವಾರಪಾಲಕನು ಇದ್ದ ಬಾಗಲಿಗೆ ಬಂದು ಐಯ್ಯಾ, ಇದು ಯಾರ ಮನೆ? ಇಲ್ಲಿ ರಾತ್ರಿ ಇಳು ಕೊಳ್ಳ ಬಹುದೋ? ಎಂದು ಕೇಳಿದನು.

ದ್ವಾರಪಾಲಕನು. ಈ ಮನೆಯು ಪ್ರಯಾಣಸ್ತರ ಕ್ಷೇಮ ಸಂತೃಪ್ತಿಗಳಿಗೋಸ್ಕರ ಬೆಟ್ಟದ ಯಜಮಾನನಿಂದ ಕಟ್ಟಲ್ಪಟ್ಟದೆ. ಆದರೆ ನೀವು ಎಲ್ಲಿಂದ ಬಂದಿರಿ? ಎಲ್ಲಿಗೆ ಹೋಗುತ್ತೀರಿ?

ಕ್ರಿ. ನಾನು ನಾಶನಪುರದಿಂದ ಬಂದು ಚಿಯೋನ ಪರ್ವತಕ್ಕೆ ಹೋಗುತ್ತೇನೆ. ಈಗ ಅಸ್ತಮಾನವಾದದರಿಂದ ಅಪ್ಪಣೆಯಾದರೆ ಇಲ್ಲಿ ಇಳು ಕೊಳ್ಳುತ್ತೇನೆ.

ದ್ವಾ. ನಿಮ್ಮ ಹೆಸರೇನು?

ಕ್ರಿ. ಈಗಿನ ಹೆಸರು ಕ್ರಿಸ್ತಿಯನು. ಮುಂಚಿನ ಹೆಸರು ನಿರ್ದಯವಂತನು. ಶೇಮನ ಗುಡಾರಗಳಲ್ಲಿ ವಾಸ ಮಾಡುವ ಹಾಗೆ ದೇವರು ಸಮ್ಮತಿ ಪಡಿಸುವ ಯಾಫೇತಿನ ವಂಶದಲ್ಲಿ ಹುಟ್ಟಿದೆನು.

ದ್ವಾ. ಇಷ್ಟು ಹೊತ್ತು ಹೋದ ಮೇಲೆ ನೀವು ಬಂದದ್ದು ಯಾಕೆ? ಹೊತ್ತು ಮುಳುಗಿತಲ್ಲ?

ಕ್ರಿ. ಬೇಗ ಬರ ಬಹುದಾಗಿತ್ತು. ಆದರೆ ಭ್ರಷ್ಟನಾದ ನಾನು ಬೆಟ್ಟದ ಪಾರ್ಶ್ವದಲ್ಲಿರುವ ತೋಪಿನಲ್ಲಿ ನಿದ್ರೆ ಮಾಡಿದೆನು. ಹಾಗಾದರೂ ಬೇಗ ಬರುತ್ತಿದ್ದೆ. ನಿದ್ರೆಯ ವೇಳೆಯಲ್ಲಿ ನನ್ನ ಸುರಳಿಯನ್ನು ಬಿಟ್ಟು ಬೆಟ್ಟದ ತುದಿಗೆ ಬಂದ ಮೇಲೆ ಅದು ಹೋಯಿತೆಂದು ತಿಳಿದು, ಚಿಂತಾಕ್ರಾಂತನಾಗಿ ಮಲಗಿದ ಸ್ಥಳಕ್ಕೆ ನಾನು ತಿರಿಗಿ ಹೋಗಬೇಕಾಯಿತು. ಅದು ಶಿಕ್ಕಿದ ಮೇಲೆ ಬಂದೆನು.

ದ್ವಾ. ಒಳ್ಳೇದು, ನಾನು ಈ ಸ್ಥಳದ ಕನ್ನಿಕೆಯರಲ್ಲಿ ಒಬ್ಬ ಳನ್ನು ಕರೆಯುತ್ತೇನೆ. ನಿಮ್ಮ ಮಾತು ಅವಳಿಗೆ ಹಿತವಾದರೆ ಅವಳು ಈ ಮನೆಯ ನೇಮದ ಪ್ರಕಾರ ನಿಮ್ಮನ್ನು ಮನೆಯವರ ಹತ್ತಿರ ಕರೆ ಕೊಂಡು ಹೋಗುವಳು.

ಅದೇ ಮೇರೆಗೆ ಎಚ್ಚರಪ್ಪನೆಂಬ ದ್ವಾರಪಾಲಕನು ಒಂದು ಘಂ ಟೆಯನ್ನು ಬಾರಿಸಲು ಘನವೂ ಸೌಂದರ್ಯವೂ ಉಳ್ಳ ವಿವೇಕಳೆಂ ಬ ಕನ್ನಿಕೆಯು ಮನೆಯ ಬಾಗಲಿಂದ ಹೊರಟು ತನ್ನನ್ನು ಕರೆದದ್ದು ಯಾಕೆಂದು ಕೇಳಿದಳು.

ದ್ವಾ. ಈ ಮನುಷ್ಯನು ನಾಶನಪುರದಿಂದ ಚಿಯೋನ್ ಪರ್ವ ತಕ್ಕೆ ಹೋಗುವ ಪ್ರಯಾಣದಲ್ಲಿ ಆಯಾಸ ಪಟ್ಟು ಹೊತ್ತು ಮುಣು ಗಿದ ಕಾರಣ ಇಲ್ಲಿ ಇಳು ಕೊಳ್ಳ ಬಹುದೋ? ಎಂದು ಕೇಳಿದ್ದಕ್ಕೆ, ನಾನು ನಿಮ್ಮನ್ನು ಕರೆದೆನು. ನೀವು ಸಂಭಾಷಿಸಿದ ಮೇಲೆ ಮನೆಯ ನೇಮದ ಪ್ರಕಾರವೂ ನಿಮಗೆ ತೋಚುವ ಪ್ರಕಾರವೂ ಮಾಡುವಿರಿ ಎಂದು ಹೇಳಿದೆನು, ಅಂದನು.

ತರುವಾಯ ಅವಳು, ನೀವು ಯಾವ ಊರಿನವರು? ಎಲ್ಲಿ ಹೋಗುತ್ತೀರಿ? ಎಂದು ಕೇಳಿದ್ದಕ್ಕೆ ಕ್ರಿಸ್ತಿಯನು ಉತ್ತರ ಕೊಟ್ಟ ನು. ಆಗಲವಳು ಈ ಮಾರ್ಗಕ್ಕೆ ಹ್ಯಾಗೆ ಬಂದಿರೆಂದು ಕೇಳಿದಳು. ಅದನ್ನು ಹೇಳಿದನು. ಮಾರ್ಗದಲ್ಲಿ ಏನು ಕಂಡಿರಿ? ಏನಾಯಿತು? ಎಂದು ಕೇಳಿದಳು. ಅದಕ್ಕೂ ಬದಲು ಹೇಳಿದನು. ಕಡೆಯಲ್ಲಿ, ನಿಮ್ಮ ಹೆಸರು ಏನೆಂದು ಕೇಳಿದಾಗ, ಅವನು, ನನಗೆ ಕ್ರಿಸ್ತಿಯನೆಂಬ ಹೆಸರುಂಟು. ಈ ಸ್ಥಳವು ಬೆಟ್ಟದ ಯಜಮಾನನಿಂದ ಪ್ರಯಾಣ ಸ್ಥರ ಕ್ಷೇಮ ಸಂತೃಪ್ತಿಗಳಿಗೋಸ್ಕರ ಕಟ್ಟಲ್ಪಟ್ಟಿರುವದರಿಂದ ಇಲ್ಲಿ ಇಳು ಕೊಳ್ಳಲಿಕ್ಕೆ ಅಧಿಕ ಅಪೇಕ್ಷೆ ಪಡುತ್ತೇನೆಂದು ಹೇಳಲು, ಅವಳ ಕಣ್ಣಿಗೆ ನೀರು ಬಂದು, ಕಿರುನಗೆಯಿಂದ, ಸ್ವಲ್ಪ ಸುಮ್ಮ ನಿದ್ದು, ನನ್ನ ನೆಂಟರಲ್ಲಿ ಇನ್ನೂ ಇಬ್ಬರು ಮೂವ್ವರನ್ನು ಕರೆಯು ತ್ತೇನೆಂದು ಹೇಳಿ, ಬಾಗಲಿನ ಹತ್ತಿರ ಓಡಿ, ಬುದ್ಧಿ ಭಕ್ತಿ ಪ್ರೀತಿ ಎಂಬವರನ್ನು ಕರೆದಳು. ಇವರು ಇನ್ನೂ ಸ್ವಲ್ಪ ಸಂಭಾಷಿಸಿದ

ಮೇಲೆ, ಅವನನ್ನು ಮನೆಗೆ ಕರಕೊಂಡು ಹೋಗುವಾಗ್ಯೆ ಮನೆಯ ಹೊಸ್ತಿಲಲ್ಲಿ ಅನೇಕರು ಅವನ ಎದುರಿಗೆ ಬಂದು ಕರ್ತನಿಂದ ಆಶೀರ್ವದಿಸಲ್ಪಟ್ಟವನೇ, ಒಳಗೆ ಬಾ, ನಿನ್ನಂಥಾ ಪ್ರಯಾಣಸ್ಥನನ್ನು ಶೇರಿಸಿ ಇಳಿಯುವದಕ್ಕೋಸ್ಕರ ಈ ಮನೆಯು ಬೆಟ್ಟದ ಯಜಮಾನನಿಂದ ಕಟ್ಟಲ್ಪಟ್ಟಿತು, ಅಂದರು. ಆಗಲವನು ತಲೆಯನ್ನು ಬೊಗ್ಗಿಸಿ, ಅವರ ಹಿಂದೆ ಒಳಗೆ ಹೋಗಿ, ಕೂತ ಮೇಲೆ, ದಾಹಕ್ಕೋಸ್ಕರ ಕುಡಿಯ ಕೊಟ್ಟರು. ರಾತ್ರಿ ಭೋಜನಕ್ಕೆ ಸಿದ್ಧವಾಗುವ ಪರ್ಯಂತರ ಹೊತ್ತು ಪ್ರಯೋಜಿಸುವದಕ್ಕೋಸ್ಕರ ಭಕ್ತಿ ಬುದ್ಧಿ ಪ್ರೀತಿ ಎಂಬವರು ಕ್ರಿಸ್ತಿಯನ ಸಂಗಡ ಸಂಭಾಷಿಸುವದಕ್ಕೆ ನೇಮಿಸಲ್ಪಟ್ಟರು. ಅವರು ಮಾಡಿದ ಸಂಭಾಷಣೆ ಏನಂದರೆ—

ಭಕ್ತಿ. ಒಳ್ಳೇ ಕ್ರಿಸ್ತಿಯನೇ, ನಿಮ್ಮನ್ನು ಮನೆಗೆ ಶೇರಿಸಿದ ನಾವು ಪ್ರಯಾಣದಲ್ಲಿ ನಿಮಗೆ ಸಂಭವಿಸಿದ ಸಂಗತಿಗಳ ವಿಷಯ ಸಂಭಾಷಿಸಿದರೆ ನಮಗೆ ಗುಣವುಂಟೆಂದು ನೆನಸುತ್ತೇವೆ.

ಕ್ರಿ. ನಿಮಗೆ ಇಂಥಾ ಮನಸ್ಸಿರುವದರಿಂದ ಸಂತೋಷವಾಗಿ ನನ್ನ ಕಥೆಯನ್ನು ಹೇಳುತ್ತೇನೆ.

ಭ. ಮೊದಲು ನಿಮಗೆ ಈ ಪ್ರಯಾಣ ಮಾಡ ಮನಸ್ಸು ಹುಟ್ಟಿದ್ದು ಹ್ಯಾಗೆ?

ಕ್ರಿ. ನಾನಿರುವ ಸ್ಥಳದಲ್ಲಿ ನಿಂತರೆ ನಾಶನಕ್ಕೆ ತಪ್ಪಲಾರೆನೆಂಬ ಭಯಂಕರವಾದ ಶಬ್ದ ನನ್ನ ಕಿವಿಯಲ್ಲಿ ಬಿದ್ದದರಿಂದ ಸ್ವದೇಶವನ್ನು ಬಿಟ್ಟು ಹೊರಡುವದಾಯಿತು.

ಭ. ಆದರೆ ನಿಮ್ಮ ದೇಶವನ್ನು ಬಿಟ್ಟು ಈ ಮಾರ್ಗದಿಂದ ಬಂದದ್ದು ಹ್ಯಾಗೆ?

ಕ್ರಿ. ದೇವರ ಚಿತ್ತದಿಂದ ಹಾಗಾಯಿತು. ನಾಶನದ ಭಯವು ನನಗಿರುವಾಗ ನಾನು ದಿಕ್ಕು ಕಾಣದೆ ಇದ್ದೆನು. ನಡುಗುತ್ತಾ ಅಳುತ್ತಾ ಇರುವ ನನ್ನ ಹತ್ತರ ಅಕಸ್ಮಾತ್ತಾಗಿ ಸುವಾರ್ತಿಕನೆಂಬ ಒಬ್ಬ ಮನುಷ್ಯನು ಬಂದು ಇಕ್ಕಟ್ಟಾದ ಬಾಗಲಿನ ಮಾರ್ಗ ತೋರಿಸಿದನು. ಅವನು ತೋರಿಸದೆ ಇದ್ದರೆ ನನಗೆ ಶಿಕ್ಕುತ್ತಿದ್ದಿಲ್ಲ. ಈ

ಮನೆಗೆ ಸರಿಯಾದ ಮಾರ್ಗದಲ್ಲಿ ನನ್ನನ್ನು ಸೇರಿಸಿದವನು ಆತನೇ.

ಭ. ವ್ಯಾಖ್ಯಾನಿಯ ಮನೆಯ ಮಾರ್ಗದಿಂದ ನೀವು ಬರಲಿಲ್ಲವೋ?

ಕ್ರಿ. ಬಂದೆನು. ಅಲ್ಲಿ ನೋಡಿದ ಕಾರ್ಯಗಳ ನೆನಪು ನಾನು ಜೀವದಿಂದಿರುವ ಪರ್ಯಂತರ ಮರಿಯೆನು. ನೋಡಿದ ಮುಖ್ಯವಾದವುಗಳು ಮೂರು ಅವೆ. ಮೊದಲನೇದು, ಸೈತಾನನು ಎಷ್ಟು ವಿರೋಧಿಸಿದರೂ ಕ್ರಿಸ್ತನು ತನ್ನ ಕೃಪೆಯ ಕೆಲಸವನ್ನು ಹೃದಯದಲ್ಲಿ ಸ್ಥಾಪಿಸುವ ಕ್ರಮದ ನೋಟವು. ಎರಡನೇದು, ದೇವರ ಕೃಪೆಯ ನಿರೀಕ್ಷೆಯು ಕಳದು ಹೋಗುವ ಪರ್ಯಂತರ ಪಾಪ ಮಾಡಿದ ಮನುಷ್ಯನ ನೋಟವು. ಮೂರನೇದು, ನ್ಯಾಯ ತೀರ್ವಿಕೆಯ ದಿನವು ಬಂತೆಂಬ ಕನಸನ್ನು ಕಂಡ ಮನುಷ್ಯನ ನೋಟವು.

ಭ. ಅವನು ಕಂಡ ಕನಸು ನಿಮಗೆ ಹೇಳಿದನೋ?

ಕ್ರಿ. ಹೇಳಿದನು. ಕೇಳುವಾಗ ನನ್ನ ಹೃದಯವು ಕಳವಳಗೊಂಡಿತು. ಅದು ಭಯಂಕರವೆಂದು ನೆನಸಿದೆನು. ಹಾಗಾದರೂ ಕೇಳಿದ್ದು ಒಳ್ಳೇದಾಯಿತು.

ಭ. ವ್ಯಾಖ್ಯಾನಿಯ ಮನೆಯಲ್ಲಿ ನೀವು ನೋಡಿದ್ದು ಅಷ್ಟೇನೋ?

ಕ್ರಿ. ಇಲ್ಲ. ಅವನು ನನ್ನನ್ನು ಕರೆಕೊಂಡು ಹೋಗಿ, ಸೌಂದರ್ಯವಾದ ಅರಮನೆಯನ್ನೂ ಅದರಲ್ಲಿ ನಿವಾಸಿಸುವ ಸ್ವರ್ಣಾಂಬರ ಧರಿಸಿದವರನ್ನೂ ತೋರಿಸಿದನು. ಮತ್ತು ಒಬ್ಬ ಶೂರನು ಬಂದು ಬಾಗಲಲ್ಲಿ ತಡೆಯುವ ಯುದ್ಧಸ್ಥರ ಮಧ್ಯದಿಂದ ದಾರಿ ಮಾಡಿ ಕೊಂಡು, ಪ್ರವೇಶಿಸಲಿಕ್ಕೂ, ನಿತ್ಯ ಮಹಿಮೆಯನ್ನು ಪಡ ಕೊಳ್ಳಲಿಕ್ಕೂ, ಅಪ್ಪಣೆ ಹೊಂದಿದ್ದನ್ನು ತೋರಿಸಿದನು. ಆ ಕಾರ್ಯಗಳನ್ನು ನೋಡಿದಾಗ ನನಗೆ ಬಹಳ ಸಂತೋಷವಾಯಿತು. ಮುಂದೆ ಹೋಗುವಂಥಾದ್ದಿಲ್ಲದಿದ್ದರೆ ಆ ಒಳ್ಳೇ ಮನುಷ್ಯನ ಮನೆಯಲ್ಲೇ ಒಂದು ವರುಷ ಇಳು ಕೊಳ್ಳಲಿಕ್ಕೆ ಮನಸ್ಸಿತ್ತು.

ಭ. ಮಾರ್ಗದಲ್ಲಿ ಇನ್ನೇನು ಕಂಡಿರಿ?

ಕ್ರಿ. ಏನು ಕಂಡೆ? ನಾನು ಸ್ವಲ್ಪ ಮುಂದಕ್ಕೆ ಬಂದಾಗ ರಕ್ತಮಯನಾಗಿ, ಮರದಲ್ಲಿ ತೂಗ್ಯಾಡುವ ಒಬ್ಬನನ್ನು ಕಂಡೆನು. ನಾನು ಅಲ್ಲಿ ಪರ್ಯಂತರ ಹೊತ್ತ ಭಾರವಾದ ಹೊರೆ ಆತನನ್ನು ಕಂಡಾಗಲೇ ನನ್ನ ಬೆನ್ನಿನಿಂದ ಕಳಚಿ ಹೋಯಿತು. ಅಂಥಾದ್ದನ್ನು ನಾನು ಮುಂಚೆ ಎಂದಿಗೂ ಕಾಣದ ಕಾರಣ ನನ್ನ ಮನಸ್ಸಿಗೆ ಬಹು ಆಶ್ಚರ್ಯವಾಯಿತು. ಮತ್ತು ನಾನು ಪರವಶನಾಗಿ ಮೇಲಕ್ಕೆ ನೋಡಿ, ನೋಡುತ್ತಾ ಇರಲಾಗಿ, ಮೂರು ಮಂದಿ ಪ್ರಕಾಶ ಉಳ್ಳವರು ನನ್ನ ಹತ್ತರ ಬಂದರು. ಅವರಲ್ಲಿ ಒಬ್ಬನು, ನನ್ನ ಪಾಪಗಳು ಪರಿಹಾರವಾದವೆಂದು ಸಾಕ್ಷಿ ಕೊಟ್ಟನು. ಇನ್ನೊಬ್ಬನು, ನನ್ನ ಮುಂಚಿನ ಹರಕು ವಸ್ತ್ರಗಳನ್ನು ತೆಗೆದು, ಈ ಕಸೂತಿಯ ವಸ್ತ್ರಗಳನ್ನು ಕೊಟ್ಟನು. ಮತ್ತೊಬ್ಬನು, ನನ್ನ ಹಣೆಗೆ ಈಗಿರುವ ಈ ಮುದ್ರೆಯನ್ನು ಇಟ್ಟು, ಮುದ್ರಿತವಾದ ಈ ಸುರಳಿಯನ್ನು ಕೊಟ್ಟನು, ಎಂದು ಹೇಳಿ, ಕ್ರಿಸ್ತಿಯನು ತನ್ನ ಮಡಿಲಿನಿಂದ ಸುರಳಿಯನ್ನು ತೆಗೆದನು.

ಭ. ಇನ್ನೇನಾದರೂ ನೀವು ನೋಡಲಿಲ್ಲವೋ?

ಕ್ರಿ. ನಾನು ನೋಡಿದ ಉತ್ತಮವಾದವುಗಳನ್ನು ನಿಮಗೆ ಹೇಳಿದೆ. ಇನ್ನೂ ಕೆಲವು ನೋಡಿದ್ದೇನೆ. ನಾನು ಬಂದ ಮಾರ್ಗದ ಸ್ವಲ್ಪ ಆಚೆಯಲ್ಲಿ ಹೆಡ್ಡನೂ ಮೈಗಳ್ಳನೂ ಗರ್ವಿಯೂ ಎಂಬ ಮೂವರು ಕಾಲುಗಳಿಗೆ ಸಂಕೋಲೆ ಹಾಕಿದವರಾಗಿ ಮಲಗಿರುವದನ್ನು ಕಂಡೆನು. ಅವರನ್ನು ಎಬ್ಬಿಸ ಬೇಕೆಂದು ಪ್ರಯತ್ನ ಮಾಡಿದೆ. ಆದರೆ ಆಯಿತೆಂದು ನೆನಸುತ್ತೀರೋ? ಇಲ್ಲ. ಕರ್ಮಕನೂ ಕಪಟಸ್ತನೂ ತಾವು ಚಿಯೋನಿಗೆ ಹೋಗುತ್ತೇವೆಂದು ಹೇಳಿ ಗೋಡೆಯಿಂದ ದುಮುಕಿದ್ದನ್ನು ನೋಡಿದೆನು. ನಾನು ಹೇಳಿದ್ದು ಅವರು ನಂಬದೆ ಬೇಗ ನಾಶವಾದರು. ಇನ್ನು ಈ ಪರ್ವತ ಏರುವದೂ, ಸಿಂಹಗಳ ಬಾಯಿಯ ಹತ್ತರ ಹೋಗುವದೂ, ವಿಶೇಷವಾಗಿ ಬಹು ಕಷ್ಟವಾಯಿತು. ಬಾಗಲಿನ ಹತ್ತರ ನಿಂತ ಆ ಒಳ್ಳೇ ಮನುಷ್ಯನಾದ ದ್ವಾರಪಾಲಕನ ಸಹಾಯವಿಲ್ಲದೆ ಇದ್ದರೆ, ಒಂದು ವೇಳೆ

ನಾನು ತಿರುಗಿ ಹೋಗುತ್ತಿದ್ದೆನು. ಈಗ ಇಲ್ಲಿ ಬಂದದಕ್ಕೋಸ್ಕರ ದೇವರಿಗೂ, ನನ್ನನ್ನು ಸೇರಿಸಿ ಕೊಂಡದಕ್ಕೋಸ್ಕರ ನಿಮಗೂ, ಸ್ತೋತ್ರವಿರಲಿ.

ತರುವಾಯ ಬುದ್ಧಿ ಎಂಬವಳು ಕೆಲವು ಪ್ರಶ್ನೆಗಳನ್ನು ಕೇಳಲಿಕ್ಕೆ ಮನಸ್ಸು ಮಾಡಿ ಕ್ರಿಸ್ತಿಯನಿಂದ ಉತ್ತರ ಬೇಡಿ ಕೊಂಡಳು.

ಬುದ್ಧಿಯು. ನೀವು ಬಂದ ದೇಶವು ಒಂದಾನೊಂದು ವೇಳೆ ನೆನಪಾಗುತ್ತದೋ?

ಕ್ರಿ. ಆಗುತ್ತದೆ. ಅದು ನೆನಪಾದರೆ ಬಹಳ ನಾಚಿಕೆಯೂ ಅಸಹ್ಯವೂ ಹುಟ್ಟುತ್ತದೆ. ನಾನು ಬಂದ ದೇಶವು ನನಗೆ ಬೇಕಾದರೆ ತಿರಿಗಿ ಹೋಗ ಬಹುದಾಗಿತ್ತು. ಆದರೆ ಈಗ ಅದಕ್ಕಿಂತ ಒಳ್ಳೇದೂ ಪರಲೋಕ ಸಂಬಂಧವಾದದ್ದೂ ಆಗಿರುವ ದೇಶವು ನನಗೆ ಬೇಕು.

ಬು. ಆಗ ನಿಮಗೆ ರೂಢಿಯಾದವುಗಳಲ್ಲಿ ಕೆಲವು ತೆಗೆದು ಕೊಂಡು ಬರಲಿಲ್ಲವೋ?

ಕ್ರಿ. ತೆಗೆದು ಕೊಂಡು ಬಂದೆನು. ಆದರೆ ಮನಸ್ಸಿಲ್ಲದೆ ತೆಗೆದು ಕೊಂಡು ಬಂದೆ. ವಿಶೇಷವಾಗಿ ಯಾವದಂದರೆ, ನಾನೂ ನನ್ನ ದೇಶದವರೂ ಬಹಳವಾಗಿ ಮೆಚ್ಚಿದ ಮಾಂಸಮಯವಾದ ಅಂತರ್ಭಾವಗಳು; ಆದರೆ ಈಗ ಅವುಗಳೆಲ್ಲಾ ನನಗೆ ದುಖ್ಖ ಹುಟ್ಟಿಸುತ್ತವೆ. ನನ್ನ ಚಿತ್ತದ ಪ್ರಕಾರ ಮಾಡ ಬಹುದಾದರೆ ಆ ಕಾರ್ಯಗಳು ಎಂದಿಗೂ ನೆನಪು ಮಾಡದೆ ಇರುವೆನು. ಆದರೆ ಉತ್ತಮವಾದವುಗಳನ್ನು ಮಾಡಲಿಕ್ಕೆ ಯತ್ನೈಸುವ ಸಮಯದಲ್ಲಿ ಹೀನವಾದವುಗಳು ಹುಟ್ಟುತ್ತವೆ.

ಬು. ನಿಮಗೆ ಒಂದೊಂದು ವೇಳೆ ಕರಕರೆ ಹುಟ್ಟಿಸುವವುಗಳು ಬೇರೆ ಅನೇಕ ಸಮಯಗಳಲ್ಲಿ ಅಣಗಿಸಲ್ಪಟ್ಟ ಹಾಗೆ ಕಾಣುತ್ತವಲ್ಲವೋ?

ಕ್ರಿ. ಕಾಣುತ್ತದೆ. ಆದರೆ ಬಹಳ ಸಾರಿ ಅಲ್ಲ. ಹಾಗೆ ನನಗೆ ಆಗುವ ಕಾಲಗಳು ಸ್ವರ್ಣ ಕಾಲಗಳೆಂದು ನೆನಸುತ್ತೇನೆ.

ಬು. ನಿಮ್ಮಲ್ಲಿ ಹುಟ್ಟುವ ಕರಕರೆಗಳು ಯಾವದರಿಂದ ಅಣಗಿಸಲ್ಪಡುತ್ತವೆಂಬುವದನ್ನು ನೆನಪು ಮಾಡಿ ತಿಳು ಕೊಳ್ಳುತ್ತೀರೋ?

ಕ್ರಿ. ಹೌದು. ನಾನು ಶಿಲುಬೆಯ ಬಳಿಯು ನೋಡಿದ್ದನ್ನು ನೆನಸಿದರೆ ಗುಣ ಕಾಣುತ್ತದೆ. ನನಗೆ ಶಿಕ್ಕಿದ ಕಸೂತಿ ವಸ್ತ್ರಗಳ ಮೇಲೆ ಕಣ್ಣಿಟ್ಟರೆ ಗುಣವಾಗುತ್ತದೆ. ಮಡಿಲಲ್ಲಿರುವ ಸುರಳಿಯನ್ನು ಓದಿದರೆ ಗುಣವಾಗುತ್ತದೆ. ನಾನು ಹೋಗುವ ದೇಶದ ಅಪೇಕ್ಷೆಯು ನನ್ನಲ್ಲಿ ಪ್ರಬಲವಾದರೆ ಗುಣವಾಗುತ್ತದೆ.

ಬು. ಚಿಯೋನ್ ಪರ್ವತಕ್ಕೆ ಹೋಗಲಿಕ್ಕೆ ನೀವು ಇಷ್ಟು ಇಚ್ಛೆ ಯಾಕೆ ಪಡುತ್ತೀರಿ?

ಕ್ರಿ. ಶಿಲುಬೆಯಲ್ಲಿ ಸತ್ತವನಾಗಿ ತೂಗಿರುವವನು ಅಲ್ಲಿ ಜೀವಿತನಾಗಿ ನನ್ನಿಂದ ಕಾಣಲ್ಪಡುವನೆಂದೂ, ಈ ವರೆಗೆ ನನ್ನನ್ನು ಕರಕರೆ ಪಡಿಸಿದವುಗಳಿಂದ ಬಿಡುಗಡೆಯಾಗುವೆನೆಂದೂ, ಕೋರುತ್ತೇನೆ. ಮರಣವು ಅಲ್ಲಿ ಇರುವದಿಲ್ಲವೆಂದು ಹೇಳುತ್ತಾರೆ. ಅತಿ ಇಷ್ಟ ಜನರ ಸಹವಾಸವು ಸಹ ಅಲ್ಲಿ ಶಿಕ್ಕುವದು. ನನ್ನ ಹೊರೆಯಿಂದ ನನ್ನನ್ನು ಬಿಡಿಸಿದವನಲ್ಲಿ ನಾನು ನಿಜವಾದ ಪ್ರೀತಿ ಇಡುತ್ತೇನೆ. ನನ್ನ ಒಳಗಿನ ರೋಗಕ್ಕೋಸ್ಕರ ಆಯಾಸ ಪಡುತ್ತೇನೆ. ಮರಣ ಇರದ ಸ್ಥಳದಲ್ಲಿಯೂ ಪರಿಶುದ್ಧನೇ ಪರಿಶುದ್ಧನೇ ಪರಿಶುದ್ಧನೇ ಎಂದು ಕೂಗುವವರ ಕೂಟದಲ್ಲಿಯೂ ಇರಲಿಕ್ಕೆ ಅಪೇಕ್ಷಿಸುತ್ತೇನೆ.

ತರುವಾಯ ಪ್ರೀತಿ ಎಂಬವಳು ನಿಮಗೆ ಸಂಸಾರ ಉಂಟೋ? ಹೆಂಡತಿ ಇದ್ಧಾಳೋ? ಎಂದು ಕ್ರಿಸ್ತಿಯನನ್ನು ಕೇಳಿದಳು.

ಕ್ರಿ. ಹೆಂಡತಿಯೂ ಇದ್ಧಾಳೆ. ನಾಲ್ಕು ಚಿಕ್ಕ ಮಕ್ಕಳೂ ಇದ್ಧಾರೆ.

ಪ್ರೀ. ಯಾಕೆ ಅವರನ್ನು ಕರೆ ಕೊಂಡು ಬರಲಿಲ್ಲ?

ಕ್ರಿಸ್ತಿಯನು ಅತ್ತು, ಐಯೋ! ಕರೆ ಕೊಂಡು ಬರಲಿಕ್ಕೆ ಬಹಳ ಮನಸ್ಸಿತ್ತು. ಆದರೆ ಅವರೆಲ್ಲರು ನನ್ನ ಪ್ರಯಾಣಕ್ಕೆ ಪೂರ್ಣವಾಗಿ ಅಡ್ಡಿ ಮಾಡಿದರು, ಅಂದನು.

ಪ್ರೀ. ಅವರ ಸಂಗಡ ಮಾತಾಡಿ, ಹಿಂದೆ ನಿಂತರೆ ಆಗುವ ಗಂಡಾಂತರವನ್ನು ಅವರಿಗೆ ಹೇಳಿ ತೋರಿಸ ಬೇಕಾಗಿತ್ತು.

ಕ್ರಿ. ತೋರಿಸಿದೆನು. ನಮ್ಮ ಪಟ್ಣವು ನಾಶವಾಗುವಪರ ವಿಷಯ ದೇವರು ನನಗೆ ತೋರಿಸಿದ್ದನ್ನು ಅವರಿಗೆ ಹೇಳಿದೆನು. ಹೇಳಿದ್ದರೂ ನಾನು ಹಾಸ್ಯ ಮಾಡಿದೆನೆಂದು ನೆನಸಿ, ಅವರು ನನ್ನ ಮಾತು ನಂಬಲಿಲ್ಲ.

ಪ್ರೀ. ನೀವು ಅವರಿಗೆ ಹೇಳಿದ ಬುದ್ಧಿಯನ್ನು ಆಶೀರ್ವದಿಸ ಬೇಕೆಂದು ದೇವರಿಗೆ ಪ್ರಾರ್ಥಿಸಿದಿರೋ?

ಕ್ರಿ. ಹೌದು, ಮನಃಪೂರ್ವಕವಾಗಿ ಮೊರೆ ಇಟ್ಟೆನು. ನನ್ನ ಹೆಂಡತಿಯನ್ನೂ ದಿಕ್ಕಿಲ್ಲದ ಮಕ್ಕಳನ್ನೂ ಅತಿ ಪ್ರೀತಿ ಮಾಡಿದೆನೆಂದು ನೆನಸಿರಿ.

ಪ್ರೀ. ಆದರೆ ನಿಮ್ಮ ಚಿಂತೆಯನ್ನೂ ನಾಶನದ ಭಯವನ್ನೂ ಅವರಿಗೆ ತಿಳಿಸಿದಿರೋ? ಯಾಕಂದರೆ ನಾಶನವು ನಿಮಗೆ ಗೊತ್ತಾಗಿತ್ತೆಂದು ನೆನಸುತ್ತೇನೆ.

ಕ್ರಿ. ತಿರಿಗಿ ತಿರಿಗಿ ತಿಳಿಸಿದೆನು. ಇದಲ್ಲದೆ ನನ್ನ ಮುಖವನ್ನೂ ನನ್ನ ಕಣ್ಣೀರನ್ನೂ ನಮ್ಮ ತಲೆಗಳ ಮೇಲೆ ನೇತಾಡುವ ನ್ಯಾಯ ತೀರ್ವಿಕೆಯ ಹೆದರಿಕೆಗೋಸ್ಕರವಾಗುವ ನಡುಗುವಿಕೆಯನ್ನೂ ಅವರು ನೋಡಿ, ನಾನು ಪಡುವ ಭಯವನ್ನು ತಿಳಿದು ಕೊಳ್ಳಬಹುದಾಗಿತ್ತು. ಆದರೆ ನನ್ನ ಸಂಗಡ ಬರುವ ಹಾಗೆ ಅವರಿಗೆ ಮನಸ್ಸು ಉಂಟು ಮಾಡಿಸುವದಕ್ಕೆ ಅದೆಲ್ಲಾ ಸಾಲದೆ ಹೋಯಿತು.

ಪ್ರೀ. ಬಾರದೆ ಇರುವದಕ್ಕೆ ಅವರು ಏನು ನೆವನ ಹೇಳಿದರು?

ಕ್ರಿ. ನನ್ನ ಹೆಂಡತಿ, ಈ ಪ್ರಪಂಚದ ಅನುಭೋಗ ಕಳೆದು ಹೋದೀತೆಂಬ ಭಯದಲ್ಲಿದ್ದಳು. ಮಕ್ಕಳು ಹುಡುಗಾಟಿಕೆಗಳಲ್ಲಿ ಮನಸ್ಸಿಟ್ಟಿರು. ಈ ಮೊದಲಾದ ಆಲೋಚನೆಗಳಿಂದ ಅವರು ಬಾರದೆ ನಾನು ಒಬ್ಬನೇ ಬರುವ ಹಾಗಾಯಿತು.

ಪ್ರೀ. ಆದರೆ ಅವರನ್ನು ಕರೆ ಕೊಂಡು ಹೋಗ ಮನಸ್ಕರಿಸಿದ ಮಾತುಗಳು ಒಂದು ವೇಳೆ ನಿಮ್ಮ ತಪ್ಪಾದ ನಡತೆಯಿಂದ ವ್ಯರ್ಥವಾದವೇನೋ?

ಕ್ರಿ. ನನ್ನ ನಡತೆಗೆ ನಾನು ಮೆಚ್ಚುವದಿಲ್ಲ. ಅದರಲ್ಲಿ ಬಹಳ ತಪ್ಪು ಇದ್ಧೀತೆಂದು ತಿಳಿದಿದ್ದೇನೆ. ಮತ್ತು ಬೇರೊಬ್ಬರ ಗುಣಕ್ಕಾಗಿ ಬುದ್ಧಿ ಹೇಳಿದವರು ನಡತೆಯಲ್ಲಿ ಸ್ವಲ್ಪ ತಪ್ಪಿದರೆ ಅವರು ಹೇಳುವ ಬುದ್ಧಿಯ ಮಾತುಗಳು ವ್ಯರ್ಥವಾಗುತ್ತವೆಂದು ತಿಳಿದಿದ್ದೇನೆ. ಹಾಗಾದರೂ ನಾನು ಮಾಡುವ ಅಯೋಗ್ಯವಾದ ಕ್ರಿಯೆಯಿಂದ ಪ್ರಯಾಣಕ್ಕೆ ಹೋಗುವ ಮನಸ್ಸು ಅವರಲ್ಲಿ ಕಡಮೆಯಾಗದ ಹಾಗೆ ಅತಿ ಜಾಗ್ರತೆಯಾಗಿರುತ್ತಿದ್ದೆನೆಂದು ಹೇಳಬಹುದು. ನಾನು ಜಾಗ್ರತೆಯಾಗಿರುವದರಿಂದಲೇ ನನ್ನನ್ನು ಬಡಿವಾರದವನೆಂದೂ ತಪ್ಪು ಇಲ್ಲದ ಕಾರ್ಯಗಳನ್ನು ನಾನು ಬಿಟ್ಟು ಬಿಡುತ್ತೇನೆಂದೂ ಅವರು ಹೇಳುತ್ತಿದ್ದರು. ನನ್ನಲ್ಲಿ ಅವರು ನೋಡಿದ ಯಾವದೊಂದು ಕಾರ್ಯದಿಂದ ಅವರಿಗೆ ಅಭ್ಯಂತರವಾದದ್ದಾದರೆ, ದೇವರಿಗೆ ಪಾಪ ಮಾಡದ ಹಾಗೆಯೂ, ನೆರೆಯವರಿಗೆ ಏನಾದರೂ ಅನ್ಯಾಯ ಮಾಡದ ಹಾಗೆಯೂ, ನಾನು ಜಾಗ್ರತೆಯಾಗಿ ನಡೆದು ಕೊಂಡದ್ದೇ ಅವರಿಗೆ ಅಭ್ಯಂತರವಾಯಿತೆಂದು ಹೇಳ ಬಹುದು.

ಪ್ರೀ. ಕಾಯಿನನು ಸಹ ತನ್ನ ಕ್ರಿಯೆಗಳು ಕೆಟ್ಟವೂ ತನ್ನ ಸಹೋದರನ ಕ್ರಿಯೆಗಳು ನೀತಿಯುಳ್ಳವೂ ಆಗಿದ್ದರಿಂದ ಸಹೋದರನನ್ನು ಹಗೆ ಮಾಡಿದನಲ್ಲವೋ? ಹಾಗಾದರೆ ನಿಮ್ಮ ಹೆಂಡತಿಯೂ ಮಕ್ಕಳೂ ಇದಕ್ಕೋಸ್ಕರವೇ ನಿಮಗೆ ಕೋಪಿಸಿದ್ದಾದರೆ ಅವರು ಒಳ್ಳೇದಕ್ಕೆ ಒಪ್ಪಿಯಾಗ ಮನಸ್ಸಿಲ್ಲದೆ ಇದ್ದರೆಂದು ಪ್ರತ್ಯಕ್ಷವಾಯಿತು. ಹೀಗಿದ್ದರೆ ನೀವು ಅವರ ರಕ್ತದ ಅಪರಾಧಕ್ಕೆ ನಿಮ್ಮ ಆತ್ಮವನ್ನು ತಪ್ಪಿಸಿದಿರಿ.

ಈ ಪ್ರಕಾರ ಅವರು ರಾತ್ರಿ ಭೋಜನಕ್ಕೆ ಸಿದ್ಧವಾಗುವ ಪರ್ಯಂತರ ಮಾಡುತ್ತಾ ಕೂತಿರುವದನ್ನು ಕಂಡೆನು. ಅದು ಸಿದ್ಧವಾದ ಮೇಲೆ ಅವರು ಊಟಕ್ಕೆ ಕೂತರು. ಊಟದ ಮೇಜಿನಲ್ಲಿ ಮೃಷ್ಟಾನ್ನವೂ ಒಳ್ಳೇ ಶೋಧಿಸಿದ ದ್ರಾಕ್ಷೆರಸವೂ ಇದ್ದವು. ಅವರು ಉಣ್ಣುವ ಸಮಯದಲ್ಲಿ ಮಾಡಿದ ಸಂಭಾಷಣೆ ಎಲ್ಲಾ ಬೆಟ್ಟದ ಯಜಮಾನನ ವಿಷಯವಾಗಿತ್ತು. ಏನಂದರೆ, ಆತನು ಮಾಡಿದ ಕ್ರಿಯೆಗಳ್ಯಾ

ವವು, ಅವುಗಳನ್ನು ಯಾತಕ್ಕೆ ಮಾಡಿದನು, ಈ ಮನೆ ಕಟ್ಟಲಿಕ್ಕೆ ಕಾರಣವೇನು, ಎಂಬ ಈ ಮೊದಲಾದ ಪ್ರಸ್ತಾಪಗಳಾಗಿದ್ದವು. ಆ ಕರ್ತನು ದೊಡ್ಡ ಯುದ್ಧಸ್ಥನಾಗಿದ್ದು, ಮರಣದ ಅಧಿಕಾರ ಉಂಟಾದವನ ಸಂಗಡ ಜಗಳವಾಡಿ ಅವನನ್ನು ಕೊಂದನೆಂದು, ಅವರ ಸಂಭಾಷಣೆಗಳಿಂದ ತಿಳುಕೊಂಡೆನು. ಜಗಳವಾಡುವ ಸಮಯದಲ್ಲಿ ಆ ಕರ್ತನಿಗೆ ದೊಡ್ಡ ಗಂಡಾಂತರ ಸಂಭವಿಸಿದದರಿಂದ ನಾನು ಆತನನ್ನು ಹೆಚ್ಚಾಗಿ ಪ್ರೀತಿ ಮಾಡಿದೆನು.

ಹ್ಯಾಗಂದರೆ, ಅವನು ಹೋರಾಡುವಾಗ ಬಹಳ ರಕ್ತ ಚೆಲ್ಲಿದನು. ಇನ್ನೂ ತಾನು ಮಾಡಿದ್ದೆಲ್ಲಾ ನಮ್ಮ ದೇಶಸ್ಥರ ಪ್ರೀತಿಗೋಸ್ಕರವೇ, ಆದದರಿಂದ ಅವನ ದಯದ ಕೀರ್ತಿ ಹೆಚ್ಚಾಯಿತು, ಎಂದು ಕ್ರಿಸ್ತಿಯನು ಹೇಳಿದನು. ಅದಲ್ಲದೆ ಆ ಮನೆಯ ಕುಟುಂಬದವರಲ್ಲಿ ಕೆಲವರು ಅವನು ಶಿಲುಬೆಯಲ್ಲಿ ಸತ್ತ ಮೇಲೆ ಅವನ ಸಂಗಡ ಇದ್ದು ಮಾತಾಡಿದೆವು ಎಂದು ಹೇಳಿ, ಸೂರ್ಯೋದಯದಿಂದ ಅಸ್ತಮಾನದವರೆಗೆ ಅವನ ಹಾಗೆ ಬಡ ಪ್ರಯಾಣಸ್ಥರನ್ನು ಪ್ರೀತಿ ಮಾಡುವವರು ಮತ್ತ್ಯಾರೂ ಇಲ್ಲವೆಂದು ಆತನ ಮಾತುಗಳಿಂದಲೇ ತಿಳುಕೊಂಡೆವೆಂದು ಸಾಕ್ಷಿ ಕೊಟ್ಟರು.

ಇನ್ನೂ ಹೇಳಿದ ಮಾತಿಗೆ ಅವರು ದೃಷ್ಟಾಂತ ಕೊಟ್ಟು, ಅವನು ದರಿದ್ರರ ಉಪಕಾರಕ್ಕಾಗಿ ತನ್ನ ಮಹಿಮೆಯನ್ನು ಬಿಟ್ಟುಹೋದನೆಂದೂ, ಚಿಯೋನ್ ಪರ್ವತದಲ್ಲಿ ಒಂಟಿಗನಾಗಿ ವಾಸಮಾಡೆನೆಂದು ನಿಶ್ಚಯವಾಗಿ ಆತ ಹೇಳಿದ್ದನ್ನು ಕೇಳಿದೆವೆಂದೂ, ಹೇಳಿದರು. ಮತ್ತು ಗೊಬ್ಬರ ದಿಬ್ಬೆಯಲ್ಲಿ ಭಿಕ್ಷಗಾರರಾಗಿ ಹುಟ್ಟಿದ ಅನೇಕ ಪ್ರಯಾಣಸ್ಥರನ್ನು ಅವನು ರಾಜಪುತ್ರರಾಗ ಮಾಡಿದನೆಂದು ಹೇಳಿದರು.

ಈ ಪ್ರಕಾರ ಅವರು ಬಹಳ ರಾತ್ರಿಯ ಪರ್ಯಂತರ ಮಾತಾಡಿ ತಮ್ಮ ಕರ್ತನ ಮರೆ ಶೇರಿ ಮಲಗಿದರು. ಪ್ರಯಾಣಸ್ಥನನ್ನು ಪೂರ್ವದಿಕ್ಕಿಗೆ ಕಿಟಿಕಿ ಇರುವ ದೊಡ್ಡ ಉಪ್ಪರಿಗೆಯಲ್ಲಿ ಮಲಗಿಸಿದರು. ಆ ಉಪ್ಪರಿಗೆಯ ಹೆಸರು ಶಾಂತಿ ವಿಲಾಸವು. ಅಲ್ಲಿ ಅವನು ಸೂರ್ಯೋ

ದಯದ ಪರ್ಯಂತರ ನಿದ್ರೆ ಗೈದು ಆ ಮೇಲೆ ಎಚ್ಚತ್ತು ಹಾಡಿದ್ದೇನಂದರೆ,

ಬಂದೆನು ನಾ ಪರಲೋಕದ ಹತ್ತರ
ಹೊಂದಿದೆ ಪಾಪದ ಪರಿಹರವ ||
ಕುಂದಿದ ಯಾತ್ರಿಕ ಜನರಿಗೆ ಸಾಖ್ಯವ
ತಂದಿಹ ಯೇಸುವ ಪೊಗಳುವೆನು ||

ಉದಯದಲ್ಲಿ ಅವರೆಲ್ಲರು ಎದ್ದು ಸ್ವಲ್ಪ ಸಂಭಾಷಣೆ ಮಾಡಿದ ಮೇಲೆ ಆ ಸ್ಥಳದಲ್ಲಿರುವ ವಿಚಿತ್ರಗಳನ್ನು ನೋಡ ಬೇಕೆಂದೂ, ನೋಡದೆ ಹೋಗ ಬಾರದೆಂದೂ, ಅವನಿಗೆ ಹೇಳಿದರು. ಈ ಪ್ರಕಾರ ಹೇಳಿ ಅವನನ್ನು ಪುಸ್ತಕಸಾಲೆಗೆ ಕರೆ ಕೊಂಡು ಹೋಗಿ, ಪೂರ್ವಕಾಲದ ಗ್ರಂಥಗಳನ್ನು ಅವನಿಗೆ ತೋರಿಸಿದರು. ಮೊದಲು ಆ ಬೆಟ್ಟದ ಯಜಮಾನನ ವಂಶಾವಳಿಯನ್ನು ಅವನಿಗೆ ತೋರಿಸಿದ್ದು ನಾನು ಕನಸಿನಲ್ಲಿ ಕಂಡೆನು. ಅದೇನಂದರೆ, ಅವನು ಅನಾದಿಯವನ ಮಗನಾಗಿ ಸೃಷ್ಟಿಗೆ ಮುಂಚೆ ಹುಟ್ಟಿದನು. ಅವನು ಮಾಡಿದ ಕ್ರಿಯೆಗಳೂ, ಅವನು ತನ್ನ ಸೇವೆಗಿಟ್ಟ ನೂರುನೂರು ಜನರ ಹೆಸರುಗಳೂ, ಅವರಿಗೆ ಉಂಟಾದ ವಾಸ ಸ್ಥಳಗಳ ವಿವರವೂ, ಅವು ದಿನಗಳ ವಿಸ್ತಾರದಿಂದಲಾದರೂ ಪ್ರಕೃತಿಯ ಬಿಯದಿಂದಲಾದರೂ ನಾಶವಾಗಲಾರವೆಂದೂ ಆ ಗ್ರಂಥಗಳಲ್ಲಿ ಬರೆದಿತ್ತು.

ತರುವಾಯ ಅವನ ಸೇವಕರಲ್ಲಿ ಕೆಲವರು ಮಾಡಿದ ಶೂರ ಕೃತ್ಯಗಳ ವಿವರಗಳನ್ನು ಅವನಿಗೆ ಓದಿ ಹೇಳಿದರು. ಅವು ಯಾವವಂದರೆ, ಅವರು ರಾಜ್ಯಗಳನ್ನು ಜಂಬಿಸಿದರು. ನೀತಿಯನ್ನು ನಡಿಸಿದರು. ವಾಗ್ದತ್ತಗಳನ್ನು ಹೊಂದಿದರು. ಸಿಂಹಗಳ ಬಾಯಿಗಳನ್ನು ಮುಚ್ಚಿದರು. ಬೆಂಕಿಯ ಪ್ರಾಣವನ್ನು ಆರಿಸಿದರು. ಕತ್ತಿಯ ಬಾಯಿಗೆ ತಪ್ಪಿದರು. ಬಲಹೀನರಾಗಿ ಬಲಿಷ್ಟರಾದರು. ಯುದ್ಧದಲ್ಲಿ ಸಮರ್ಥರಾದರು. ಪರಸೈನ್ಯಗಳನ್ನು ಓಡಿಸಿದರು.

ಮತ್ತೆ ಅವರು ಬೇರೆ ಗ್ರಂಥಗಳನ್ನು ಓದಿ, ತಮ್ಮ ಯಜಮಾನನು, ಹೋದ ಕಾಲದಲ್ಲಿ ತನಗೂ ತನ್ನ ಸಂಸ್ಥಾನಕ್ಕೂ ಬಹಳ

ನಿಂದೆ ಮಾಡಿದ ಜನರನ್ನು ಅನುಗ್ರಹದಿಂದ ಅಂಗೀಕರಿಸ ಮನಸ್ಸು
ಗಿದ್ದಾನೆಂದು ಅವನಿಗೆ ತಿಳಿಸಿದರು. ಆ ಗ್ರಂಥಗಳಲ್ಲಿ ಬರೆದ ಬೇರೆ
ಮಹಾ ಕಾರ್ಯಗಳ ವಿವರವನ್ನೂ, ಹಳೆ ಹೊಸ ಚರಿತ್ರೆಗಳನ್ನೂ,
ಶತ್ರುಗಳನ್ನು ಹೆದರಿಸುವದಕ್ಕಾಗಿಯೂ, ಪ್ರಯಾಣಸ್ಥರನ್ನು ಸಮ
ದಾಯಿಸುವದಕ್ಕಾಗಿಯೂ, ತಪ್ಪದೆ ಉಂಟಾಗ ತಕ್ಕ ಕಾರ್ಯಗಳ
ಪ್ರವಾದನೆಗಳನ್ನೂ, ಕ್ರಿಸ್ತಿಯನಿಗೆ ಹೇಳಿ ತೋರಿಸಿದರು.

ಮಾರಣೆ ದಿವಸದಲ್ಲಿ ಅವನನ್ನು ಆಯುಧ ಶಾಲೆಗೆ ಕರೆ
ಕೊಂಡು ಹೋಗಿ, ಯಜಮಾನನು ಪ್ರಯಾಣಸ್ಥರಿಗೋಸ್ಕರ ವಿಟ್ಟ
ಕತ್ತಿ ಡಾಲು ಶಿರಸ್ತ್ರಾಣ ಕವಚ ಸರ್ವಪ್ರಾರ್ಥನೆ ಹರಿಯದ ಪಾದ
ರಕ್ಷೆ ಮೊದಲಾದ ಆಯುಧಗಳನ್ನು ತೋರಿಸಿದರು. ಆಕಾಶದಲ್ಲಿರು
ವ ನಕ್ಷತ್ರಗಳ ಹಾಗೆ ಲೆಖ್ಖವಿಲ್ಲದ ಜನರು ತಮ್ಮ ಯಜಮಾನನ
ಸೇವೆಗೋಸ್ಕರ ಧರಿಸ ಬೇಕಾದರೆ ಅವರೆಲ್ಲರಿಗೆ ಸಾಕಾದಷ್ಟು ಇತ್ತು.

ಮತ್ತು ಆತನ ಸೇವಕರಲ್ಲಿ ಕೆಲವರು ಅದ್ಭುತ ಕ್ರಿಯೆಗಳಿಗೆ
ಪ್ರಯೋಗಿಸಿದ ಕೆಲವು ಸಾಮುಗ್ರಿಗಳನ್ನು ಅವನಿಗೆ ತೋರಿಸಿದರು.
ಯಾವವಂದರೆ, ಮೋಶೆಯ ಕೋಲೂ, ಯಾಬೀನಳು ಸಿಸೆರನನ್ನು
ಕೊಂದ ಸುತ್ತಿಗೆ ಮೊಳೆಗಳೂ ಗಿದ್ಯೋನನು ಮಿದ್ಯಾನ್ಯರ ಸೈನ್ಯ
ವನ್ನು ಓಡಿಸಿದ ಗಡಿಗೆ ತುತೂರಿ ದೀವಟಿಗೆಗಳೂ, ಶಮ್ಗಾರನು
ಆರುನೂರು ಮಂದಿಯನ್ನು ಕೊಂದ ಮುಳ್ಳುಗೋಲೂ, ಸಂಸೋ
ನನು ಶೂರ ಕೃತ್ಯಗಳನ್ನು ನಡಿಸಿದ ದವಡೆಯೂ, ದಾವೀದನು
ಗಾತಿನವನಾದ ಗೊಲಿಯಾತನನ್ನು ಕೊಂದ ಕಲ್ಲುಕವಣೆಯೂ,
ಇವುಗಳೇ. ಮತ್ತು ಅವರ ಕರ್ತನು ಸುಲಿಗೆ ಮಾಡಲಿಕ್ಕೆ ಏಳುವ
ದಿವಸದಲ್ಲಿ ಪಾಪದ ಮನುಷ್ಯನ ಸಂಹಾರಕ್ಕಾಗಿ ಪ್ರಯೋಗಿಸ
ತಕ್ಕ ಕತ್ತಿಯನ್ನು ತೋರಿಸಿದರು. ಇವುಗಳ ಹೊರ್ತು ಇನ್ನೂ
ಅನೇಕ ವಿಚಿತ್ರಗಳನ್ನು ತೋರಿಸಿದ್ದರಿಂದ ಕ್ರಿಸ್ತಿಯನು ಅತಿ ಸಂ
ತೋಷ ಪಟ್ಟನು, ಎಲ್ಲಾ ತೋರಿಸಿದ ಮೇಲೆ ವಿಶ್ರಮಿಸಿದರು.

ಮಾರಣೆ ದಿವಸದಲ್ಲಿ ಅವನು ಮುಂದೆ ಹೋಗಲಿಕ್ಕೆ ಸಿದ್ಧ
ಮಾಡಿ ಕೊಳ್ಳುವಾಗ, ಅವರು ಇನ್ನೊಂದು ದಿವಸವಿರ ಬೇಕು,

ಮಬ್ಬು ಇಲ್ಲವಾದರೆ ರಮ್ಯಗಿರಿ ಎಂಬ ಪರ್ವತಗಳನ್ನು ತೋರಿಸು
ತ್ತೇವೆ. ನೀವು ಪ್ರವೇಶಿಸ ಕೋರುವ ಶಾಂತಿಯ ಸ್ಥಳಕ್ಕೆ ಅವು
ಸಮೀಪವಾಗಿರುವ ಕಾರಣ ಅವುಗಳನ್ನು ನೋಡಿದರೆ ನಿಮ್ಮ ಮನ
ಸ್ಸಿಗೆ ಇನ್ನೂ ಅಧಿಕ ಸಂತೋಷವಾಗುವದೆಂದು ಹೇಳಿದದರಿಂದ
ಅವನು ಸಮ್ಮತಿಸಿ ನಿಂತನು. ಉದಯವಾದಾಗ ಅವನನ್ನು ಮನೆಯ
ಮಾಳಿಗೆಗೆ ಕರೆ ಕೊಂಡು ಹೋಗಿ ದಕ್ಷಿಣ ದಿಕ್ಕಿಗೆ ನೋಡ ಬೇ
ಕಂದರು. ಹಾಗೆಯೇ ಅವನು ನೋಡುವಾಗ, ಬಹಳ ದೂರದಲ್ಲಿ
ಅತಿ ರಮ್ಯವಾದ ಪರ್ವತಗಳುಳ್ಳ ದೇಶವನ್ನು ಕಂಡನು. ಅದರಲ್ಲಿ
ವನಗಳೂ ದ್ರಾಕ್ಷೆತೋಟಗಳೂ ವಿಧ ವಿಧವಾದ ಫಲಗಳೂ ಬುಗ್ಗೆ
ಗಳೂ ಕಾರಂಜಿಗಳೂ ಇರುವದರಿಂದ ಅದು ನೋಡಲಿಕ್ಕೆ ಅತಿ
ಸೌಂದರ್ಯವಾಗಿತ್ತು. ಆಗ ಅದರ ಹೆಸರೇನೆಂದು ಕೇಳಿದಾಗ,
ಅದು ಇಮ್ಮಾನುವೇಲನ ದೇಶವು. ಈ ಪರ್ವತವು ಸಕಲ ಪ್ರಯಾ
ಣಸ್ಥರ ಉಪಯೋಗಕ್ಕಾಗಿರುವ ಪ್ರಕಾರ ಅದು ಸಹ ಇರುತ್ತದೆ.
ಅಲ್ಲಿ ಸೇರಿದ ಮೇಲೆ ಪರಲೋಕ ಪಟ್ಟಣದ ದ್ವಾರವನ್ನು ನೋಡ
ಬಹುದು. ಅದನ್ನು ಅಲ್ಲಿ ವಸ್ತಿಯಾಗಿರುವ ಕುರುಬರು ನಿಮಗೆ ತೋ
ರಿಸುವರೆಂದು ಹೇಳಿದರು.

---

## 9. The Destroyer.

## ೯. ಸಂಹಾರಕನು.

---

ತರುವಾಯ ಕ್ರಿಸ್ತಿಯನು ಹೊರಡಲಿಕ್ಕಿದ್ದಾಗ ಅವರು ಸಮ್ಮ
ತಿಸಿದರು. ಆದಾಗ್ಯೂ ಮೊದಲು ಆಯುಧ ಶಾಲೆಗೆ ಹೋಗುವ,
ಅಂದರು. ಅಲ್ಲಿಗೆ ಅವನನ್ನು ಕರೆ ಕೊಂಡು ಹೋದ ಮೇಲೆ, ಮಾ
ರ್ಗದಲ್ಲಿ ಏನಾದರೂ ಯುದ್ಧ ಉಂಟಾದೀತೆಂಬ ಆಲೋಚನೆಯಿಂ
ದ ಪರಿಕ್ಷಿಸಲ್ಪಟ್ಟ ಕವಚವನ್ನು ತಲೆಯಿಂದ ಕಾಲಿನ ತನಕ ತೊಡಸಿ
ದರು. ಆ ಮೇಲೆ ಅವನು ತನ್ನ ಸ್ನೇಹಿತರ ಸಂಗಡ ಬಾಗಲಿಗೆ ಹೋ

ಗಿ, ಅಲ್ಲಿರುವ ದ್ವಾರಪಾಲಕನ ಹತ್ತಿರ ಯಾರಾದರೂ ಪ್ರಯಾಣ ಸ್ಥರು ಹಾದು ಹೋದದ್ದನ್ನು ನೋಡಿದಿರೋ? ಎಂದು ಕೇಳಿದ್ದಕ್ಕೆ ಅವನು ಹೌದಂದನು.

ಕ್ರಿ. ಹೋದವನ ಗುರುತು ಉಂಟೋ?

ದ್ವಾ. ಹೆಸರೇನೆಂದು ಕೇಳಿದ್ದಕ್ಕೆ ಅವನು ವಿಶ್ವಾಸೈಯ್ಯನೆಂದು ಹೇಳಿದನು.

ಕ್ರಿ. ಓಹೋ, ಅವನ ಗುರುತು ಬಲ್ಲೆ. ಅವನು ನನ್ನ ಊರಿನವನು. ನಾಶನಪುರದ ಒಂದೇ ಬೀದಿಯಲ್ಲಿ ಇದ್ದೆವು. ಅವನು ಎಷ್ಟು ದೂರ ಹೋಗಿದ್ದಾನು?

ದ್ವಾ. ಈಗ ಅವನು ಬೆಟ್ಟವನ್ನು ಇಳಿದಿರುವನು.

ಕ್ರಿ. ಒಳ್ಳೇದು. ಪ್ರಿಯ ದ್ವಾರಪಾಲಕನೇ, ಕರ್ತನು ನಿಮ್ಮ ಸಂಗಡ ಇರಲಿ. ನೀವು ನನಗೆ ಮಾಡಿದ ಪ್ರೀತಿಗೋಸ್ಕರ ಅವನು ನಿಮಗಿದ್ದ ವರಗಳನ್ನೆಲ್ಲಾ ಹೆಚ್ಚಿಸಲಿ.

ತರುವಾಯ ಅವನು ಮುಂದೆ ಹೋಗಲಾಗಿ, ವಿವೇಕ ಭಕ್ತಿ ಪ್ರೀತಿ ಬುದ್ಧಿ ಎಂಬ ಕನ್ನಿಕೆಯರು ಬೆಟ್ಟದ ಬುಡದ ಪರ್ಯಂತರ ಸಾಗ ಕಳುಹಿಸುತ್ತೇವೆ, ಅಂದರು. ಹಾಗೆಯೇ ಅವರು ಮೊದಲಿನ ಸಂಭಾಷಣೆಗಳ ವಿಷಯದಲ್ಲಿ ಎಚ್ಚರಿಸುತ್ತಾ ಬೆಟ್ಟದ ಬುಡದ ಪರ್ಯಂತರ ಹೋದರು. ಆಗ ಕ್ರಿಸ್ತಿಯನು—ಏರುವದು ಕಷ್ಟವಾಗಿತ್ತು. ಇಳಿಯುವದು ಗಂಡಾಂತರವಾಗಿ ಕಾಣುತ್ತದೆ, ಅನ್ನಲು, ಬುದ್ಧಿ ಎಂಬವಳು—ನೀವು ಹೇಳುವದು ಹೌದು. ನೀವು ಈಗ ಮುಂಗಿನ ದೀನನಾಡು ಎಂಬ ತಗ್ಗಿಗೆ ಜಾರದೆ ಇಳಿಯುವದು ಬಹು ಕಷ್ಟವಾಗಿದೆ. ಅದಕ್ಕೋಸ್ಕರವೇ ಬೆಟ್ಟದ ಬುಡ ಪರ್ಯಂತರ ನಿಮ್ಮನ್ನು ಸಾಗ ಕಳುಹಿಸ ಬಂದೆವು, ಅಂದಳು. ಆದಕಾರಣ ಅವನು ಇಳಿಯುವ ಸಮಯದಲ್ಲಿ ಬಹಳ ಎಚ್ಚರಿಕೆಯಿಂದಿದ್ದನು. ಆದರೂ ಒಂದೆರಡು ಸಾರಿ ಜಾರಿದನು.

ತರುವಾಯ ನಾನು ಕನಸಿನಲ್ಲಿ ಕಂಡದ್ದೇನಂದರೆ, ಕ್ರಿಸ್ತಿಯನು ಬೆಟ್ಟದ ಬುಡಕ್ಕೆ ಬಂದಾಗ ಈ ಒಳ್ಳೇ ಸಂಗಡಿಗರು ಅವನಿಗೆ ಒಂ

ದು ರೊಟ್ಟಿಯನ್ನೂ ದ್ರಾಕ್ಷೆರಸ ತುಂಬಿದ ವೊಂದು ಶೀಸೆಯನ್ನೂ ದ್ರಾಕ್ಷೆ ಹಣ್ಣುಗಳ ಗೊಂಚಲನ್ನೂ ಕೊಟ್ಟರು. ಆ ಮೇಲೆ ಅವನು ಮುಂದೆ ಹೋದನು.

ಈ ದೀನನಾಡಿನಲ್ಲಿ ಬಡ ಕ್ರಿಸ್ತಿಯನಿಗೆ ಬಹಳ ಸಂಕಟ ಬಂತು. ಹ್ಯಾಗಂದರೆ ಅವನು ಸ್ವಲ್ಪ ದೂರ ಹೋದ ಮೇಲೆ, ತನ್ನ ಎದುರಿಗೆ ಕಾಡು ತಪ್ಪಿ ಬಂದ ಒಬ್ಬ ದುಷ್ಟ ಪಿಶಾಚನನ್ನು ನೋಡಿದನು. ಅವನ ಹೆಸರು ಸಂಹಾರಕನು. ಕ್ರಿಸ್ತಿಯನು ಅವನನ್ನು ಕಂಡು, ಭಯ ಪಟ್ಟು, ಹಿಂದಕ್ಕೆ ಹೋಗಲೋ? ಇದ್ದಲ್ಲಿ ನಿಲ್ಲಲೋ? ಎಂದೂ, ತನ್ನ ಬೆನ್ನಿಗೆ ಕವಚವಿಲ್ಲ, ಬೆನ್ನು ಕೊಟ್ಟರೆ ಆ ಪಿಶಾಚನು ಬಾಣಗಳಿಂದ ತಿವಿಯುವದಕ್ಕೆ ಸುಲಭವಾದೀತೆಂದೂ, ಆಲೋಚಿಸಿ, ಧೈರ್ಯವಾಗಿ ನಿಂತಿರ ಬೇಕೆಂದು ನಿಶ್ಚಯಿಸಿದನು. ಯಾಕಂದರೆ ಜೀವ ತಪ್ಪಿಸಿ ಕೊಳ್ಳುವದು ಮಾತ್ರ ತನಗೆ ಬೇಕಾದಾಗ್ಯೂ ನಿಂತಿರುವದು ವಾಶಿ ಎಂದು ನೆನಸುತ್ತಿದ್ದನು.

ಈ ಪ್ರಕಾರ ಅವನು ಮುಂದೆ ಹೋಗುತ್ತಿರಲು ಸಂಹಾರಕನು ಅವನನ್ನು ಕಲತನು. ಅವನು ಬಹು ಅವಲಕ್ಷಣ ರೂಪ ಉಳ್ಳವನಾಗಿದ್ದನು. ಮೈ ಮೀನಿನ ಹಾಗೆ ಶಿಪ್ಪಿಗಳಿಂದ ತುಂಬಿದ್ದಾಗಿತ್ತು. ಇವು ಬಹಳ ಸುಂದರವೆಂದು ನೆನಸಿದನು. ಮತ್ತು ಅವನ ರೆಕ್ಕೆಗಳು ಘಟಸರ್ಪದ ಹಾಗೆ, ಕಾಲುಗಳು ಕರಡಿಯ ಹಾಗೆ, ಇದ್ದವು. ಹೊಟ್ಟೆಯೊಳಗಿಂದ ಬೆಂಕಿಯನ್ನೂ ಹೊಗೆಯನ್ನೂ ಕಾರುತ್ತಿದ್ದನು. ಅವನ ಬಾಯಿ ಸಿಂಹದ ಬಾಯಿಯ ಹಾಗಿತ್ತು. ಅವನು ಕ್ರಿಸ್ತಿಯನನ್ನು ಕಲತ ಮೇಲೆ ಅಲಕ್ಷ್ಯದಿಂದ ನೋಡಿ ಸಂಭಾಷಿಸಲಾರಂಭಿಸಿದನು.

ಸಂಹಾರಕನು. ನೀನು ಎಲ್ಲಿಂದ ಬಂದಿ? ಎಲ್ಲಿ ಹೋಗುತ್ತಿ?

ಕ್ರಿ. ಸಕಲ ಕೇಡಿನ ಸ್ಥಳವಾದ ನಾಶನಪುರದಿಂದ ಬಂದೆನು. ಚಿಯೋನ್ ಪಟ್ಟಣಕ್ಕೆ ಹೋಗುತ್ತೇನೆ.

ಸಂ. ನೀನು ನನ್ನ ಪ್ರಜೆಗಳಲ್ಲಿ ಒಬ್ಬನೆಂದು ತಿಳು ಕೊಳ್ಳು

ತ್ತೇನೆ. ನೀನು ಬಂದ ದೇಶವೆಲ್ಲಾ ನನ್ನದು. ಅದಕ್ಕೆ ಅರಸನೂ ದೇವರೂ ನಾನೇ. ಹಾಗಾದ ಮೇಲೆ ನಿನ್ನ ಅರಸನನ್ನು ಬಿಟ್ಟು ಓಡಿ ಹೋದದ್ದು ಯಾಕೆ? ಮುಂದಿನ ನಿನ್ನ ಒಳ್ಳೆ ಸೇವೆ ನಾನು ಆಲೋಚಿಸದೆ ಇದ್ದರೆ ಒಂದೇ ಪೆಟ್ಟಿನಿಂದ ನಿನ್ನನ್ನು ನೆಲಗತ ಮಾಡುವೆ.

ಕ್ರಿ. ನಾನು ನಿಮ್ಮ ರಾಜ್ಯದಲ್ಲಿ ಹುಟ್ಟಿದ್ದು ಹೌದು. ಆದರೆ ನಿಮ್ಮ ಸೇವೆ ಬಹು ಕಷ್ಟವೂ, ನಿಮ್ಮ ಸಂಬಳ ಮನುಷ್ಯರ ಬದುಕಿಗೆ ಆಗದಂಥಾದ್ದೂ. ಪಾಪದ ಸಂಬಳ ಮರಣವಷ್ಟೇ. ಹೀಗಿರುವದರಿಂದ ನಾನು ಪ್ರಾಯಸ್ಥನಾದ ಮೇಲೆ ಬೇರೆ ಬುದ್ಧಿವಂತರು ಮಾಡುವ ಪ್ರಕಾರ ಆಲೋಚನೆ ಮಾಡಿ ನಿಮ್ಮ ಸೇವೆಗಿಂತ ಒಳ್ಳೇ ಸೇವೆಯನ್ನು ಹುಡುಕಿದೆನು.

ಸಂ. ಹೀಗೆ ಸುಮ್ಮನೆ ಪ್ರಜೆಗಳನ್ನು ಬಿಟ್ಟು ಬಿಡುವದು ಅರಸನಿಗೆ ತಕ್ಕದಲ್ಲ. ನಿನ್ನನ್ನು ಬಿಡೆನು. ಸೇವೆ ಕಠಿಣವೂ, ಸಂಬಳ ಕೆಟ್ಟದ್ದೂ, ಎಂದು ಅಂಗಲಾಚದೆ ತಿರುಗಿ ಬಾ, ನನ್ನ ದೇಶದಲ್ಲಿರುವ ಉತ್ತಮ ಭೋಗಗಳನ್ನು ನಿನಗೆ ಕೊಡುತ್ತೇನೆ. ಭಯ ಪಡಬೇಡ.

ಕ್ರಿ. ಅರಸುಗಳ ಅರಸನಾದ ಮತ್ತೊಬ್ಬನ ಸೇವೆಗೆ ನಾನು ನಿಂತ ಮೇಲೆ ನಿಮ್ಮ ಸಂಗಡ ತಿರುಗಿ ಬರುವದು ನ್ಯಾಯವೋ?

ಸಂ. ಹನಿಗೆ ಹೆದರಿ ಹೊಳೆಯಲ್ಲಿ ಬಿದ್ದನೆಂಬ ಗಾದೆಯ ಹಾಗೆ ನಿನಗಾಯಿತು. ಹ್ಯಾಗಾದರೂ ಅವನ ಸೇವೆಯನ್ನು ಮಾಡುತ್ತೇವೆಂದು ಹೇಳಿದವರು ಸ್ವಲ್ಪ ಕಾಲದ ಮೇಲೆ ಅವನನ್ನು ಬಿಟ್ಟು ನನ್ನ ಕಡೆಗೆ ತಿರುಗುವದು ವಾಡಿಕೆಯಾಗಿದೆ. ಅದೇ ಪ್ರಕಾರ ನೀನು ಮಾಡಿದರೆ ಬಹು ಒಳ್ಳೇದು.

ಕ್ರಿ. ನಾನು ಅವನಿಗೆ ಮಾತು ಕೊಟ್ಟು ವಿಧೇಯನಾಗುತ್ತೇನೆಂದು ಪ್ರಮಾಣ ಮಾಡಿದ ಮೇಲೆ ತಿರುಗಿದರೆ ಸ್ವಾಮಿದ್ರೋಹಿಯಾಗಿ ಸಾಯ ಬೇಕಾದೀತಲ್ಲವೋ?

ಸಂ. ನನಗೂ ಸ್ವಾಮಿದ್ರೋಹ ಮಾಡಿದ್ದೀಯಲ್ಲ? ಆದಾಗ್ಯೂ ನೀನು ಈಗಲೇ ತಿರುಗಿದರೆ ನಾನೆಲ್ಲಾ ಮನ್ನಿಸುತ್ತೇನೆ.

ಕ್ರಿ. ನಿಮಗೆ ನಾನು ಮಾತು ಕೊಟ್ಟದ್ದು ಬಾಲ ಪ್ರಾಯದಲ್ಲಿ. ಈಗ ನಾನು ಸೇವಿಸುವ ಅರಸನು ನಾನು ನಿಮಗೆ ಕೊಟ್ಟ ಮಾತನ್ನು ಬಿಡಿಸುವದಲ್ಲದೆ ನಿಮಗೆ ಸೇವೆ ಮಾಡಿದ್ದರಿಂದಾದ ಪಾಪವನ್ನು ಸಹ ಪರಿಹರಿಸ ಶಕ್ತನಾಗಿದ್ದಾನೆಂದು ನೆನಸುತ್ತೇನೆ. ನಾಶಕನಾದ ಸಂಹಾರಕನೇ, ನಿಜವಾಗಿ ಹೇಳುತ್ತೇನೆ. ಅವನ ಸೇವೆಯೂ ಸಂಬಳವೂ ಸೇವಕರೂ ರಾಜ ನೀತಿಯೂ ಸಹವಾಸವೂ ದೇಶವೂ ನಿಮ್ಮವುಗಳಿಂತ ನನಗೆ ಚನ್ನಾಗಿ ಕಾಣುವದರಿಂದ ಇನ್ನು ನನ್ನನ್ನು ಪುಸಲಾಯಿಸ ಬೇಡಿರಿ. ನಾನು ಅವನ ಸೇವಕನಾಗಿದ್ದೇನೆ. ಅವನನ್ನು ಹಿಂಬಾಲಿಸುತ್ತೇನೆ.

ಸಂ. ಆತುರ ಪಡ ಬೇಡ. ನೀನು ಹೋಗುವ ಮಾರ್ಗದಲ್ಲಿ ನಿನಗೆ ಏನು ಆಗುವದೆಂದು ನಿಧಾನವಾಗಿ ಆಲೋಚಿಸು. ಅವನ ಸೇವಕರಲ್ಲಿ ಅನೇಕರು ನನಗೂ ನನ್ನ ಮಾರ್ಗಗಳಿಗೂ ವಿರೋಧವಾಗಿ ನಡೆದದರಿಂದ ಅಪಮಾನವಾಗಿ ನಾಶನವಾಗಿದ್ದಾರೆಂಬುವದು ತಿಳಿದಿದ್ದಿ. ಅವರಲ್ಲಿ ಎಷ್ಟೋ ಮಂದಿ ನಿಂದೆ ಸಹಿತವಾದ ಮರಣವನ್ನು ಹೊಂದಿದ್ದಾರೆ. ಇದಲ್ಲದೆ ಅವನ ಸೇವೆಯು ನನ್ನದಕ್ಕಿಂತ ಒಳ್ಳೇದೆಂದು ಹೇಳುತ್ತೀಯಲ್ಲ? ಅವನು ತನಗೆ ಸೇವೆ ಮಾಡುವವರನ್ನು ನನ್ನ ಕೈಯಿಂದ ಬಿಡಿಸುವದಕ್ಕೆ ತಾನಿದ್ದ ಸ್ಥಳದಿಂದ ಎಂದಿಗೂ ಬರಲಿಲ್ಲ. ನಾನಾದರೆ ಅವನ ಕೈಯಲ್ಲಿಯೂ ಅವನ ಸೇವಕರ ಕೈಯಲ್ಲಿಯೂ ಬಿದ್ದ ನನ್ನ ನಂಬಿಗೆಯುಳ್ಳ ಸೇವಕರನ್ನು ಪರಾಕ್ರಮದಿಂದಲೂ ತಂತ್ರದಿಂದಲೂ ಅನೇಕ ಸಾರಿ ತಪ್ಪಿಸಿದೆನೆಂದು ಸರ್ವ ಲೋಕಕ್ಕೂ ತಿಳಿದದೆ. ಅದೇ ಪ್ರಕಾರ ನಿನ್ನನ್ನು ತಪ್ಪಿಸುವೆನು.

ಕ್ರಿ. ನಮ್ಮ ಯಜಮಾನನು ತನ್ನ ಸೇವಕರನ್ನು ನಿಮ್ಮ ಕೈಯಿಂದ ಈಗಲೇ ತಪ್ಪಿಸದೆ ಇರುವದ್ಯಾಕಂದರೆ, ಅಂತ್ಯದ ಪರ್ಯಂತರ ಅವರು ಸ್ಥಿರವಾದಾರೋ ಎಂಬ ಅವರ ಪ್ರೀತಿಯನ್ನು ಪರೀಕ್ಷಿಸುವದಕ್ಕೆ, ಮತ್ತು ನೀವು ಹೇಳಿದ ಅಪಮಾನವಾದ ನಾಶನವನ್ನು ಅವರು ಅಧಿಕವಾದ ಮಾನವೆಂದೆಣಿಸುತ್ತಾರೆ. ತಮ್ಮ ಈಗಿನ

ಕಷ್ಟಗಳು ಪರಿಹಾರವಾಗ ಬೇಕೆಂದು ಅವರು ಬಹಳವಾಗಿ ಅಪೇಕ್ಷಿಸುವದಿಲ್ಲ. ಬರುವ ಮಹಿಮೆಗೋಸ್ಕರ ಅವರು ಕಾದು ಕೊಂಡಿರುತ್ತಾರೆ. ಯಾಕಂದರೆ, ಅವರ ಅರಸನು ತನ್ನ ಮಹಿಮೆಯಿಂದಲೂ ತನ್ನ ದೂತರ ಮಹಿಮೆಯಿಂದಲೂ ಬರುವ ಸಮಯದಲ್ಲಿ ಇವರಿಗೂ ಮಹಿಮೆಯುಂಟಾಗುವದು.

ಸಂ. ಅವನ ಸೇವೆಯಲ್ಲಿ ಅನೇಕ ಸಾರಿ ನಂಬಿಗೆ ಇಲ್ಲದೆ ನಡದ ನಿನಗೆ ಅವನ ಸಂಬಳ ಬರುವದೆಂದು ಹ್ಯಾಗೆ ನೆನಸುತ್ತೀ?

ಕ್ರಿ. ನಾನು ಯಾತರಲ್ಲಿ ನಂಬಿಗೆ ಇಲ್ಲದೆ ಇದ್ದೆನು, ಸಂಹಾರಕನೇ?

ಸಂ. ನೀನು ಹೊರಟು ಬಂದಾಗಲೇ ಅಪನಂಬಿಗೆ ಎಂಬ ಹುದಿಲಿನಲ್ಲಿ ಬಿದ್ದು ಅಧೈರ್ಯ ಪಡಲಿಲ್ಲವೋ? ನಿನ್ನ ಹೊರೆ ನಿನ್ನ ಅರಸನು ಪರಿಹರಿಸುವ ಪರ್ಯಂತರ ತಾಳದೆ ಅದನ್ನು ಬಿಡಿಸಿ ಕೊಳ್ಳುವ ಅಪೇಕ್ಷೆಯಿಂದ ತಪ್ಪು ಮಾರ್ಗಗಳಲ್ಲಿ ಸೇರಲಿಲ್ಲವೋ? ಮತ್ತು ಪಾಪವಾದ ನಿದ್ರೆಯನ್ನು ಮಾಡಿ ನಿನ್ನ ಒಡವೆಯನ್ನು ಬಿಟ್ಟು ಬರಲಿಲ್ಲವೋ? ಇದು ಹೊರ್ತು ಸಿಂಹಗಳನ್ನು ನೋಡಿದ್ದಾಗ ತಿರುಗಿ ಹೋಗುವದಕ್ಕೆ ಮನಸ್ಸು ಮಾಡಲಿಲ್ಲವೋ? ಇದಲ್ಲದೆ ನಿನ್ನ ಮುಂದಿನ ಪ್ರಯಾಣವನ್ನೂ ಕಂಡವುಗಳನ್ನೂ ಕೇಳಿದವುಗಳನ್ನೂ ವಿವರಿಸುವ ಸಮಯಗಳಲ್ಲಿ ನಿನ್ನ ಮಾತುಗಳಲ್ಲಿಯೂ ಕ್ರಿಯೆಗಳಲ್ಲಿಯೂ ಅಂತರಂಗವಾದ ಡಂಭ ಉಂಟಲ್ಲವೋ?

ಕ್ರಿ. ಇದೆಲ್ಲಾ ಸತ್ಯ. ನೀವು ಹೇಳದೆ ಇರುವಂಥಾದ್ದು ಇನ್ನೂ ಬಹಳ ಉಂಟು. ಆದಾಗ್ಯೂ ನಾನು ಸೇವಿಸಿ ಸನ್ಮಾನಿಸುವ ಅರಸನು ಕೃಪೆಯುಳ್ಳವನೂ, ಕ್ಷಮಿಸಲಿಕ್ಕೆ ಸಿದ್ಧನೂ, ಆಗಿರುತ್ತಾನೆ. ಇದಲ್ಲದೆ ಈ ದುರ್ಗುಣಗಳು ನಿಮ್ಮ ದೇಶದಲ್ಲೇ ನನಗೆ ಹತ್ತಿದವು. ಅಲ್ಲಿ ಅವುಗಳನ್ನು ಮೊಲೆ ಹಾಲಿನ ಸಂಗಡ ಕುಡಿದೆನು. ಆದರೂ ನಾನು ಅವುಗಳಿಗೋಸ್ಕರ ಮೊರೆ ಇಟ್ಟು ದುಃಖ ಪಟ್ಟು ನನ್ನ ಅರಸನಿಂದ ಕ್ಷಮೆಯನ್ನು ಹೊಂದಿದೆನು.

ತರುವಾಯ ಸಂಹಾರಕನು, ಅಘೋರವಾದ ರೌದ್ರ ಹತ್ತಿ, ಈ

ಅರಸನಿಗೆ ನಾನು ಶತ್ರುವಾಗಿದ್ದೇನೆ. ಅವನನ್ನೂ ಅವನ ನ್ಯಾಯ
ಗಳನ್ನೂ ಅವನ ಜನರನ್ನೂ ಹಗೆ ಮಾಡುತ್ತೇನೆ. ನಿನ್ನನ್ನು ಎದು
ರಿಸ ಬೇಕಾಗಿ ನಾನು ಹೊರಟೆನು, ಎಂದು ಹೇಳಿದನು.

ಕ್ರಿ. ಸಂಹಾರಕನೇ, ಭದ್ರ, ನಾನು ಪರಿಶುದ್ಧತ್ವವೆಂಬ ರಾಜ
ಮಾರ್ಗದಲ್ಲಿ ಇದ್ಧೇನೆ. ಎಚ್ಚರವಾಗಿರು.

ಆಗಲು ಸಂಹಾರಕನು ಎಲ್ಲಾ ಮಾರ್ಗಕ್ಕೆ ಅಡ್ಡಗಾಲಿಟ್ಟು ಈ
ಕೆಲಸದಲ್ಲಿ ನನಗೆ ಭಯವಿಲ್ಲ. ಸಾಯಲಿಕ್ಕೆ ಸಿದ್ಧ ಮಾಡಿಕೊ.
ನೀನು ಮುಂದೆ ಹೋಗಲಿಕ್ಕಿಲ್ಲ. ನರಕದಾಣೆ ಇಲ್ಲೇ ನಿನ್ನ ಪ್ರಾಣ
ತೆಗೆಯುತ್ತೇನೆಂದು ಉರಿಬಾಣವನ್ನು ಅವನ ಎದೆಗೆ ಎಸೆದನು. ಆದರೆ
ಕ್ರಿಸ್ತಿಯನು ತನ್ನ ಕೈಯಲ್ಲಿರುವ ಡಾಲಿನಿಂದ ಅದನ್ನು ತಪ್ಪಿಸಿ,
ಕೇಡು ಹೊಂದಲಿಲ್ಲ.

ಆಗಲು ಕ್ರಿಸ್ತಿಯನು ಜಾಗ್ರತೆಗೆ ಸಮಯ ಬಂತೆಂದು ನೋಡಿ
ಕತ್ತಿಯನ್ನು ಹಿರಿದನು. ಸಂಹಾರಕನು ಬಾಣಗಳ ಮಳೆಯನ್ನು
ಸುರಿಸಿದನು. ಕಾಪಾಡಿ ಕೊಳ್ಳುತ್ತಿದ್ದಾಗ್ಯೂ ಕ್ರಿಸ್ತಿಯನ ತಲೆಗೂ
ಕೈಗೂ ಕಾಲಿಗೂ ಘಾಯ ಮಾಡಿದನು. ಈ ಘಾಯಗಳಿಗೋ
ಸ್ಕರ ಕ್ರಿಸ್ತಿಯನು ಸಲ್ಪ ಹಿಂಜರಿದ ಕಾರಣ ಸಂಹಾರಕನು ಹೆಚ್ಚಾ
ದ ಪರಾಕ್ರಮದಿಂದ ಯುದ್ಧ ಮಾಡಿದನು. ಆಗ ಕ್ರಿಸ್ತಿಯನು ಸಹ
ಅಧೈರ್ಯ ಪಡದೆ ತನ್ನಿಂದ ಆಗುವ ಮಟ್ಟಿಗೂ ಹೋರಾಡಿದನು.
ಈ ಭಯಂಕರವಾದ ಯುದ್ಧಕ್ಕೆ ಅರ್ಧ ದಿವಸಕ್ಕಿಂತ ಹೆಚ್ಚು ಹೊ
ತ್ತು ಹೋಯಿತು. ಕ್ರಿಸ್ತಿಯನಿಗೆ ಘಾಯಗಳ ದೆಶೆಯಿಂದ ಬಲವು
ಕುಂದುತ್ತಾ ತ್ರಾಣವು ಪೂರ್ಣವಾಗಿ ಹೋಗಲಿಕ್ಕೆ ಸಮೀಪಿಸಿತು.

ಹೀಗಿರಲಾಗಿ ಸಂಹಾರಕನು ತನಗೆ ಇದೇ ಸಮಯವೆಂದು
ತಿಳಿದು, ಕ್ರಿಸ್ತಿಯನ ಹತ್ತರ ಬಂದು ಕುಸ್ತಿಯಾಡಿ ಅವನನ್ನು ನೆಲ
ಕ್ಕೆ ಕೆಡವಿದನು. ಆಗ ಕತ್ತಿಯು ಕ್ರಿಸ್ತಿಯನ ಕೈಯಿಂದ ಬಿದ್ದು
ಹೋದದರಿಂದ ಸಂಹಾರಕನು ಗೆದ್ದೆನಲ್ಲಾ? ಎಂದು ಹೇಳಿ, ಕೊಲ್ಲು
ವ ಹಾಗೆ ಅವನ ಮೇಲೆ ಬಿದ್ದು ಅಣಗಿಸಿದನು. ಆಗ ಕ್ರಿಸ್ತಿಯನಿಗೆ
ಪ್ರಾಣಸಂಕಟವಾಯಿತು. ಆದರೆ ಈ ಒಳ್ಳೇ ಮನುಷ್ಯನನ್ನು ಪೂ

ಣರ್ವಾಗಿ ಸಂಹರಿಸ ಬೇಕೆಂದು ಸಂಹಾರಕನು ಕಡೇ ಪೆಟ್ಟು ಹೊಡೆ
ಯುವ ಸಮಯದಲ್ಲಿ ಕ್ರಿಸ್ತಿಯನು ಚಮತ್ಕಾರವಾಗಿ ಕೈ ಚಾಚಿ ಕತ್ತಿ
ಯನ್ನು ಹಿಡಿದು ಶತ್ರುವೇ ಗೆದ್ದೆನೆಂದು ಜಯಧ್ವನಿ ಮಾಡಬೇಡ. ನಾ
ನು ಬಿದ್ದರೂ ಏಳುವೆನೆಂದು ಹೇಳಿ ಬಲವಾಗಿ ಅವನನ್ನು ತಿವಿದನು. ಸಂ
ಹಾರಕನು ಮರಣಕರವಾದ ಘಾಯವನ್ನು ಹೊಂದಿದವನ ಹಾಗೆ ಹಿಮ್ಮೆ
ಟ್ಟುವದನ್ನು ಕ್ರಿಸ್ತಿಯನು ನೋಡಿ, ಇವೆಲ್ಲವುಗಳಲ್ಲಿ ನಮ್ಮನ್ನು ಪ್ರೀತಿ
ಮಾಡಿದವನ ಮುಖಾಂತರ ಅಧಿಕ ಜಯಶಾಲಿಗಳಾಗಿದ್ದೇವೆಂದು ಹೇ
ಳಿ, ತಿರಿಗಿ ಅವನ ಎದುರಿಗೆ ಬರಲು ಸಂಹಾರಕನು ತನ್ನ ರೆಕ್ಕೆಗಳನ್ನು ಕೆದ
ರಿ ಓಡಿ ಹೋದನು. ಆ ಮೇಲೆ ಕ್ರಿಸ್ತಿಯನು ಅವನನ್ನು ನೋಡಲಿಲ್ಲ.

ಈ ಹೋರಾಟ ನಡೆಯುವ ಪರ್ಯಂತರ ಸಂಹಾರಕನು ಎಂ
ಥಾ ಬೊಬ್ಬೆಗಳನ್ನೂ ಗರ್ಜನೆಗಳನ್ನೂ ಮಾಡಿದನೆಂದೂ, ಕ್ರಿಸ್ತಿ
ಯನು ಎಂಥಾ ಮುಲುಗುಗಳನ್ನೂ ಉಸುರುಗಳನ್ನೂ ಬಿಟ್ಟನೆಂದೂ,
ನನ್ನ ಹಾಗೆ ನೋಡಿ ಕೇಳಿದವರೇ ಹೊರ್ತು ಮತ್ತ್ಯಾರೂ ಗ್ರಹಿಸ
ಲಾರರು. ಇಬ್ಬಾಯಿ ಕತ್ತಿಯಿಂದ ಸಂಹಾರಕನಿಗೆ ಘಾಯ ಮಾ
ಡುವ ಪರ್ಯಂತರ ಕ್ರಿಸ್ತಿಯನ ಸಂತೋಷದ ಮುಖ ಒಂದು
ಸಾರಿಯಾದರೂ ನಾನು ನೋಡಲಿಲ್ಲ. ಅದಾದ ಮೇಲೆ ಅವನು
ಹಸನ್ಮುಖವಾಗಿ ಮೇಲೆ ನೋಡಿದನು. ನಾನು ನೋಡಿದ ಎಲ್ಲಾ ಕಾ
ರ್ಯಗಳಲ್ಲಿ ಈ ಹೋರಾಟವು ಅತಿ ಭಯಂಕರವಾಗಿತ್ತು.

ಯುದ್ಧವಾದ ಮೇಲೆ ಕ್ರಿಸ್ತಿಯನು, ಸಿಂಹದ ಬಾಯೊಳಗಿಂದ ನ
ನ್ನನ್ನು ತಪ್ಪಿಸಿ, ಸಂಹಾರಕನ ವಿರೋಧದಲ್ಲಿ ನನಗೆ ಸಹಾಯ ಮಾಡಿದ
ವನಿಗೆ ಇಲ್ಲಿಯೇ ಸ್ತುತಿ ಮಾಡ ಬೇಕೆಂದು ಹೇಳಿ ಹಾಡಿದ್ದೇನಂದರೆ,

> ನರಕದಧಿಪತಿಯಾಜ್ಞೆಯಿಂದಿವ
> ನುರಿವರೋಷದೊಳೀಗಲೆನ್ನನು
> ಮುರಿದುಕೆಡಿಸುವೆನೆಂಬಯೋಚನೆಗೈದುಬಂದಿರಲು ||
> ಕರುಣೆಯಾಗಿಹದೇವದೂತನ
> ವರಸಹಾಯದಿಗೆಲಿದೆನಹಿತನ
> ನಿರಿದುಖಡ್ಗದೊಳಾಗಲೀಸ್ತುತಿಜಯುವನಿತ್ತವಗೆ ||

ಅದರ ಮೇಲೆ ಜೀವ ವೃಕ್ಷದ ಎಲೆಗಳನ್ನು ಹಿಡಿದ ಒಂದು ಕೈ ಕಾಣ ಬಂದದರಿಂದ ಕ್ರಿಸ್ತಿಯನು ಕೆಲವು ತೆಗೆದು ಯುದ್ಧದಲ್ಲಿ ಆದ ಘಾಯಗಳಿಗೆ ಹಚ್ಚಿದಾಗ ಅವು ಗುಣವಾದವು. ತರುವಾಯ ಆ ಸ್ಥಳದಲ್ಲಿ ತೂತು ಕೊಂಡು, ರೊಟ್ಟಿಯನ್ನು ತಿಂದು, ಮುಂಚೆ ತನಗೆ ಶಿಕ್ಕಿದ ಶೀಸೆಯಿಂದ ಸ್ವಲ್ಪ ಕುಡಿದು ವಿಶ್ರಮಿಸಿದ ಮೇಲೆ, ಇನ್ನು ಯಾರಾದರೂ ಶತ್ರುಗಳು ಇರುವರೆಂಬ ಆಲೋಚನೆಯಿಂದ ಬಿಚ್ಚ ಕತ್ತಿಯನ್ನು ಕೈಯಲ್ಲಿ ಹಿಡಿದು ಪ್ರಯಾಣಕ್ಕೆ ಹೊರಟನು. ಆದರೆ ಆ ತಗ್ಗು ದಾಟುವ ಪರ್ಯಂತರಕ್ಕೂ ಸಂಹಾರಕನಿಂದ ಬೇರೇನೂ ಉಪದ್ರವಾಗಲಿಲ್ಲ.

ಆ ತಗ್ಗಿನ ಅಂತ್ಯದಲ್ಲಿ ಮರಣದ ನೆರಳೆಂಬ ಇನ್ನೊಂದು ತಗ್ಗು ಇತ್ತು. ಪರಲೋಕದ ಪಟ್ಣಕ್ಕೆ ಹೋಗುವ ಮಾರ್ಗವು ಅದರ ಮಧ್ಯದಲ್ಲಿ ಇರುವ ಕಾರಣ ಕ್ರಿಸ್ತಿಯನು ಅದನ್ನು ಅವಶ್ಯವಾಗಿ ದಾಟ ಬೇಕಾಯಿತು. ಬಹಳ ಕೆಟ್ಟ ಸ್ಥಳ. ಕ್ರಿಸ್ತಿಯರೇ ಹೊರ್ತು ಮತ್ತ್ಯಾರೂ ದಾಟದೆಯೂ, ಮನುಷ್ಯರಲ್ಲಿ ಯಾರೂ ನಿವಾಸಿಸದೆಯೂ, ಇರುವ ದೇಶವಾಗಿರುತ್ತದೆ. ಈ ತಗ್ಗಿನಲ್ಲಿ ಕ್ರಿಸ್ತಿಯನಿಗೆ ಸಂಹಾರಕನ ಯುದ್ಧದಲ್ಲಿ ಆದ ಸಂಕಟಕ್ಕಿಂತ ಹೆಚ್ಚು ಸಂಕಟ ಉಂಟಾಯಿತು.

---

## 10. Valley of the Shadow of Death.

## ೧೦. ಮರಣದ ನೆರಳಿನ ತಗ್ಗು.

---

ಮರಣದ ನೆರಳಿನ ಅಂಚಿಗೆ ಕ್ರಿಸ್ತಿಯನು ಬಂದ ಮೇಲೆ, ಒಳ್ಳೇ ದೇಶವನ್ನು ಹೊಂಚಿ ನೋಡಿ ಕೆಟ್ಟ ಸಮಾಚಾರವನ್ನು ತಂದವರ ಮಕ್ಕಳಾದ ಇಬ್ಬರು ತ್ವರಿತದಿಂದ ಹಿಂದಕ್ಕೆ ಬರುವವರಾಗಿ ಅವನಿಗೆ ಎದುರಾದದ್ದನ್ನು ಕನಸಿನಲ್ಲಿ ಕಂಡೆನು. ಅವರನ್ನು ಕ್ರಿಸ್ತಿಯನು ಕೇಳಿದ್ದೇನಂದರೆ,

ಕ್ರಿ. ಎಲ್ಲಿಗೆ ಹೋಗುತ್ತೀರಿ?

ಅವರು. ಹಿಂದೆ ಹಿಂದಕ್ಕೆ ಹೋಗುತ್ತೇವೆ. ಜೀವವೂ ಕ್ಷೇಮವೂ ನಿಮಗೆ ಪ್ರಿಯವಾಗಿದ್ದರೆ ನೀವು ಸಹ ಹಿಂದಕ್ಕೆ ಬನ್ನಿ.

ಕ್ರಿ. ಯಾಕೆ? ಏನಾಯಿತು?

ಅವರು. ಏನಾಯಿತೆಂಬುವದೇನು. ನೀವು ಹೋಗುವ ಮಾರ್ಗದಲ್ಲಿ ನಾವು ಹೊರಟು ಕೂಡುವ ಮಟ್ಟಿಗೂ ಹೋದೆವು. ಅಲ್ಲಿಂದ ಹಿಂದಕ್ಕೆ ಬರುವದೇ ಕಷ್ಟವಾಯಿತು. ಇನ್ನು ಸ್ವಲ್ಪವಾದರೂ ಮುಂದೆ ಹೋಗಿದ್ದರೆ ನಿಮಗೆ ಸಮಾಚಾರವನ್ನು ಹೇಳಲಿಕ್ಕೆ ಕೂಡದೆ ಹೋಯಿತು.

ಕ್ರಿ. ಹಾಗಾದರೆ ಅಲ್ಲಿ ಏನು ಕಂಡಿರಿ?

ಅವರು. ನಾವು ಮರಣದ ನೆರಳೆಂಬ ತಗ್ಗಿನಲ್ಲಿ ಶೇರಲಿಕ್ಕಿದ್ದೆವು. ಆದರೆ ಬರುವ ಗಂಡಾಂತರವು ಸಂಭವಿಸುವದಕ್ಕಿಂತ ಮುಂಚೆಯೇ ನೋಡಿದ್ದು ಒಳ್ಳೇದಾಯಿತು.

ಕ್ರಿ. ಹಾಗಾದರೆ ಏನು ಕಂಡಿರಿ?

ಅವರು. ಕಾಣುವದು ಏನು? ಆ ತಗ್ಗು ಗಾಢಾಂಧಕಾರವಾಗಿದೆ. ಅದರಲ್ಲಿ ನರಕ ನಿವಾಸಿಗಳಾದ ಭೂತ ಬೇತಾಳ ಘಟಸರ್ಪಗಳನ್ನು ನೋಡಿದೆವು. ಸಂಕೋಲೆಗಳಿಂದ ಬಂಧಿಸಲ್ಪಟ್ಟು ಹೇಳಲಾರದ ಶ್ರಮೆಯನ್ನು ಅನುಭವಿಸುವ ಜನರ ಕೂಗಿನ ಪ್ರಕಾರ ನಿತ್ಯವಾದ ಗೋಳಾಟವನ್ನೂ ಬೊಬ್ಬೆಯನ್ನೂ ಸಹ ಅಲ್ಲಿ ಕೇಳಿದೆವು. ಅದರ ಮೇಲಗಡೆ ಕಳವಳವೆಂಬ ಎದೆಗುಂದಿಸುವ ಮೋಡಗಳು ತೂಗ್ಯಾಡುತ್ತವೆ. ಮರಣವು ಎಡೆಬಿಡದೆ ರೆಕ್ಕೆಗಳನ್ನು ಆ ತಗ್ಗಿನ ಮೇಲೆ ಚಾಚಿಸುತ್ತದೆ. ಇನ್ನೇನು ಹೇಳಲಿ. ಅದು ಯಾವತ್ತು ವಿಕಾರವಾಗಿ ಕೇವಲ ಭಯಂಕರವಾಗಿದೆ.

ಕ್ರಿ. ನೀವು ಹೇಳಿದ ಹಾಗೆ ಇದ್ದಾಗ್ಯೂ ನಾನು ಶೇರ ಬೇಕಾದ ಸ್ಥಳಕ್ಕೆ ಹೋಗುವ ಮಾರ್ಗವು ಇದೇ.

ಅ. ಈ ಮಾರ್ಗವು ನಿಮಗೆ ಬೇಕಾದರೂ ನಮಗೆ ಬೇಡ.

ಈ ಪ್ರಕಾರ ಹೇಳಿ ಅವರು ವಿಂಗಡವಾದರು. ಕ್ರಿಸ್ತಿಯನು

ತನ್ನ ಮಾರ್ಗ ಹಿಡಿದು ಮುಂದೆ ಹೋಗುವಾಗ ಯಾರಾದರು ತನ್ನ ಸಂಗಡ ಯುದ್ಧ ಮಾಡ್ಯಾರೆಂಬ ಭಯಕ್ಕೋಸ್ಕರ ಬಿಚ್ಚು ಕತ್ತಿಯನ್ನು ಹಿಡಿದು ಕೊಂಡೇ ಇದ್ದನು.

ತರುವಾಯ ನಾನು ಸ್ವಪ್ನದಲ್ಲಿ ಕಂಡದ್ದೇನಂದರೆ, ಆ ತಗ್ಗಿನ ತುದಿಯ ವರೆಗೆ ಬಲಪಾರ್ಶ್ವದಲ್ಲಿ ಆಳವಾದ ಡೊಂಗರವಿತ್ತು. ಲೋಕದಾರಂಭದಿಂದ ಕುರುಡರು ಕುರುಡರಿಗೆ ಮಾರ್ಗ ತೋರಿಸಿ ಇಬ್ಬರೂ ಬಿದ್ದ ಡೊಂಗರವು ಇದೇ. ಎಡಪಾರ್ಶ್ವದಲ್ಲಿ ಬಹು ಆಳವಾದ ಕೆಸರಿತ್ತು. ಒಳ್ಳೇಯವರಾದರೂ ಅದರಲ್ಲಿ ಬಿದ್ದರೆ ಕಾಲಿಗೆ ನೆಲ ತಗಲುವದಿಲ್ಲ. ಆ ಕೆಸರಿನಲ್ಲಿ ಒಂದು ಸಾರಿ ಅರಸನಾದ ದಾವೀದನು ಬಿದ್ದಾಗ ತಪ್ಪಿಸ ಶಕ್ತನಾದವನು ತಪ್ಪಿಸದೆ ಇದ್ದರೆ ಸಂದೇಹವಿಲ್ಲದೆ ಅವನು ಮುಳುಗುತ್ತಿದ್ದನು.

ಮಾರ್ಗವು ಸಹ ಬಹಳ ಇಕ್ಕಟ್ಟಾಗಿರುವದರಿಂದ ಭಕ್ತಿಯುಳ್ಳ ಕ್ರಿಸ್ತಿಯನಿಗೆ ಅಧಿಕವಾದ ಸಂಕಟವಾಯಿತು. ಏನಂದರೆ, ಆ ಕತ್ತಲೆಯಲ್ಲಿ ಅವನು ಈಚೆ ಡೊಂಗರದಿಂದ ಕಾಪಾಡಿ ಕೊಳ್ಳ ನೋಡುವಾಗ ಆಚೆ ಕೆಸರಿನಲ್ಲಿ ಬೀಳ ಸಮೀಪಿಸಿದನು. ಕೆಸರಿನಿಂದ ಕಾಪಾಡಿ ಕೊಳ್ಳುವಾಗ ಡೊಂಗರದಲ್ಲಿ ಬೀಳದ ಹಾಗೆ ಬಹಳ ಜಾಗ್ರತೆ ಪಡ ಬೇಕಾಯಿತು. ಈ ಪ್ರಕಾರ ಅವನು ಹೋಗುತ್ತಿರಲು ಆ ಉಭಯ ಪಾರ್ಶ್ವದ ಗಂಡಾಂತರ ಹೊರ್ತಾಗಿ ಮಾರ್ಗದಲ್ಲಿ ಬಹಳ ಕತ್ತಲೆ ಇರುವದರಿಂದ ಅನೇಕ ಸಾರಿ ನಡೆಯುವಾಗ ಹೆಜ್ಜೆಯು ಎಲ್ಲಿ ಇಡ ಬೇಕೆಂದು ತಿಳಿಯದೆ ಬಹಳವಾಗಿ ನರಳುವದನ್ನು ಕೇಳಿದೆನು.

ಆ ತಗ್ಗಿನ ಮಧ್ಯದಲ್ಲಿ ಮಾರ್ಗಕ್ಕೆ ಬಹಳ ಸಮೀಪವಾಗಿ ನರಕದ ಬಾಗಲು ಇದ್ದದ್ದನ್ನು ಕಂಡೆನು. ಕ್ರಿಸ್ತಿಯನು ಅದನ್ನು ನೋಡಿ, ಈಗ ಏನು ಮಾಡಲಿ? ಎಂದು ಆಲೋಚಿಸಿದನು. ಆ ಬಾಗಲೊಳಗಿಂದ ಬೆಂಕಿಯೂ ಹೊಗೆಯೂ ಕಿಡಿಗಳೂ ಅಸಹ್ಯವಾದ ಶಬ್ದಗಳೂ ಆಗ್ಯಾಗ್ಯೆ ಹೊರಡುತ್ತಾ ಇರುವದರಿಂದ ಕ್ರಿಸ್ತಿಯನು ಕತ್ತಿಯಿಂದ ಪ್ರಯೋಜನವಿಲ್ಲವೆಂದು ತಿಳಿದು, ಅದನ್ನು ಒರೆಗೆ ಹಾಕಿ ಸರ್ವಪ್ರಾರ್ಥನೆ ಎಂಬ ಬೇರೊಂದು ಆಯುಧವನ್ನು ತೆಗೆದು, ಕರ್ತ

ನೇ, ನನ್ನ ಆತ್ಮವನ್ನು ತಪ್ಪಿಸೆಂದು ಬೇಡಿ ಕೊಳ್ಳುತ್ತೇನೆಂಬದಾಗಿ ನಾನು ಕೇಳುವ ಹಾಗೆ ಮೊರೆ ಇಟ್ಟನು. ಈ ಪ್ರಕಾರ ಅವನು ಬಹು ದೂರ ಹೋಗುವ ಸಮಯದಲ್ಲಿ ಜ್ವಾಲೆಗಳು ಅವನ ಸಮೀಪಕ್ಕೆ ಬಂದವು. ಮತ್ತು ಅವನು ಭಯಂಕರವಾದ ಕೂಗುಗಳನ್ನೂ ಆಚೆಯಿಂದ ಈಚೆ ಈಚೆಯಿಂದ ಆಚೆಗೆ ಸುಳಿದಾಡುವವರ ಶಬ್ದಗಳನ್ನೂ ಕೇಳಿ, ಅವರು ತನ್ನನ್ನು ಚೂರು ಚೂರಾಗಿ ಮಾಡುವರೆಂದೂ ಬೀದಿಯ ಕೆಸರಿನ ಹಾಗೆ ತುಳಿದು ಬಿಡುವರೆಂದೂ ಭಯ ಪಟ್ಟನು. ಈ ಭಯಂಕರವಾದವುಗಳನ್ನು ನೋಡುತ್ತಾ ಕೇಳುತ್ತಾ ಕೆಲವು ಹರದಾರಿ ದೂರ ಹೋದ ಮೇಲೆ, ಅವನು ಪಿಶಾಚಿಗಳ ಒಂದು ಗುಂಪು ಎದುರಿಗೆ ಬರುವದನ್ನು ತಿಳಿದು, ಈಗ ಏನು ಮಾಡಲಿ? ಹಿಂದಕ್ಕೆ ಹೋಗಬಹುದಂದರೆ ಈ ತಗ್ಗನ್ನು ಅರ್ಧ ದಾಟಿರ ಬಹುದು. ಅನೇಕ ಗಂಡಾಂತರಗಳಿಗೆ ಸುಖವಾಗಿ ತಪ್ಪಿದ್ದೇನೆ. ಹಿಂದಕ್ಕೆ ಹೋಗುವದಾದರೆ ಮುಂದಕ್ಕೆ ಹೋಗುವದಕ್ಕಿಂತ ದೊಡ್ಡ ಮೋಸವಾದೀತು ಎಂದು ಆಲೋಚಿಸಿ, ಮುಂದೆ ಹೋಗ ಬೇಕೆಂದು ನಿಶ್ಚಯಿಸಿದನು. ಆದಾಗ್ಯೂ ಆ ಪಿಶಾಚಿಗಳು ಹತ್ತರ ಹತ್ತರ ಬಂದ ಹಾಗೆ ಶಬ್ದ ಹೆಚ್ಚಾಯಿತು. ಅವು ಮುಟ್ಟುವಷ್ಟು ಹತ್ತರ ಬಂದಾಗ ಅವನು, ಕರ್ತನಾದ ದೇವರ ಪರಾಕ್ರಮದಲ್ಲಿ ನಾನು ನಡೆದು ಕೊಳ್ಳುವೆನೆಂದು ಘಟ್ಟಿಯಾಗಿ ಕೂಗಲು, ಅವು ಹಿಂದಿರುಗಿದವು. ಮತ್ತೆ ಬರಲಿಲ್ಲ.

ಇನ್ನೊಂದು ಮಾತು ಮರತು ಬಿಡ ಬಾರದು. ಬಡ ಕ್ರಿಸ್ತಿಯನು ತನ್ನ ಸ್ವಂತ ಶಬ್ದವು ಸಹ ಕೇಳದ ಹಾಗೆ ಕಳವಳ ಪಟ್ಟನು. ಅದು ಹ್ಯಾಗಂದರೆ, ಅವನು ಉರಿಯುವ ಬೆಂಕಿ ಗುಂಡಿಯ ಬಾಯಿಗೆ ಬಂದಾಗ, ಆ ದುಷ್ಟರಲ್ಲಿ ಒಬ್ಬನು ಮೆಲ್ಲಗೆ ಅವನ ಹಿಂದಿನಿಂದ ಬಂದು, ಅನೇಕ ಅಸಹ್ಯವಾದ ದೂಷಣೆಗಳನ್ನು ಅವನ ಕಿವಿಯಲ್ಲಿ ಪಿಸುಗುಟ್ಟಲು ಕ್ರಿಸ್ತಿಯನು ಆ ದೂಷಣೆಯ ಮಾತುಗಳು ತನ್ನ ಮನಸ್ಸಿನಲ್ಲೇ ಹುಟ್ಟಿದವೆಂದು ನಿಶ್ಚಯವಾಗಿ ನೆನಸಿದನು. ಹೀಗಿರುವದರಿಂದ ತಾನು ಮುಂಚೆ ಅಧಿಕವಾಗಿ ಸ್ನೇಹಿಸಿದವನನ್ನು ಈಗ ದೂಷಿಸುತ್ತೇನೆಂಬ ಆಲೋಚನೆ ಮಾಡಿ, ಮುಂಚೆ ಪಟ್ಟ ಕಷ್ಟಗಳಿಗಿಂ

ತ ಅಧಿಕವಾದ ವ್ಯಥೆ ಪಟ್ಟನು. ಆ ದೂಷಣೆಗಳನ್ನು ನಿಲ್ಲಿಸುವ
ದಕ್ಕೆ ತ್ರಾಣವಿದ್ದರೆ ಅವನು ನಿಶ್ಚಯವಾಗಿ ನಿಲ್ಲಿಸುತ್ತಿದ್ದನು. ಆದರೆ
ಅವು ಎಲ್ಲಿಂದ ಬಂದವೆಂದು ತಿಳಿಯದೆ ಇರುವದರಿಂದ ಕಿವಿಗಳಲ್ಲಿ
ಬೆರಳಿಡ ಬೇಕೆಂಬ ಬುದ್ಧಿ ಹುಟ್ಟಲಿಲ್ಲ.

ಈ ಕಠಿಣವಾದ ಅವಸ್ಥೆಯಿಂದ ಕ್ರಿಸ್ತಿಯನು ಸ್ವಲ್ಪ ದೂರ
ಹೋದ ಮೇಲೆ ಮುಂದೆ ನಡೆಯುತ್ತಾ, ನಾನು ಮರಣದ ನೆರಳಿನ
ತಗ್ಗನ್ನು ದಾಟಿ ಹೋದಾಗ್ಯೂ ನೀನು ನನ್ನ ಸಂಗಡ ಇರುವದರಿಂ
ದ ನಾನು ಯಾವ ಕೇಡಿಗಾದರೂ ಭಯ ಪಡೆನು, ಎಂದು ಹೇಳುವ
ಮನುಷ್ಯನ ಶಬ್ದವನ್ನು ಕೇಳಿದನು.

ಆ ಶಬ್ದವನ್ನು ಕೇಳಿ ಸಂತೋಷ ಪಟ್ಟನು. ಯಾಕಂದರೆ,
ತನ್ನ ಹಾಗೆಯೇ ದೇವರಿಗೆ ಭಯ ಪಡುವವರು ಈ ತಗ್ಗಿನಲ್ಲಿ ಇದ್ದಾ
ರೆಂದು ತಿಳುಕೊಂಡನು. ಮತ್ತು ಅಂಧಕಾರವೂ ದುಃಖವೂ ಉಳ್ಳ
ಈ ಅವಸ್ಥೆಯಲ್ಲಿ ದೇವರು ಅವರಿಗೆ ಸಹಾಯ ಮಾಡಿದ್ದು ಉಂಟಾ
ದರೆ, ತನಗೂ ಸಹಾಯ ಮಾಡ್ಯಾನೆಂದು ಅಂದು ಕೊಂಡನು. ಇ
ನ್ನು ಮೇಲೆ ಆ ಮುಂದಿನವನನ್ನು ಕಲೆಯ ಬಹುದಾದರೆ ಅವನು ತನ
ಗೆ ಜತೆಗಾರನಾದಾನು ಎಂದು ಧೈರ್ಯ ಪಟ್ಟನು.

ಈ ಪ್ರಕಾರ ಕ್ರಿಸ್ತಿಯನು ನಡೆಯುತ್ತಾ ಮುಂದೆ ಹೋದ ಮ
ನುಷ್ಯನಿಗೆ ಕೂಗಿದನು. ಅವನು ಸಹ ಕತ್ತಲೆಯಲ್ಲಿ ಯಾರನ್ನು
ನೋಡದೆ ತಾನು ಒಬ್ಬನೇ ಇದ್ದೇನೆಂದು ನೆನಸಿ ಕೊಂಡು ಉತ್ತರ
ಕೊಡುವದಕ್ಕೆ ಮನಸ್ಸು ಮಾಡಲಿಲ್ಲ. ಸ್ವಲ್ಪ ಹೊತ್ತಾದ ಮೇಲೆ
ಅರುಣೋದಯವಾಗಲಾಗಿ ಕ್ರಿಸ್ತಿಯನು ದೇವರು ಮರಣದ ನೆರ
ಳಿಗೆ ಬದಲಾಗಿ ಸೂರ್ಯೋದಯವನ್ನು ಬರ ಮಾಡಿದ್ಧಾನೆಂದು
ಹೇಳಿದನು.

ಬೆಳಗಾದ ಮೇಲೆ ಕ್ರಿಸ್ತಿಯನು ತಿರುಗ ಬೇಕೆಂಬ ಮನಸ್ಸಿನಿಂ
ದಲ್ಲ, ತಾನು ಅಂಧಕಾರದಲ್ಲಿ ದಾಟಿದ ಗಂಡಾಂತರಗಳನ್ನು ಹಗಲಿ
ನಲ್ಲಿ ನೋಡ ಬೇಕೆಂಬ ಆಲೋಚನೆಯಿಂದ ಹಿಂದಕ್ಕೆ ನೋಡಲು
ಇತ್ತಲಿನ ಡೊಂಗರವನ್ನೂ ಅತ್ತಲಿನ ಹುದಿಲನ್ನೂ ಮಧ್ಯದಲ್ಲಿರುವ

ಮಾರ್ಗದ ಇಕ್ಕಟ್ಟನ್ನೂ ಗುಂಡಿಯು ಭೂತ ಪಿಶಾಚ ಘಟಸರ್ಪಗಳನ್ನೂ ಕಂಡನು. ಬೆಳಗಾದ ಮೇಲೆ ಅವು ಹ್ಯಾಗಿದ್ದರೂ ಹತ್ತರ ಬಾರದ ಕಾರಣ ದೂರದಿಂದಲೇ ಕಂಡನು. ದೇವರು ಅಂಧಕಾರದೊಳಗಿಂದ ಅಗಾಧದವುಗಳನ್ನು ಪ್ರತ್ಯಕ್ಷ ಮಾಡುತ್ತಾನೆ. ಮರಣದ ನೆರಳನ್ನು ಬೆಳಕಿಗೆ ತರುತ್ತಾನೆ ಎಂಬ ಮಾತಿನ ಹಾಗಾಯಿತು. (ಯೋಬ. ೧೨—೨೨.)

ಒಂಟಿಗನಾದ ತನಗೆ ಮುಂಚೆ ಭಯ ಪಡಿಸಿದ ಗಂಡಾಂತರಗಳನ್ನು ಹಗಲಿನಲ್ಲಿ ಪ್ರತ್ಯಕ್ಷವಾಗಿ ಕಂಡ ಮೇಲೆ ತನಗೆ ಆದ ರಕ್ಷಣೆಗೋಸ್ಕರ ಅಧಿಕವಾದ ಸಂತೋಷ ಪಟ್ಟನು. ಸೂರ್ಯನು ಸಹ ಮೂಡಿದದರಿಂದ ಅವನಿಗೆ ಇನ್ನೂ ಸಹಾಯವಾಯಿತು. ಯಾಕಂದರೆ ಆ ಮರಣದ ನೆರಳೆಂಬ ತಗ್ಗಿನ ಹಿಂದಿನ ಭಾಗದಲ್ಲಿ ಉಂಟಾದ ಗಂಡಾಂತರಕ್ಕಿಂತ ಹೆಚ್ಚಾದ ಗಂಡಾಂತರವು ಮುಂದಿನ ಭಾಗದಲ್ಲಿ ಉಳ್ಳೀತು. ಅವನು ಆಗ ಇದ್ದ ಸ್ಥಳದಾರಭ್ಯ ತಗ್ಗಿನ ತುದಿಯ ಪರಿಯಂತರ ಮಾರ್ಗವೆಲ್ಲಾ ಉರ್ಲು ಬೋನು ಬಲೆ ಗುಳಿ ಬಿಲ ಇಳಿಜಾರುಗಳು ಈಚೆ ಆಚೆಯಲ್ಲಿ ತುಂಬಿರುವದರಿಂದ ಮುಂಚಿನ ಹಾಗೆ ಕತ್ತಲೆ ಇದ್ದರೆ ಸಾವಿರ ಜೀವವಿದ್ದರೂ ಬದುಕದೆ ಇರುತ್ತಿದ್ದನು. ಆಗಲೇ ಸೂರ್ಯನು ಮೂಡುವದನ್ನು ಕಂಡು ಅವನು ಹೇಳಿದ್ದೇನಂದರೆ, ದೇವರ ದೀಪವು ನನ್ನ ತಲೆಯ ಮೇಲೆ ಪ್ರಕಾಶವನ್ನು ಹೊಯ್ಯುತ್ತದೆ. ಅವನ ಬೆಳಕನ್ನು ನೋಡಿ ನಾನು ಕತ್ತಲೆಯನ್ನು ದಾಟುವೆನು. (ಯೋಬ. ೨೯—೩.)

ಈ ಬೆಳಕಿನ ಸಹಾಯದಿಂದ ಅವನು ತಗ್ಗಿನ ತುದಿಗೆ ಮುಟ್ಟಲಾಗಿ ಅಲ್ಲಿ ಮುಂಚೆ ಇದೇ ದಾರಿಯಲ್ಲಿ ಹೋದ ಪ್ರಯಾಣಸ್ಥರ ರಕ್ತವೂ ಎಲುವುಗಳೂ ಬೂದಿಯೂ ಹೆಣಗಳ ತುಂಡುಗಳೂ ಬಿದ್ದಿರುವದನ್ನು ನನ್ನ ಸ್ವಪ್ನದಲ್ಲಿ ಕಂಡೆನು. ಇದರ ಕಾರಣವೇನೆಂದು ನಾನು ಆಲೋಚಿಸುವಾಗ, ನನ್ನ ಮುಂದೆ ಸ್ವಲ್ಪ ಅತ್ತಲಾಗಿ ಎರಡು ಗವಿಗಳನ್ನು ಕಂಡೆನು. ಈ ಗವಿಗಳಲ್ಲಿ ಪಾಪು ಅಜ್ಞಾನಿಯು ಎಂಬ ಇಬ್ಬರು ರಾಕ್ಷಸರಿದ್ದರು. ಪೂರ್ವದಲ್ಲಿ ಇವರ ಶಕ್ತಿಯೂ

ದೊರೆತನವೂ ಬಲವಾಗಿದ್ದದರಿಂದ ಅಲ್ಲಿ ಬಿದ್ದಿದ್ದವರು ಇವರಿಂದ ಕ್ರೂರವಾಗಿ ಕೊಂದು ಹಾಕಲ್ಪಟ್ಟರು. ಆದರೆ ಈ ಸ್ಥಳವನ್ನು ಕ್ರಿಸ್ತಿಯನು ಬಹಳ ಪ್ರಯಾಸವಿಲ್ಲದೆ ದಾಟಿ ಹೋದದ್ದನ್ನು ನಾನು ನೋಡುವಾಗ ಆಶ್ಚರ್ಯ ಪಟ್ಟೆನು. ಈಚೆಗೆ ಆ ಪಾಪೂ ಅಜ್ಞಾನಿಯೂ ಎಂಬುವಂಥವರು ಬಹು ಮುದುಕರಾಗಿ ಹೋಗಿದ್ದಾರೆಂದು ತಿಳುಕೊಂಡಿದ್ದೇನೆ. ಈಗ ಮುದುಕರಾಗಿರುವದರಿಂದ, ಕೀಲುಗಳು ಹಿಡಿದು, ಬುದ್ಧಿ ಕಡಿಮೆಯಾಗಿ, ಗವಿಯ ಬಾಯಿಯಲ್ಲಿ ಮಾತ್ರ ಕೂತು ಕೊಂಡು, ದಾಟುವ ಪ್ರಯಾಣಸ್ಥರನ್ನು ಬೆದರಿಸಿ, ಉಗುರು ಕಚ್ಚಿ ಕೊಂಡಿರುವದೇ ಹೊರ್ತು ಮತ್ತೇನು ಮಾಡಲಾರರು.

ಹೀಗಿರುವದರಿಂದ ಕ್ರಿಸ್ತಿಯನು ತನ್ನ ಮಾರ್ಗವನ್ನು ಹಿಡಿದು ಹೋಗಲು, ಗವಿಯ ಬಾಯಿಯಲ್ಲಿ ಕೂತು ಕೊಂಡ ಇವರು ಆತನ ಹಿಂದೆ ಬರ ಕೊಡದೆ, ನಿಮ್ಮ ಜಾತಿ ಜನರಲ್ಲಿ ಇನ್ನೂ ಕೆಲವರನ್ನು ಸುಡ ಬೇಕು. ಇಲ್ಲದಿದ್ದರೆ ಬುದ್ಧಿ ಬರುವದಿಲ್ಲವೆಂದು ಹೇಳಿದರು. ಆದರೆ ಕ್ರಿಸ್ತಿಯನು ಸುಮ್ಮನಿದ್ದು ಧೈರ್ಯದಿಂದ ದಾಟಿ ಹೋಗಿ ಯಾವ ಕೇಡನ್ನೂ ಹೊಂದಲಿಲ್ಲ. ಆದದರಿಂದ ಕ್ರಿಸ್ತಿಯನು ಹಾಡಿದ್ದೇನಂದರೆ,

ಕೊಂದುತಿಂಬುವಭೂತಗಳಿಗಾ
ನಿಂದುಸಿಕ್ಕದೆಗಾಢತಮದೊಳ
ಗಂಧನಾಗದೆಕೊಳತಕೆಸರಲಿಮುಳುಗದಾಬಲೆಯ ||
ಬಂಧವಾಗದಗಾಢದೊಂಗರ
ದಿಂದಸಾಯದೆಕ್ರೂರರಾಕ್ಷಸ
ಗಂದದುರಿಯಲಿಬೀಳದುಳಿದೆನುದೇವರೊಲಿದಿರಲು ||

## 11. Christian and Faithful.

## ೧೧. ವಿಶ್ವಾಸ್ಯೈಯ್ಯನು.

ಕ್ರಿಸ್ತಿಯನು ಪಯಣಗತಿಯಿಂದ ಪ್ರಯಾಣಸ್ಥರು ಮುಂದಿನ ಮಾರ್ಗವನ್ನು ನೋಡುವ ಬಗ್ಯೆ ಎತ್ತರದ ಮೇಲೆ ಕಟ್ಟಲ್ಪಟ್ಟ ಆಲದ ಮರದ ಬುಡದಲ್ಲಿ ಜಗತಿಕಟ್ಟೆಯ ಹತ್ತರ ಬಂದು, ಅದರ ಮೇಲೆ ಏರಿ, ಮುಂದೆ ನೋಡಿ, ಮಾರ್ಗದಲ್ಲಿ ಮುಂದೆ ಹೋಗುವ ವಿಶ್ವಾಸ್ಯೈಯ್ಯನನ್ನು ಕಂಡನು. ಕಂಡಾಗಲೇ, ಓಹೋ! ಓಹೋ! ನಿಲ್ಲಿರಿ. ನಾನು ನಿಮ್ಮ ಸಂಗಡ ಬರುತ್ತೇನೆಂದು ಕೂಗಿದನು. ವಿಶ್ವಾಸ್ಯೈಯ್ಯನು ಆ ಶಬ್ದ ಕೇಳಿ ಹಿಂದಿರಿಗಿ ನೋಡಿದನು. ಕ್ರಿಸ್ತಿಯನು ಮತ್ತು, ನಿಲ್ಲಿರೈಯ್ಯ, ನಾನು ಬರುವ ತನಕ ನಿಲ್ಲಿರೈಯ್ಯ, ಎಂದು ಕೂಗಿದನು. ಆದರೆ ವಿಶ್ವಾಸ್ಯೈಯ್ಯನು, ನಿಲ್ಲ ಕೂಡದು ರಕ್ತ ವಿಚಾರಕನು ನನ್ನ ಹಿಂದೆ ಅಟ್ಟಿ ಕೊಂಡು ಬರುವದರಿಂದ ಜೀವ ಉಳಿಯಬೇಕೆಂದು ಓಡುತ್ತೇನೆ, ಅಂದನು.

ಅದಕ್ಕೆ ಕ್ರಿಸ್ತಿಯನು, ಸ್ವಲ್ಪ ಮನಸ್ಸು ನೊಂದು ಬಲವಿದ್ದಷ್ಟು ಓಡಿ ವಿಶ್ವಾಸ್ಯೈಯ್ಯನನ್ನು ಕಳಿತು ಅವನಿಗಿಂತ ಮುಂದೆ ಓಡಿದದರಿಂದ ಕಡೆಯವರು ಮೊದಲಿನವರಾಗುವರೆಂಬ ಮಾತಿನ ಹಾಗಾಯಿತು. ತನ್ನ ಸಹೋದರನನ್ನು ಹಿಂದೆ ಹಾಕಿದ್ದಕ್ಕೆ ಉಬ್ಬಿ ಕೊಂಡು ನಕ್ಕನು. ಆದರೆ ಅವನು ತನ್ನ ಹೆಜ್ಜೆಗಳಿಗೋಸ್ಕರ ಜಾಗ್ರತೆ ಪಡದ ಕಾರಣ ಅಕಸ್ಮಾತ್ತಾಗಿ ಎಡವಿ ಬಿದ್ದು ವಿಶ್ವಾಸ್ಯೈಯ್ಯನು ಸಹಾಯಕ್ಕೆ ಬರುವ ಪರ್ಯಂತರ ಏಳ ಕೂಡದೆ ಇದ್ದನು. ತರುವಾಯ ಅವರು ಬಹು ಪ್ರೀತಿಯಾಗಿ ಕೂಡಾ ನಡೆದು, ಪ್ರಯಾಣದಲ್ಲಿ ತಮಗೆ ಉಂಟಾದ ಎಲ್ಲಾ ಸಂಗತಿಗಳ ವಿಷಯ ಒಳ್ಳೇ ಸಂಭಾಷಣೆ ಮಾಡುವದನ್ನು ಕಂಡೆನು. ಅದ್ಯಾವದಂದರೆ,

ಕ್ರಿ. ಪ್ರಿಯ ಸಹೋದರನಾದ ವಿಶ್ವಾಸ್ಯೈಯ್ಯಾ, ನಾನು ನಿಮ್ಮನ್ನು ಕಲತದರಿಂದಲೂ ಈ ಸುಖವಾದ ಮಾರ್ಗದಲ್ಲಿ ನಾವು

ಜತೆಗಾರರಾಗಿ ನಡೆಯುವ ಹಾಗೆ ದೇವರು ನಮ್ಮ ಆತ್ಮಗಳನ್ನು ಐಕ್ಯ ಪಡಿಸಿದದರಿಂದಲೂ ಅತಿ ಸಂತೋಷ ಪಡುತ್ತೇನೆ.

ವಿಶ್ವಾಸ್ಯೈಯ್ಯ. ಪ್ರಿಯ ಸ್ನೇಹಿತರೇ, ನೀವು ಪಟ್ಣದಿಂದ ಹೊರಟಾಗಲೇ ನಿಮ್ಮ ಸಂಗಡ ಬರ ಬೇಕೆಂದಿದ್ದೆನು. ಆದರೆ ನೀವು ಮೊದಲು ಹೊರಟದರಿಂದ ನಾನು ಇಲ್ಲಿ ತನಕ ಒಬ್ಬನೇ ಬರುವದಾಯಿತು.

ಕ್ರಿ. ನೀವು ನಾಶನ ಪುರದಲ್ಲಿ ಎಷ್ಟು ದಿನ ನಿಂತು ಪ್ರಯಾಣವಾಗಿ ಹೊರಟಿರಿ?

ವಿ. ನಮ್ಮ ಪಟ್ಣವು ಸ್ವಲ್ಪ ಕಾಲದ ಮೇಲೆ ಆಕಾಶದಿಂದ ಬೀಳುವ ಬೆಂಕಿಯಿಂದ ಸುಡಲ್ಪಡುವದೆಂಬ ವರ್ತಮಾನವು ನೀವು ಹೊರಟಾಗಲೇ ಹೆಚ್ಚಿದದರಿಂದ ನಾನು ಇನ್ನು ಹೆಚ್ಚು ತಡೆ ಮಾಡಬಾರದೆಂದು ಹೊರಟೆನು.

ಕ್ರಿ. ಏನು! ನೆರೆಯುವರು ಈ ಮಾತನ್ನು ಹೇಳಿದರೋ?

ವಿ. ಹೌದು. ಸ್ವಲ್ಪ ಕಾಲ ಪರ್ಯಂತರ ಊರೊಳಗೆಲ್ಲಾ ಇದೇ ಸಮಾಚಾರ ಹಬ್ಬಿತು.

ಕ್ರಿ. ಏನು! ಹೀಗಿದ್ದರೆ ಆ ಗಂಡಾಂತರದಿಂದ ತಪ್ಪಿ ಹೋಗಲಿಕ್ಕೆ ನೀವು ಹೊರ್ತು ಮತ್ತ್ಯಾರೂ ಹೊರಡಲಿಲ್ಲವೋ?

ವಿ. ಈ ಸಮಾಚಾರ ಬಹಳವಿದ್ದಾಗ್ಯೂ ಅವರು ಪೂರ್ಣವಾಗಿ ನಂಬಲಿಲ್ಲವೆಂದು ನೆನಸುತ್ತೇನೆ. ಯಾಕಂದರೆ, ಇದೇ ಮಾತು ನಡೆಯುವ ಸಮಯದಲ್ಲಿ ಕೆಲವರು ನಿಮಗೆ ಹುಚ್ಚರೆಂದೂ ನಿಮ್ಮ ಪ್ರಯಾಣವು ಹುಚ್ಚು ಕೆಲಸವೆಂದೂ ಹಾಸ್ಯ ಮಾಡುವದನ್ನು ಕೇಳಿದೆನು. ಹ್ಯಾಗಾದರೂ ಆಕಾಶದಿಂದ ಬೀಳುವ ಬೆಂಕಿ ಗಂಧಕಗಳಿಂದ ನಮ್ಮ ಪಟ್ಣವು ನಾಶವಾಗುವದೆಂದು ನಾನು ಆಗಲೂ ನಂಬಿದೆನು ಈಗಲೂ ನಂಬುತ್ತೇನೆ. ಅದಕ್ಕೋಸ್ಕರವೇ ನಾನು ಓಡಿ ಬಂದಿದ್ದೇನೆ.

ಕ್ರಿ. ನೆರೆಯುವನಾದ ಚಂಚಲಿನ ಸಮಾಚಾರವನ್ನು ನೀವು ಕೇಳಲಿಲ್ಲವೋ?

ವಿ. ಹೌದು. ಅಪನಂಬಿಕೆ ಎಂಬ ಹುದಿಲಿನ ಪರ್ಯಂತರ ನಿಮ್ಮ ಸಂಗಡ ಬಂದನೆಂಬ ಸುದ್ದಿ ಉಂಟಾಯಿತು. ಅದರೊಳಗೆ

ಅವನು ಬಿದ್ದನೆಂದು ಕೆಲವರು ಹೇಳಿದರು. ಅದರಲ್ಲಿ ಬಿದ್ದ ವರ್ತಮಾನವು ಪ್ರಸಿದ್ಧಿಯಾಗುವದು ಅವನಿಗೆ ಹಿತಕರವಾಗಿರಲಿಲ್ಲ. ಆದರೆ ನಾನು ಅವನನ್ನು ಚನ್ನಾಗಿ ನೋಡಿ ಆ ಹುದಿಲಿನ ಕೆಸರು ಬಹಳವಾಗಿ ಹತ್ತಿದ್ದನ್ನು ಕಂಡೆನು.

ಕ್ರಿ. ನೆರೆಯುವರು ಅವನಿಗೆ ಏನು ಹೇಳಿದರು?

ವಿ. ಅವನು ತಿರುಗಿ ಬಂದಾರಭ್ಯ ಎಲ್ಲಾ ವಿಧದ ಜನರು ಬಹಳವಾಗಿ ಅವನಿಗೆ ಗೇಲಿ ಇಕ್ಕುತ್ತಾರೆ. ಕೆಲವರು ಅವನಿಗೆ ಹಾಸ್ಯ ಮಾಡಿ ತಿರಸ್ಕರಿಸುತ್ತಾರೆ. ಅವನ ಅಂಗಡಿಗೆ ಹೆಚ್ಚು ಜನರು ವ್ಯಾಪಾರಕ್ಕೆ ಬರುವದಿಲ್ಲ. ಅವನು ಪಟ್ಣವನ್ನು ಬಿಟ್ಟು ಹೋಗದವನಿಗಿಂತ ಏಳಪಷ್ಟು ಕೆಟ್ಟನು.

ಕ್ರಿ. ಅವರು ತಿರಸ್ಕರಿಸುವ ಮಾರ್ಗವನ್ನು ಅವನು ಬಿಟ್ಟದರಿಂದ ಅವನನ್ನು ಅಷ್ಟು ವಿರೋಧಿಸುವದು ಯಾಕೆ?

ವಿ. ಓಹೋ, ಅವನು ಹೊಳೆಯಲ್ಲಿ ಬೀಳಲಿ, ಅವನು ವೇಷಕ್ಕೆ ತಕ್ಕ ಭಾಷೆ ಮಾತಾಡುತ್ತಾನೆ, ಅವನು ಮತಭ್ರಷ್ಟನಾದನು, ಎಂದು ಹೇಳುತ್ತಾರೆ. ಅವನು ನಮ್ಮ ಮಾರ್ಗವನ್ನು ಬಿಟ್ಟದರಿಂದ ದೇವರು ಅವನನ್ನು ಗಾದೆಯಾಗಿಯೂ ಹಾಸ್ಯದ ಗುರಿಯಾಗಿಯೂ ಇಟ್ಟಿದ್ದಾನೆಂದು ನನಗೆ ತೋರುತ್ತದೆ.

ಕ್ರಿ. ನೀವು ಹೊರಡುವದಕ್ಕಿಂತ ಮುಂಚೆ ಅವನ ಸಂಗಡ ಸಂಭಾಷಣೆ ಮಾಡಲಿಲ್ಲವೋ?

ವಿ. ಅವನು ಒಂದು ಸಾರಿ ಬೀದಿಯಲ್ಲಿ ಶಿಕ್ಕಿದನು. ಮಾಡಿದ ಕೆಲಸಕ್ಕೆ ಅವನು ನಾಚುವ ಪ್ರಕಾರ ವಾರೆಯಾಗಿ ಹೋದದರಿಂದ ನಾನು ಮಾತಾಡಲಿಲ್ಲ.

ಕ್ರಿ. ಆಯಿತು ಆಯಿತು. ನಾನು ಮೊದಲು ಹೊರಡುವಾಗ ಅವನಲ್ಲಿ ಏನಾದರೂ ಒಳ್ಳೆ ಗುಣ ಉಂಟೆಂದು ತಿಳಿದು ಕೊಂಡಿದ್ದೆನು. ಆದರೆ ಈಗ ಪಟ್ಣದ ನಾಶನದಲ್ಲಿ ಅವನೂ ನಾಶವಾಗುವನೆಂದು ಭಯ ಪಡುತ್ತೇನೆ. ನಾಯಿಯು ಕಾರಿದಕ್ಕೂ ತೊಳದ ಹಂದಿಯು ಕೆಸರಿನ ಹೊರಳಾಟಕ್ಕೂ ತಿರುಗುವವೆಂಬ ಗಾದೆಯು ಹಾಗಾಯಿತು.

ವಿ. ನಾನು ಸಹ ಈ ಭಯದಲ್ಲಿದ್ದೇನೆ. ಆದರೆ ಆಗುವ ಕಾರ್ಯಗಳನ್ನು ಹ್ಯಾಗೆ ತಡೆಯ ಬಹುದು.

ಕ್ರಿ. ಸಾಕು. ನೆರೆಯುವನಾದ ವಿಶ್ವಾಸೈಯ್ಯಾ, ಅವನ ವರ್ತಮಾನ ಬಿಡಿರಿ. ನಮ್ಮ ಕಾರ್ಯಗಳ ಮಾತು ಆಡುವ. ನೀವು ಬಂದ ಮಾರ್ಗದಲ್ಲಿ ಸಂಭವಿಸಿದ ಸಂಗತಿಗಳನ್ನು ಹೇಳಿರಿ. ನೀವು ಮಾರ್ಗದಲ್ಲಿ ಏನೂ ಕಾಣಲಿಲ್ಲವೆಂದು ಹೇಳಿದರೆ ಅದು ನನಗೆ ಬಹಳ ಆಶ್ಚರ್ಯ.

ವಿ. ನೀವು ಬಿದ್ದ ಹುದಿಲಿನಲ್ಲಿ ನಾನು ಬೀಳಲಿಲ್ಲ. ಆ ಕಷ್ಟ ಪಡದೆ ಬಾಗಲಿನ ಹತ್ತರ ಬಂದೆನು. ಮಾರ್ಗದಲ್ಲಿ ನನಗೆ ಕಾಮಿ ಎಂಬ ಸೂಳೆ ಮಾತ್ರ ಶಿಕ್ಕಿ ನನಗೆ ಮೋಸ ಮಾಡ ಬೇಕೆಂದು ನೋಡಿದಳು.

ಕ್ರಿ. ಅವಳ ಬಲೆಗೆ ತಪ್ಪಿದ್ದು ಒಳ್ಳೇದಾಯಿತು. ಅವಳು ಯೋಸೆಫನಿಗೆ ಬಹಳ ಉಪದ್ರ ಕೊಡುವಾಗ ಅವನು ನಿಮ್ಮ ಹಾಗೆಯೇ ತಪ್ಪಿಸಿ ಕೊಂಡಾಗ್ಯೂ ಅವನ ಪ್ರಾಣಕ್ಕೆ ಬಂತು. ಅವಳು ನಿಮಗೆ ಏನು ಮಾಡಿದಳು?

ವಿ. ಅವಳ ಇಚ್ಛಕವನ್ನು ತಿಳಿದವರೇ ಹೊರ್ತು ಅದನ್ನು ಮತ್ತ್ಯಾರೂ ಯೋಚಿಸಲಾರರು. ಮಾರ್ಗವನ್ನು ಬಿಟ್ಟು ತನ್ನ ಸಂಗಡ ಬಂದರೆ ಸಕಲ ವಿಧವಾದ ಸಾಖ್ಯವನ್ನು ಕೊಡುತ್ತೇನೆಂದು ಹೇಳಿ ನನ್ನನ್ನು ಬಹಳ ತೊಂದರೆ ಪಡಿಸಿದಳು.

ಕ್ರಿ. ಒಳ್ಳೇ ಮನೋ ಸಾಕ್ಷಿ ಎಂಬ ಸಾಖ್ಯವನ್ನು ಕೊಡುತ್ತೇನೆಂದು ಅವಳು ಹೇಳಲಿಲ್ಲವೆಂಬ ಹಾಗೆ ಕಾಣುತ್ತದೆ.

ವಿ. ಅವಳು ಹೇಳಿದ ಸಾಖ್ಯವು ಮಾಂಸಭಾವವಾದದ್ದೆಂದು ನಿಮಗೆ ತಿಳಿಯಿತಲ್ಲ?

ಕ್ರಿ. ಹ್ಯಾಗಾದರೂ ನೀವು ಅವಳ ಕೈಯಿಂದ ತಪ್ಪಿದ ಕಾರಣ ದೇವರಿಗೆ ಸ್ತೋತ್ರವಿರಲಿ. ಕರ್ತನು ರೋಷಿದವರು ಅವಳ ಕುಣಿಯಲ್ಲಿ ಬೀಳುವರು.

ವಿ. ಅವಳ ಮೋಸದಿಂದ ಪೂರ್ಣವಾಗಿ ನಾನು ತಪ್ಪಿದೆನೋ ಏನೋ ಅರಿಯೆನು.

ಕ್ರಿ. ಏನು! ಅವಳ ಆಶೆಗೆ ನೀವು ಸಮ್ಮತಿಸಲಿಲ್ಲವೆಂದು ನಿಶ್ಚಯಿಸುತ್ತೇನೆ.

ವಿ. ಹೌದು. ಅವಳ ಸಂಗಡ ನಾನು ಪಾಪ ಮಾಡಲಿಲ್ಲವೆಂಬುವದು ಸರಿ. ಅವಳ ಹೆಜ್ಜೆಗಳು ನರಕಕ್ಕೆ ಹೊಂದಿ ಕೊಂಡವೆ ಎಂಬ ಹಳೇ ಬರಹವು ನೆನಪಾಯಿತು. ಆದದರಿಂದ ಅವಳ ಮುಖವನ್ನು ನೋಡಿ ನನಗೆ ಮಾಟವಾಗದ ಹಾಗೆ ನಾನು ಕಣ್ಣು ಮುಚ್ಚಿಕೊಂಡು ಮುಂದಕ್ಕೆ ಹೋಗುವಾಗ ಅವಳು ನನ್ನನ್ನು ಬೈದು ಹೋದಳು.

ಕ್ರಿ. ನೀವು ಬಂದ ಮಾರ್ಗದಲ್ಲಿ ಇನ್ನೇನು ಉಪದ್ರವಾಯಿತು?

ವಿ. ಕಷ್ಟವೆಂಬ ಗುಡ್ಡದ ಅಡಿಗೆ ನಾನು ಬಂದಾಗ, ಬಹಳ ಮುದುಕನಾದ ಒಬ್ಬ ಮನುಷ್ಯನು ಎದುರಿಗೆ ಬಂದು, ನೀನು ಯಾರು? ಎಲ್ಲಿಗೆ ಹೋಗುತ್ತಿ? ಎಂದು ಕೇಳುವಾಗ, ನಾನು ಪರಲೋಕದ ಪಟ್ಟಣಕ್ಕೆ ಹೋಗುವ ಪ್ರಯಾಣಸ್ಥನೆಂದು ಹೇಳಿದೆನು. ಆ ಮುದಕನು, ನೀನು ಸತ್ಯವಂತನ ಹಾಗೆ ಕಾಣುತ್ತೀ, ನನ್ನಲ್ಲಿ ಸಂಬಳಕ್ಕೆ ನಿಲ್ಲುವಿಯೋ? ಅನ್ನಲು ನಿಮ್ಮ ಹೆಸರೇನು? ವಾಸಿಸುವ ಊರು ಯಾವದು? ಎಂದು ನಾನು ಕೇಳಿದ್ದಕ್ಕೆ, ಅವನು, ತನ್ನ ಹೆಸರು ಮೊದಲನೇ ಆದಮನೆಂಬುವದು, ವಂಚಕಪುರವೆಂಬ ಊರಿನಲ್ಲಿ ವಾಸಿಸುತ್ತೇನೆ, ಅಂದನು. ಕೆಲಸ ಯಾವದು? ನೀವು ಕೊಡುವ ಸಂಬಳವೇನು? ಎಂದು ಕೇಳಿದ್ದಕ್ಕೆ, ಅವನು, ಚಾಕರಿ ಅಂದರೆ, ಸರ್ವ ಭೋಗವು, ಸಂಬಳವಂದರೆ, ನನ್ನ ಆಸ್ತಿಯ ಬಾಧ್ಯತೆಯು, ಎಂದು ಹೇಳಿದನು. ಮನೆ ಎಂಥಾದು? ಬೇರೆ ಚಾಕರಿಯವರು ಯಾರು? ಎಂದು ಕೇಳಿದ್ದಕ್ಕೆ, ಸರ್ವ ಲೋಕದಲ್ಲಿರುವ ಪರಮ ಸುಖಗಳು ತನ್ನ ಮನೆಯಲ್ಲಿ ಶಿಕ್ಕುತ್ತವೆಂದೂ, ತನ್ನ ಸೇವಕರು ತಾನು ಹೆತ್ತ ಮಕ್ಕಳಾಗಿದ್ದಾರೆಂದೂ, ಹೇಳಿದನು. ತರುವಾಯ ನಾನು, ನಿಮಗೆ ಮಕ್ಕಳೆಷ್ಟು? ಎಂದು

ಕೇಳಲು, ಅವನು, ಮಾಂಸಾಶೆ, ನೇತ್ರೇಚ್ಛೆ, ಜೀವದಂಭೆ, ಎಂಬ ಮೂರು ಜನ ಹೆಣ್ಣು ಮಕ್ಕಳೇ ಹೊರ್ತು ತನಗೆ ಬೇರೆ ಮಕ್ಕಳಿಲ್ಲ; ನಿನಗೆ ಬೇಕಾದರೆ ಅವರನ್ನು ಮದುವೆ ಮಾಡಿ ಕೊಡುತ್ತೇನೆಂದು ಹೇಳಿದನು. ನಿಮ್ಮಲ್ಲಿ ಎಷ್ಟು ವರುಷ ಚಾಕರಿ ಮಾಡಿ ಕೊಂಡಿರಬೇಕೆಂದು ಕೇಳಿದಾಗ, ತಾನು ಜೀವದಿಂದಿರುವ ಪರ್ಯಂತರ ಇರಬೇಕಂದನು.

ಕ್ರಿ. ಒಳ್ಳೇದು, ಆ ಮುದಕನೂ ನೀವೂ ಕಡೆಗೆ ಯಾವದಕ್ಕೆ ಸಮ್ಮತಿಸಿದಿರಿ?

ವಿ. ಮೊದಲು ಅವನ ಮಾತು ಬಹಳ ಒಳ್ಳೇದೆಂದು ನೆನಸಿದದರಿಂದ ಅವನ ಸಂಗಡ ಹೋಗಲಿಕ್ಕೆ ಸ್ವಲ್ಪ ಮನಸ್ಸಿತ್ತು. ಆದರೆ ಅವನ ಸಂಗಡ ಮಾತಾಡುವ ಸಮಯದಲ್ಲಿ ಅವನ ಹಣೆಯನ್ನು ನೋಡುವಾಗ, ಹಳೇ ಮನುಷ್ಯನನ್ನೂ ಅವನ ಕ್ರಿಯೆಗಳನ್ನೂ ವಿಸರ್ಜಿಸು, ಎಂಬ ಬರಹವನ್ನು ಕಂಡೆನು.

ಕ್ರಿ. ಮತ್ತೇನು ಆಯಿತು?

ವಿ. ಅದನ್ನು ನೋಡಿದಾಗಲೇ ಅವನು ಏನು ಹೇಳಿದ್ದಾಗ್ಯೂ ಏನು ಇಚ್ಛಕತನ ಮಾಡಿದ್ದಾಗ್ಯೂ ತನ್ನ ಮನೆಯಲ್ಲಿ ನನ್ನನ್ನು ಶೇರಿಸಿ ಕೊಂಡ ಮೇಲೆ ನನ್ನನ್ನು ದಾಸನಾಗಿ ಮಾರುವನೆಂಬದು ಫಕ್ಕನೆ ನೆನಪಾದದರಿಂದ ನಿನ್ನ ಮನೆ ಬಾಗಿಲ ಹತ್ತರ ನಾನು ಬರಲಾರೆನು. ಮಾತಾಡುವದು ಸಾಕೆಂದು ಹೇಳಿದೆನು. ಕಡೆಗೆ ಅವನು ನನ್ನನ್ನು ಬೈದು ಮಾರ್ಗದಲ್ಲಿ ನಿನ್ನ ಆತ್ಮಕ್ಕೆ ವ್ಯಥೆ ಪಡಿಸುವ ಒಬ್ಬನನ್ನು ನಿನ್ನ ಹಿಂದೆ ಕಳುಹಿಸುತ್ತೇನಂದನು. ನಾನು ಅವನನ್ನು ಬಿಟ್ಟು ಹೋಗುವದಕ್ಕೆ ತಿರುಗುವಾಗಲೇ ಅವನು ನನ್ನ ಮಾಂಸವನ್ನು ಹಿಡಿದು ಘಟ್ಟಿಯಾಗಿ ಚಿವುಟಿದದರಿಂದ ನನ್ನ ಒಂದು ಭಾಗವನ್ನು ಎಳದು ಕೊಂಡು ಹೋದ ಹಾಗಾಯಿತು. ಅದಕ್ಕೋಸ್ಕರ ನಾನು, ಅಯ್ಯೋ! ಸಂಕಟವುಳ್ಳ ಮನುಷ್ಯನು, ಎಂದು ಕೂಗಿ, ಪರ್ವತವನ್ನೇರುವ ಮಾರ್ಗದಲ್ಲಿ ಹೊರಟೆನು. ಅರ್ಧಕ್ಕಿಂತ ಸ್ವಲ್ಪ ಹೆಚ್ಚು ಏರಿದ ಮೇಲೆ ಹಿಂದಕ್ಕೆ ನೋಡಲಾಗಿ ಘಾಳಿಯಂತೆ ತೀವ್ರವಾಗಿ ನಡೆ

ಯುವವನೊಬ್ಬನು ಹಿಂದೆ ಬರುವದನ್ನು ಕಂಡೆನು. ಅವನು ಆ ತೋಪು ಇದ್ದಲ್ಲಿಯೇ ನನ್ನನ್ನು ಕಲತನು.

ಕ್ರಿ. ಓ ನಾನು ವಿಶ್ರಮಿಸಲಿಕ್ಕೆ ಕೂತ ಸ್ಥಳವು ಅದೇ, ಅಲ್ಲಿ ನಾನು ನಿದ್ರಾಭಾರನಾದದರಿಂದ ನನ್ನ ಉಡಿಲೊಳಗಿಂಗ ಈ ಸುರಳಿಯು ಬಿದ್ದು ಹೋಯಿತು.

ವಿ. ಪ್ರಿಯ ಸಹೋದರನೇ, ನನ್ನ ಮಾತನ್ನು ಪೂರ್ತಿ ಕೇಳಿರಿ. ಆ ಮನುಷ್ಯನು ನನ್ನನ್ನು ಕಲತಾಗ ಮಾತಾಡದೆ ಗುದ್ದಿ ನನ್ನನ್ನು ಕೆಡವಿ ಸತ್ತ ಹಾಗೆ ಬೀಳ ಮಾಡಿದನು. ಸ್ವಲ್ಪ ಜೀವ ಬಂದ ಮೇಲೆ ಈ ಪ್ರಕಾರ ಮಾಡುವದೇನೆಂದು ನಾನು ಕೇಳಿದಾಗ, ಅವನು, ಮೊದಲನೇ ಆದಮನಿಗೆ ಸೇವೆ ಮಾಡುವದಕ್ಕೆ ನೀನು ಅಂತರಂಗವಾಗಿ ನೆನಸಿದ ಕಾರಣ ನಿನ್ನನ್ನು ಹೊಡಿಯುತ್ತೇನೆಂದು ಹೇಳಿ, ನನ್ನ ಎದೆಗೆ ಮರಣಕರವಾದ ಪೆಟ್ಟನ್ನು ಹೊಡದು ಅಂಗತ ಬೀಳುವ ಹಾಗೆ ಮಾಡಿದನು. ತಿರಿಗಿ ನಾನು ಸತ್ತವನ ಪ್ರಕಾರ ಅವನ ಕಾಲುಗಳ ಹತ್ತರ ಬಿದ್ದು ಮೂರ್ಛೆ ತಿಳಿದಾಗ ಕ್ಷಮಿಸ ಬೇಕೆಂದು ಕೂಗಿದೆನು. ಅವನು ಕ್ಷಮಿಸಲಾರೆನೆಂದು ಹೇಳಿ ಇನ್ನೊಂದು ಹೊಡದು ನನ್ನನ್ನು ಕೆಡವಿದನು. ಕಡೆಗೆ ಮತ್ತೊಬ್ಬನು ಬಂದು ಅವನನ್ನು ತಡೆಯದೆ ಇದ್ದರೆ ನನ್ನನ್ನು ಪ್ರಾಣ ಹಾನಿ ಮಾಡುತ್ತಿದ್ದನು ಸಂದೇಹವಿಲ್ಲ.

ಕ್ರಿ. ಆ ತಡದವನು ಯಾರು?

ವಿ. ಮೊದಲು ಗುರುತು ತಿಳಿಯಲಿಲ್ಲ. ಆತನು ಆಚೆಗೆ ಹೋಗುವಾಗ ಆತನ ಕೈಗಳಲ್ಲಿಯೂ ಆತನ ಪಕ್ಕದಲ್ಲಿಯೂ ಇರುವ ಘಾಯಗಳನ್ನು ನೋಡಿ ನಮ್ಮ ಕರ್ತನೆಂದು ತಿಳಿದೆನು. ತರುವಾಯ ಪರ್ವತವನ್ನೇರಿದೆನು.

ಕ್ರಿ. ನಿಮ್ಮನ್ನು ಕಲತ ಆ ಮನುಷ್ಯನು ಮೋಶೆಯು. ಅವನು ಯಾರಿಗೂ ಕನಿಕರ ತೋರಿಸುವದಿಲ್ಲ. ತನ್ನ ನ್ಯಾಯವನ್ನು ಅತಿಕ್ರಮಿಸಿದವರಿಗೆ ಕ್ಷಮಿಸಲಾರನು.

ವಿ. ತಿಳಿಯಿತು, ತಿಳಿಯಿತು. ಅವನನ್ನು ಈಗಲೇ ಕಂಡದ್ದಲ್ಲ, ಮೊದಲೂ ನೋಡಿದ್ದೇನೆ. ನಾನು ಕ್ಷೇಮದಿಂದ ನನ್ನ ಮನೆ

ಯಲ್ಲಿರುವಾಗ ನನ್ನ ಹತ್ತಿರ ಬಂದು, ನೀನು ಇಲ್ಲಿ ಉಳಿದರೆ ಈ ಮನೆಯ ತೊಲೆಗಳೇ ನಿನ್ನನ್ನು ಸುಡುವದಕ್ಕೆ ಕಟ್ಟಿಗೆಯಾಗುವವೆಂದು ನನ್ನನ್ನು ಇವನೇ ಹೆದರಿಸಿದನು.

ಕ್ರಿ. ಪರ್ವತದ ತುದಿಯಲ್ಲಿ ಮೋಶೆಯು ನಿಮಗೆ ಎದುರಿಸಿದ ಸ್ಥಳದ ಕಡೆಯಲ್ಲಿರುವ ಮನೆಯನ್ನು ನೀವು ನೋಡಲಿಲ್ಲವೋ?

ವಿ. ನೋಡಿದೆನು. ಅದಕ್ಕೆ ಶೇರುವ ಮುಂಚೆ ಸಿಂಹಗಳನ್ನು ಸಹ ನೋಡಿದೆನು. ಮಧ್ಯಾಹ್ನವಾಗಿದ್ದದರಿಂದ ಆ ಸಿಂಹಗಳು ನಿದ್ರೆ ಮಾಡಿದ ಹಾಗೆ ತೋಚಿತು. ಮತ್ತು ಸ್ವಲ್ಪ ಹೊತ್ತು ಇದ್ದದರಿಂದ ನಾನು ದ್ವಾರಪಾಲಕನ ಸ್ಥಳವನ್ನು ದಾಟಿ ಪರ್ವತವನ್ನು ಇಳಿದೆನು.

ಕ್ರಿ. ನೀವು ದಾಟಿ ಹೋಗುವದನ್ನು ನೋಡಿದೆನೆಂದು ಅವನು ನನಗೆ ಹೇಳಿದನು. ಹ್ಯಾಗಾದರೂ ಅವನ ಮನೆಯನ್ನು ನೋಡಿ ಬಂದಿದ್ದರೆ ಒಳ್ಳೇದಾಗಿತ್ತು. ಅಲ್ಲಿ ತೋರಿಸುವ ವಿಚಿತ್ರಗಳನ್ನು ನೋಡಿದರೆ ಸಾಯುವ ತನಕ ಮರೆಯದೆ ಇರುತ್ತಿದ್ದಿರಿ. ಆದರೆ ದೀನನಾಡಿನಲ್ಲಿ ನಿಮಗೆ ಯಾರೂ ಶಿಕ್ಕಲಿಲ್ಲವೋ?

ವಿ. ಶಿಕ್ಕಿದನು. ಅಸಂತುಷ್ಟನೆಂಬ ಒಬ್ಬನನ್ನು ಕಂಡೆನು. ತನ್ನ ಸಂಗಡ ಹಿಂದಕ್ಕೆ ತಿರುಗ ಬೇಕೆಂದು ನನ್ನನ್ನು ಒಡಂಬಡಿಸಿ ಬಹಳ ಪ್ರಯತ್ನ ಮಾಡಿದನು. ಈ ಶೀಮೆಯಲ್ಲಿ ಏನೂ ಘನವಿಲ್ಲವೆಂದು ಹೇಳಿದನು. ಇದಲ್ಲದೆ ಅದರಲ್ಲಿ ಹೋದರೆ, ಗರ್ವೈಯ್ಯ, ಅಹಂಕಾರೈಯ್ಯ, ಹೆಮ್ಮಯ್ಯ, ಲೋಕಖ್ಯಾತೈಯ್ಯ, ಎಂಬ ಈ ಮೊದಲಾದ ಸ್ನೇಹಿತರೆಲ್ಲರು ಶಿಟ್ಟು ಮಾಡುವರು. ಮತ್ತು ಈ ಶೀಮೆಯನ್ನು ದಾಟುವ ಹುಚ್ಚುತನವನ್ನು ನಾನು ಮಾಡಿದರೆ ಅವರು ನನ್ನನ್ನು ಹೊರಗೆ ಹಾಕುವರೆಂದು ಬಹಳವಾಗಿ ಹೇಳಿದನು.

ಕ್ರಿ. ಅವನಿಗೆ ಏನು ಉತ್ತರ ಹೇಳಿದಿರಿ?

ವಿ. ಅವನು ಹೇಳಿದವರೆಲ್ಲರು ನನ್ನ ಹುಟ್ಟು ನೆಂಟರಾಗಿರುವದರಿಂದ ಅವರಿಗೂ ನನಗೂ ಬಂಧುತನವಿರುತ್ತದೆಂಬುವದಕ್ಕೆ ಸಂದೇಹವಿಲ್ಲದೆ ಇದ್ದಾಗ್ಯೂ, ನಾನು ಪ್ರಯಾಣಸ್ಥನಾದ ಮೇಲೆ ಅವರು ನನ್ನನ್ನು ಉದಾಸೀನ ಮಾಡಿದದರಿಂದಲೂ ನಾನು ಸಹ ಅವರನ್ನು

ವಿಸರ್ಜಿಸಿದದರಿಂದಲೂ ಅವರು ಇನ್ನು ನನಗೆ ಬಂಧುಗಳ ಹಾಗೆ ಇರುವದಿಲ್ಲ, ಅಂದೆನು. ಮತ್ತು ಆ ದೀನನಾಡಿನ ವಿಷಯವಾಗಿ ಅವನು ಹೇಳಿದ್ದು ಸಮವಲ್ಲ. ಯಾತಕ್ಕಂದರೆ ಮಾನ ಬರುವದಕ್ಕಿಂತ ಮೊದಲು ದೈನ್ಯವಿರ ಬೇಕು. ಹಮ್ಮು ಹುಟ್ಟಿದ ಮೇಲೆ ಬೀಳುವದಾದೀತು. ಹೀಗಿರುವದರಿಂದ ಅವನು ಆರಿಸ ಶಕ್ಯದ್ದೆಂದು ನೆನಸುವ ಘನಕ್ಕಿಂತ ಈ ದೀನನಾಡು ದಾಟಿ ಉತ್ತಮ ಬುದ್ಧಿಶಾಲಿಗಳು ಆಲೋಚಿಸುವ ಘನವನ್ನು ಪಡ ಕೊಳ್ಳುವದಕ್ಕೆ ನನಗೆ ಹುಚ್ಚು ಮನಸ್ಸುಂಟೆಂದು ಹೇಳಿದೆನು.

ಕ್ರಿ. ಆ ತಗ್ಗಿನಲ್ಲಿ ಮತ್ತೇನೂ ನೋಡಲಿಲ್ಲವೋ?

ವಿ. ಲಜ್ಜೈಯ್ಯ ಎಂಬುವನು ಶಿಕ್ಕಿದನು ಹೌದು. ನನ್ನ ಪ್ರಯಾಣದಲ್ಲಿ ಕಂಡ ಎಲ್ಲರಲ್ಲಿ ಇವನಿಗೆ ಮಾತ್ರ ಗುಣಕ್ಕೆ ಸರಿಯಾಗದ ಹೆಸರು ಇರುತ್ತದೆಂದು ಕಾಣುತ್ತದೆ. ಆ ಮತ್ತೊಬ್ಬನನ್ನು ಸ್ವಲ್ಪ ತರ್ಕ ಮೊದಲಾದವುಗಳ ಮಾಡಿ ಜಯಿಸಿದೆನು. ಈ ಮೊಂಡನಾದ ಲಜ್ಜೈಯ್ಯ ಎಂಬವನಿಗೆ ಮಾತ್ರ ಹೀಗೆ ಮಾಡಲಿಕ್ಕೆ ಕೂಡದೆ ಹೋಯಿತು.

ಕ್ರಿ. ಅದ್ಯಾಕೆ? ಅವನು ನಿಮಗೆ ಏನು ಹೇಳಿದನು?

ವಿ. ಏನು? ಅವನು ದೈವ ಭಕ್ತಿಯನ್ನು ಕುರಿತು ಆಕ್ಷೇಪಣೆ ಮಾಡಿದನು. ಭಕ್ತಿಯ ಮೇಲೆ ಮನಸ್ಸು ಇಡುವದು ನೀಚ ಕೆಲಸವೂ, ಮನುಷ್ಯರಿಗೆ ಅಯೋಗ್ಯವಾದ ಕಾರ್ಯವೂ, ಎಂದೂ, ನೀತಿ ಮಾರ್ಗಕ್ಕೋಸ್ಕರ ಜಾಗ್ರತೆ ಪಡುವದು ಪೌರುಷಕ್ಕೆ ವಿರೋಧವೆಂದೂ, ಈ ಪ್ರಪಂಚಕ್ಕೆ ಸರಿಯಾಗಿ ನಡೆಯದೆ ಮಾತುಗಳಲ್ಲಿಯೂ ಕ್ರಿಯೆಗಳಲ್ಲಿಯೂ ಎಚ್ಚರವಾಗಿರುವವನು ಹಾಸ್ಯಕ್ಕೆ ಗುರಿಯಾಗುವನೆಂದೂ, ಮತ್ತು ಪರಾಕ್ರಮವೂ ಐಶ್ವರ್ಯವೂ ಜ್ಞಾನವೂ ಉಳ್ಳವರಲ್ಲಿ ಬಹು ಸ್ವಲ್ಪ ಜನರು ನನ್ನ ಮಾರ್ಗದಲ್ಲಿ ಶೇರಿದರೆಂದೂ, ಶೇರಿದವರು ಸಹ ಹುಚ್ಚು ಹಿಡಿದ ಮೇಲೆ ಯಾರಿಗೂ ತಿಳಿಯದ ಲಾಭಕ್ಕೋಸ್ಕರ ಇದ್ದವುಗಳನ್ನೆಲ್ಲಾ ಕಳದು ಕೊಳ್ಳಲಿಕ್ಕೆ ಮನಸ್ಸು ಮಾಡಿ ಶೇರಿದರೆಂದೂ, ಹೇಳಿದನು. ಮತ್ತು ಆಯಾ ಕಾಲದ ಮುಖ್ಯವಾದ ಪ್ರಯಾಣಸ್ಥರು ನೀಚ ಸ್ಥಿತಿಯುಳ್ಳವರೂ

ಮೂಢರೂ ವಿದ್ಯೆ ತಿಳಿಯದವರೂ ಆಗಿದ್ದರು, ಅಂದನು. ಮತ್ತು ನನ್ನ ಕಡೆ ಜನರು ಯಾವಾಗಲು ಅಂಗಲಾಚುವವರು, ಚಿಂತೆ ಪಡುವವರು, ಪ್ರಸಂಗವನ್ನು ಕೇಳಿ ನಿಟ್ಟುಸುರು ಬಿಟ್ಟು ನರಳುವವರು, ನೆರೆಯವನಿಗೆ ವಿರೋಧವಾಗಿ ಸ್ವಲ್ಪ ತಪ್ಪು ಮಾಡಿದ ಮೇಲೆ ಕ್ಷಮೆ ಬೇಡಿ ಕೊಳ್ಳುವವರು, ಘನವಾದ ಮನಸ್ಸೂ ಸಂತೋಷವೂ ಅವರಲ್ಲಿ ಸ್ವಲ್ಪವಾದರೂ ಇಲ್ಲವಂದನು. ಈ ಮೊದಲಾದ ಅನೇಕ ವಿಷಯಗಳಲ್ಲಿ ಅವನು ನನಗೆ ಲಜ್ಜೆ ಬರ ಮಾಡಿದನು.

ಕ್ರಿ. ಇದಕ್ಕೆಲ್ಲಾ ನೀವು ಏನು ಹೇಳಿದಿರಿ?

ವಿ. ಹೇಳುವದೇನು? ಆರಂಭದಲ್ಲಿ ಏನು ಹೇಳ ಬೇಕೆಂದು ತಿಳಿಯಲಿಲ್ಲ. ಅವನು ಬಹಳ ತಪ್ಪು ಹೊರಿಸಿದ್ದರಿಂದ ನನ್ನ ಮುಖ ಕಪ್ಪಾಯಿತು. ಅವನು ಜಯಿಸಲಿಕ್ಕೆ ಸಮೀಪಿಸಿದನು. ಕಡೆಗೆ, ಮನುಷ್ಯರಲ್ಲಿ ಶ್ರೇಷ್ಠವಾದದ್ದು ದೇವರ ಮುಂದೆ ಅಸಹ್ಯವಾಗಿದೆ ಎಂಬುವದು ನೆನಪಿಗೆ ಬಂತು. ಮತ್ತು ಲಜ್ಜೈಯ್ಯನು ಮನುಷ್ಯರನ್ನು ಕುರಿತು ಮಾತ್ರ ಮಾತಾಡಿ, ದೇವರನ್ನೂ ಆತನ ವಾಕ್ಯವನ್ನೂ ಕುರಿತು ಏನೂ ಹೇಳಲಿಲ್ಲವೆಂಬ ಆಲೋಚನೆ ಹುಟ್ಟಿತು. ಇದಲ್ಲದೆ ನ್ಯಾಯ ತೀರ್ವಿಕೆಯ ದಿನದಲ್ಲಿ ಈ ಪ್ರಪಂಚದವರಿಂದಲ್ಲ, ಪರಾತ್ಪರನ ಜ್ಞಾನದಿಂದಲೂ ನ್ಯಾಯಪ್ರಮಾಣದಿಂದಲೂ ನಮಗೆ ತೀರ್ಪು ಉಂಟಾಗುವದೆಂದು ನೆನಸಿದೆನು. ಹೀಗಿರುವದರಿಂದ ಲೋಕದಲ್ಲಿರುವ ಮನುಷ್ಯರೆಲ್ಲರು ವಿರೋಧಿಸಿದ್ದಾಗ್ಯೂ ದೇವರು ನುಡಿಯುವಂಥಾದ್ದೇ ಒಳ್ಳೇದೆಂದು ಯೋಚಿಸಿ, ದೇವರು ಭಕ್ತನಿಗೂ ಜಾಗ್ರತೆಯಿಂದ ನಡಕೊಳ್ಳುವವನಿಗೂ ಮೆಚ್ಚುವದರಿಂದ ಪರಲೋಕ ರಾಜ್ಯಕ್ಕೋಸ್ಕರ ತಮ್ಮನ್ನು ಹುಚ್ಚರಾಗ ಮಾಡುವವರು ಅತಿ ಜ್ಞಾನಿಗಳಾಗಿರುವದರಿಂದಲೂ, ಕ್ರಿಸ್ತನನ್ನು ಪ್ರೀತಿ ಮಾಡುವ ಬಡವನು ಅವನಿಗೆ ಹಗೆ ಮಾಡುವ ಮಹಾ ಪುರುಷನಿಗಿಂತ ಐಶ್ವರ್ಯವಂತನಾಗಿರುವದರಿಂದಲೂ, ಲಜ್ಜೈಯ್ಯನೇ, ಹೋಗು, ನೀನು ನನ್ನ ರಕ್ಷಣೆಗೆ ಶತ್ರುವಾಗಿದ್ದಿ, ನನ್ನ ಕರ್ತನೂ ಅರಸನೂ ಆಗಿರುವವನಿಗೆ ವಿರೋಧಿಸುವ ನಿನ್ನನ್ನು ನಾನು ಸೇರಿಸಿ ಕೊಳ್ಳುವದಿಲ್ಲ.

ಸೇರಿಸಿ ಕೊಂಡರೆ, ಆತನು ಬರುವ ಸಮಯದಲ್ಲಿ ಆತನ ಮುಖ ವನ್ನು ನಾನು ಹ್ಯಾಗೆ ನೋಡುವೆನು? ಆತನ ಮಾರ್ಗಕ್ಕೂ ಸೇವ ಕರಿಗೂ ನಾನು ಈಗ ನಾಚಿಕೆ ಪಟ್ಟರೆ ಆತನ ಆಶೀರ್ವಾದವನ್ನು ಹ್ಯಾಗೆ ಹೊಂದ ಬಹುದು? ಎಂದು ಹೇಳಿದೆನು.

ಆದರೆ ಆ ಲಜ್ಜೈಯ್ಯನು ಧೈರ್ಯವಂತನೂ ಘಟಿಂಗನೂ ಆಗಿರುವದರಿಂದ ಅವನನ್ನು ಓಡಿಸುವದು ಬಹಳ ಕಷ್ಟವಾಯಿತು. ಅವನು ನನ್ನ ಬೆನ್ನು ಹತ್ತಿ ದೇವಭಕ್ತರಿಗೆ ಹತ್ತುವ ಬೇರೆ ಬೇರೆ ಅವಲಕ್ಷಣಗಳನ್ನು ನನ್ನ ಕಿವಿಗಳಲ್ಲಿ ಪಿಸುಗುಟ್ಟುತ್ತಾ ಇದ್ದನು. ಅವನು ಹೀನೈಸಿದ ಕಾರ್ಯಗಳು ನನಗೆ ಹೆಚ್ಚು ಮಾನವಾದವುಗ ಳೆಂದು ತೋಚಿದ್ದರಿಂದ ಇನ್ನು ನನ್ನನ್ನು ಶೋಧಿಸುವದು ವ್ಯರ್ಥ ಪ್ರಯಾಸವೆಂದು ಅವನಿಗೆ ಹೇಳಿದ ಮೇಲೆ ಆ ತೊಂದರೆಗಾರನಿಂದ ಬಿಡುಗಡೆಯಾದೆನು.

ಕ್ರಿ. ಸಹೋದರನೇ, ಅಷ್ಟು ಧೈರ್ಯದಿಂದ ನೀನು ಆ ದುಷ್ಟನಿಗೆ ವಿರೋಧಿಸಿದ್ದಕ್ಕೆ ಸಂತೋಷ ಪಡುತ್ತೇನೆ. ನೀನು ಹೇ ಳಿದ ಹಾಗೆ ಅವನ ಗುಣಕ್ಕೆ ಸಮವಾಗಿ ಹೆಸರು ಒಪ್ಪುವದಿಲ್ಲವೆಂದು ನೆನಸುತ್ತೇನೆ. ಅವನು ಅಂಜದೆ, ಬೀದಿಗಳಲ್ಲಿ ನಮ್ಮನ್ನು ಹಿಂಬಾ ಲಿಸಿ, ಮನುಷ್ಯರೆಲ್ಲರ ಮುಂದೆ ನಮಗೆ ನಾಚಿಕೆ ಪಡಿಸಿ, ಒಳ್ಳೇದಕ್ಕೆ ಲಜ್ಜೆ ಪಡುವ ಹಾಗೆ ಮಾಡುತ್ತಾನೆ. ಅವನು ಮೊಂಡನಾಗದಿದ್ದರೆ ತಾನು ಮಾಡುವದನ್ನು ಹ್ಯಾಗೂ ಮುಂಗೊಳ್ಳದೆ ಇರುವನು. ಆ ದಾಗ್ಯೂ ಅವನನ್ನು ಎದುರಿಸೋಣ, ಯಾಕಂದರೆ ಅವನು ಎಷ್ಟು ಬೆದರಿಸಿದರೂ ಹುಚ್ಚರನ್ನೇ ಹೊರ್ತು ಮತ್ತ್ಯಾರನ್ನೂ ಹೆಚ್ಚಿಸು ವದಿಲ್ಲ. ಬುದ್ಧಿವಂತರು ಮಹಿಮೆಯನ್ನೂ ಹುಚ್ಚರು ನಾಚಿಕೆಯ ನ್ನೂ ಬಾಧ್ಯವಾಗಿ ಹೊಂದುವರೆಂದು ಸೊಲೊಮೋನನು ಹೇಳಿದ್ದಾ ನೆ. (ಸಾಮತಿ. ೩, ೩೫.)

ವಿ. ನಾವು ಸತ್ಯಕ್ಕೋಸ್ಕರ ಭೂಲೋಕದಲ್ಲಿ ಶೂರರಾಗಿರುವ ಹಾಗೆ ಮನಸ್ಸು ಕೊಡುವವನಿಂದ, ಹೋರಾಟದಲ್ಲಿ ಲಜ್ಜೈಯ್ಯನನ್ನು ಜಯಿಸುವ ಸಹಾಯವನ್ನು ಬೇಡಿ ಕೊಳ್ಳ ಬೇಕೆಂದು ಕಾಣುತ್ತದೆ.

ಕ್ರಿ. ನೀವು ಹೇಳುವದು ಸರಿ. ಆದರೆ ಆ ತಗ್ಗಿನಲ್ಲಿ ಮತ್ತ್ಯಾರೂ ನಿಮಗೆ ಶಿಕ್ಕಲಿಲ್ಲವೋ?

ವಿ. ಇಲ್ಲ. ಆ ತಗ್ಗಿನ ಉಳಿದ ಭಾಗದಲ್ಲಿಯೂ, ಮರಣದ ನೆರಳೆಂಬ ತಗ್ಗಿನಲ್ಲಿಯೂ, ಹಗಲಿನಲ್ಲಿ ನಡೆದೆನು.

ಕ್ರಿ. ನಿಮಗೆ ಒಳ್ಳೇದಾಯಿತು. ಆದರೆ ನನ್ನ ಗತಿ ಬೇರೆಯಷ್ಟೆ. ನಾನು ಆ ತಗ್ಗಿನಲ್ಲಿ ಪ್ರವೇಶಿಸಿದಾಗಲೇ ಭಯಂಕರ ಪಿಶಾಚನಾದ ಸಂಹಾರಕನ ಸಂಗಡ ಬಹಳ ಹೊತ್ತು ಜಗಳವಾಡ ಬೇಕಾಯಿತು. ಅವನು ನನ್ನನ್ನು ನೆಲಕ್ಕೆ ಕೆಡವಿ ನಾಶ ಮಾಡುವ ಹಾಗೆ ಅಣಗಿಸಿದ್ದಾಗ, ಕತ್ತಿ ಸಹ ನನ್ನ ಕೈಯಿಂದ ಬಿದ್ದು ಹೋದದರಿಂದಲೂ, ತಾನು ಗೆದ್ದೆನೆಂದು ಅವನು ಕೂಗಿದದರಿಂದಲೂ, ನನ್ನ ಪ್ರಾಣ ಹೋಯಿತೆಂದು ನೆನಸಿದೆನು. ಆದರೆ ನಾನು ದೇವರಿಗೆ ಮೊರೆ ಇಟ್ಟ ಕಾರಣ ಅವನು ನನ್ನನ್ನು ಕೇಳಿ, ಸಕಲ ಸಂಕಟಗಳಿಂದ ತಪ್ಪಿಸಿದನು. ಆ ಮೇಲೆ ನಾನು ಮರಣದ ನೆರಳೆಂಬ ತಗ್ಗಿನಲ್ಲಿ ಸೇರಿದಾಗ ಸುಮಾರು ಅರ್ಧ ಮಾರ್ಗದ ಪರ್ಯಂತರ ಬೆಳಕು ಇರಲಿಲ್ಲದರಿಂದ ಅಲ್ಲಿ ನಾನು ಹತವಾಗುವದು ಸರಿ ಎಂದು ಆಗ್ಯಾಗ್ಯೆ ನೆನಸಿದೆನು. ಕಡೆಯಲ್ಲಿ ಹ್ಯಾಗಾದರೂ ಅರುಣೋದಯವಾಯಿತು. ಸೂರ್ಯ ಮೂಡಿದನು. ಆದದರಿಂದ ಉಳಿದ ಮಾರ್ಗವನ್ನು ಹೆಚ್ಚಾದ ಸಮಾಧಾನದಿಂದಲೂ ಕ್ಷೇಮದಿಂದಲೂ ದಾಟಿದೆನು.

---

## 12. Talkative.

## ೧೨. ವಾಚಾಳ ಶೆಟ್ಟಿ.

---

ತ್ತರುವಾಯ ಕನಸಿನಲ್ಲಿ ನಾನು ಕಂಡದ್ದೇನಂದರೆ, ಅವರು ಹೋಗುತ್ತಾ ವಿಶ್ವಾಸೈಯ್ಯನು ಒಂದು ಕಡೆಗೆ ನೋಡಲಾಗಿ ವಾಚಾಳ ಶೆಟ್ಟಿ ಎಂಬ ಒಬ್ಬ ಮನುಷ್ಯನು ತಮ್ಮ ಪಾರ್ಶ್ವದಿಂದ ಬರುವದನ್ನು ಕಂ

ಪನು. ಆದರೆ ಅಲ್ಲಿ ಆ ಮೂವರಿಗೆ ಕೂಡಾ ನಡೆಯುವದಕ್ಕೆ ಸ್ಥಳ
ವಿತ್ತು. ಅವನು ಉದ್ದವಾದವನೂ ಸಮೀಪಕ್ಕಿಂತ ದೂರಕ್ಕೆ ರಮ್ಯ
ವಾದವನೂ ಆಗಿದ್ದನು. ಆ ಮನುಷ್ಯನ ಸಂಗಡ ವಿಶ್ವಾಸ್ಯಯ್ಯ
ನು ಮಾಡಿದ ಸಂಭಾಷಣೆ ಏನಂದರೆ,

ವಿಶ್ವಾಸ್ಯಯ್ಯ. ಎಲ್ಲಿಗೈಯು ಪ್ರಯಾಣ? ಚಿಯೋನ್
ಪಟ್ಟಣಕ್ಕೆ ಹೋಗುತ್ತೀರೋ?

ವಾಚಾಳಶೆಟ್ಟಿ. ಹೌದು. ಅಲ್ಲಿ ಹೋಗುತ್ತೇನೆ.

ವಿ. ಬಹು ಒಳ್ಳೇದಾಯಿತು. ಜೆಲೋ ಸಹವಾಸ ಸಿಕ್ಕೀತೇ
ಎಂದು ನೋಡುತ್ತಿದ್ದೆನು.

ವಾ. ನಿಮ್ಮಂಥವರ ಸಹವಾಸವೇ ಬಹು ಸಂತೋಷಕರವಾದದ್ದು.

ವಿ. ಹಾಗಾದರೆ ಕೂಡಾ ಹೋಗುವ ಬನ್ನಿ. ಒಳ್ಳೇ ಸಂಭಾ
ಷಣೆಯಿಂದ ಹೊತ್ತು ಕಳೆಯ ಬಹುದು.

ವಾ. ನಿಮ್ಮ ಸಂಗಡಲಾಗಲಿ ಬೇರೆ ಯಾರ ಸಂಗಡಲಾಗಲಿ
ಒಳ್ಳೇ ಸಂಭಾಷಣೆ ಮಾಡುವದು ನನ್ನ ಮನಸ್ಸಿಗೆ ಬಹು ಆನಂದ
ಕರವಾಗಿರುವದು. ನಿಮ್ಮಂಥ ಗುಣವಂತರಾದ ಸಜ್ಜನರ ಸಂಸರ್ಗಕ್ಕೆ
ಬಹಳ ಸಂತೋಷ ಪಡುತ್ತೇನೆ. ಪ್ರಯಾಣದಲ್ಲಿ ಸದ್ವಾರ್ತೆಯಿಂದ
ಹೊತ್ತು ಕಳೆಯುವಂಥವರಾದ ಸಾತ್ವಿಕರು ಅಪರೂಪವೇ ಸರಿ. ಅ
ನೇಕ ಜನರು ಸುಮ್ಮಗೆ ನಿಷ್ಪ್ರಯೋಜಕ ಮಾತಿನಿಂದ ಹೊತ್ತು ಕಳೆ
ಯುತ್ತಾರೆ. ಅಂಥಾದು ನನಗೆ ಅಸಹ್ಯವಾಗಿದೆ.

ವಿ. ನಿಶ್ಚಯ. ಅಸಹ್ಯವಾಗ ತಕ್ಕದ್ದೇ ಸರಿ. ಮನುಷ್ಯರ
ಬಾಯಿ ನಾಲಿಗೆಗಳಿಗೆ ಪರಲೋಕದಲ್ಲಿರುವ ದೇವರ ಕಾರ್ಯಗಳೇ
ಅತಿ ಯೋಗ್ಯವಾದವುಗಳು.

ವಾ. ನಿಮ್ಮ ಮಾತು ಬಹಳ ಸಂತೋಷ ಪಡುವಂಥಾದ್ದಾ
ಗಿದೆ. ಇಂಥಾ ಮಾತು ಹೃದಯದೊಳಗೆ ಚನ್ನಾಗಿ ಹೊಕ್ಕುತ್ತದೆ.
ದೇವರ ಕಾರ್ಯಗಳ ಸಂಭಾಷಣೆಯೇ ರಮ್ಯವೂ ಪ್ರಯೋಜನವು
ಳ್ಳದ್ದೂ ಆಗಿದೆ. ಏನಂದರೆ ಚರಿತ್ರೆಯಲ್ಲಿಯಾಗಲಿ ರಹಸ್ಯಕಾರ್ಯ
ಗಳಲ್ಲಿಯಾಗಲಿ ಲಕ್ಷಣಾದ್ಭುತಾದಿಗಳಲ್ಲಿಯಾಗಲಿ ಆನಂದ ಪಡು

ಛ ಮನುಷ್ಯನಿಗೆ ಪರಿಶುದ್ಧ ಬರಹಗಳಲ್ಲಿ ಬರದಿರುವ ಸಂಗತಿಗಳ ಹಾಗೆ ಬಹು ರಮ್ಯವಾಗಿಯೂ ಆನಂದಕರವಾಗಿಯೂ ಉಳ್ಳದ್ದು ಇನ್ನೆಲ್ಲಿ ಶಿಕ್ಕ್ಯಾವು?

ವಿ. ಇದು ಸತ್ಯ. ಆದದರಿಂದ ಅಂಥವುಗಳ ಸಂಭಾಷಣೆಯಲ್ಲಿ ಪ್ರಯೋಜನ ಹೊಂದುವದು ನಮ್ಮ ಮುಖ್ಯವಾದ ಅಪೇಕ್ಷೆಯಾಗಿರ ಬೇಕು.

ವಾ. ನಾನು ಹೇಳಿದ್ದು ಇದೇ. ಅಂಥ ಸಂಭಾಷಣೆಯು ಅತಿ ಪ್ರಯೋಜನಕರವಾದದ್ದು ಹ್ಯಾಗಂದರೆ ಅವುಗಳನ್ನು ಮಾತ ನಾಡಿದರೆ ಬೇರೆ ಬೇರೆ ಕಾರ್ಯಗಳ ತಿಳುವಿಕೆ ಉಂಟಾಗುವದು. ಭೂಲೋಕದವುಗಳ ಮಾಯವು ಪರಲೋಕದವುಗಳ ಮಹಿಮೆಯು ಇವುಗಳನ್ನಲ್ಲದೆ, ಹೊಸ ಜನ್ಮವು ಅವಶ್ಯವಾಗಿದೆ ಎಂದೂ, ನಮ್ಮ ಕ್ರಿಯೆಗಳಿಂದ ನೀತಿ ಉಂಟಾಗುವದಿಲ್ಲವೆಂದೂ, ಕ್ರಿಸ್ತನ ನೀತಿಯು ನಮಗೆ ಬೇಕೆಂದೂ, ಈ ಮೊದಲಾದ ಕಾರ್ಯಗಳು ಸಂಭಾಷಣೆಯಿಂದ ತಿಳಿದು ಬರುವವು. ಅದಲ್ಲದೆ ಪಶ್ಚಾತ್ತಾಪವಂದರೇನು, ವಿಶ್ವಾಸವಂದರೇನು, ಪ್ರಾರ್ಥನೆ ಅಂದರೇನು, ಶ್ರಮೆ ಅಂದರೇನು, ಎಂಬ ಇತ್ಯಾದಿಗಳನ್ನು ಸಂಭಾಷಣೆಯಿಂದ ತಿಳ ಕೊಳ್ಳ ಬಹುದು. ಮತ್ತು ಸುವಾರ್ತೆಯಲ್ಲಿರುವ ಮಹಾ ವಾಗ್ದತ್ತಗಳೂ ಆದರಣೆಗಳೂ ಯಾವವೆಂದು ಸಂಭಾಷಣೆ ಮಾಡುವವರು ಸ್ವಂತ ಉಪಯೋಗಕ್ಕಾಗಿ ಕಲಿಯ ಬಹುದು. ಅದಲ್ಲದೆ ಸುಳ್ಳು ಬೋಧನೆಯ ಖಂಡನೆಯೂ ಸತ್ಯದ ಸ್ಥಾಪನೆಯೂ ಮೂಢೋಪದೇಶವೂ ಇವುಗಳನ್ನು ಸಂಭಾಷಣೆಯಿಂದ ತಿಳಿಯ ಬಹುದು.

ವಿ. ಇವೆಲ್ಲಾ ಸತ್ಯವು. ಇಂಥ ಬುದ್ಧಿಯನ್ನು ನಿಮ್ಮಿಂದ ಕೇಳಿ ಸಂತೋಷ ಪಡುತ್ತೇನೆ.

ವಾ. ಅಯ್ಯೊ, ಅನೇಕರು ಇವುಗಳನ್ನು ತಿಳಿಯದೆ ವ್ಯರ್ಥವಾಗಿ ನಿತ್ಯ ಜೀವಕ್ಕೋಸ್ಕರ ತಮಗೆ ವಿಶ್ವಾಸವೂ ದೇವರ ಕೃಪೆಯೂ ಬೇಕೆಂದು ಗ್ರಹಿಸಿ ಕೊಳ್ಳದೆ, ಪರಲೋಕ ರಾಜ್ಯದಲ್ಲಿ ಸೇರಿಸ ಕೂಡದ ನ್ಯಾಯಪ್ರಮಾಣದ ಕ್ರಿಯೆಗಳನ್ನು ಮಾಡುತ್ತಾ ಬದುಕುತ್ತಾರೆ.

ವಿ. ಆದರೆ ಸ್ವಲ್ಪ ತಾಳಿ. ಇವುಗಳ ತಿಳುವಿಕೆ ದೇವರ ದಾನವಾಗಿದೆ. ತಾನು ಮಾಡುವ ಅಭ್ಯಾಸದಿಂದಲಾದರೂ ಬರೀ ಮಾತುಗಳಿಂದಲಾದರೂ ಅವುಗಳನ್ನು ಯಾವನೂ ಹೊಂದನು.

ವಾ. ಅದೆಲ್ಲಾ ನಾ ಬಲ್ಲೆ. ಮೇಲಿನಿಂದ ತನಗೆ ಕೊಡಲ್ಪಟ್ಟರೆ ಹೊರ್ತು ಯಾವ ಮನುಷ್ಯನೂ ಏನೂ ಹೊಂದನು. ಕ್ರಿಯೆಗಳಿಂದ ಮಾತ್ರವಲ್ಲ, ದೇವರ ದಯದಿಂದಲೇ ಎಲ್ಲಾ ಆಗುತ್ತದೆ. ಇದಕ್ಕೆ ನೂರು ವಚನಗಳನ್ನಾದರು ಉದಾಹರಣೆ ಹೇಳುವೆನು.

ವಿ. ಒಳ್ಳೇದು. ಹಾಗಾದರೆ ಈ ಸಾರಿ ಯಾವ ವಿಷಯದಲ್ಲಿ ಸಂಭಾಷಣೆ ಮಾಡುವ.

ವಾ. ನಿಮಗೆ ಬೇಕಾದದ್ದು ಮಾಡ ಬಹುದು. ಪರಲೋಕದವುಗಳಾಗಲಿ ಭೂಲೋಕದವುಗಳಾಗಲಿ ನೀತಿಶಾಸ್ತ್ರವಾಗಲಿ ಸುವಾರ್ತೆಯಾಗಲಿ ವೈದಿಕವಾಗಲಿ ಲೌಕಿಕವಾಗಲಿ ಭೂತವಾಗಲಿ ಭವಿಷ್ಯವಾಗಲಿ ಸ್ವದೇಶದ್ದಾಗಲಿ ಪರದೇಶದ್ದಾಗಲಿ ತಾತ್ಪರ್ಯವಾಗಲಿ ಲಕ್ಷಣವಾಗಲಿ ಇವೆಲ್ಲವುಗಳಲ್ಲಿ ನಿಮಗೆ ಯಾವದು ಬೇಕೋ ಅವುಗಳ ವಿಷಯ ಸಂಭಾಷಣೆ ಮಾಡೇನು. ನಾವು ಮಾತಾಡುವಂಥಾದ್ದು ಪ್ರಯೋಜನಕ್ಕೆ ತಕ್ಕದ್ದಾಗಿರ ಬೇಕಷ್ಟೆ. ಅಷ್ಟು ಪರಿಯಂತರ ಬಂಟಿಯಾಗಿ ಮುಂದೆ ನಡೆದ ವಿಶ್ವಾಸ್ಯೈಯ್ಯನು ಆಶ್ಚರ್ಯ ಪಡಲಾರಂಭಿಸಿ ಹಿಂದೆ ಬಿದ್ದ ಕ್ರಿಸ್ತಿಯನ ಹತ್ತರ ಬಂದು, ಒಳ್ಳೇ ಜತೆಗಾರ ದೊರಕಿದ, ನಿಶ್ಚಯವಾಗಿ ಇವನು ಉತ್ತಮ ಪ್ರಯಾಣಸ್ಥನೆಂದು ಮೆಲ್ಲಗೆ ಹೇಳಿದನು. ಈ ಮಾತಿಗೆ ಕ್ರಿಸ್ತಿಯನು ಸ್ವಲ್ಪ ನಕ್ಕು, ನೀವು ಮೆಚ್ಚುವ ಈ ಮನುಷ್ಯನು ತನ್ನ ನಾಲಿಗೆಯಿಂದ ತನ್ನ ಗುಣಗಳನ್ನರಿಯದ ಇಪ್ಪತ್ತು ಜನರಿಗಾದರೂ ಮೋಸ ಮಾಡ್ಯಾನು, ಅಂದನು.

ವಿ. ಹಾಗಾದರೆ ನಿಮಗೆ ಅವನ ಗುರುತು ಉಂಟೋ?

ಕ್ರಿ. ಉಂಟು. ಅವನನ್ನು ಚನ್ನಾಗಿ ಬಲ್ಲೆ. ಅವನು ತನ್ನನ್ನು ತಿಳಿದದಕ್ಕಿಂತ ಚನ್ನಾಗಿ ಅವನನ್ನು ಬಲ್ಲೆನು.

ವಿ. ಹಾಗಾದರೆ ಅವನು ಯಾರು?

ಕ್ರಿ. ಅವನು ನಮ್ಮ ಪಟ್ಣದವನಾದ ವಾಚಾಳಶೆಟ್ಟಿ. ಅವನ ಮನೆಯನ್ನು ನೀವು ತಿಳಿಯದೆ ಇರುವದಕ್ಕೆ ಆಶ್ಚರ್ಯ ಪಡುತ್ತೇನೆ. ಆದರೆ ನಮ್ಮ ಊರು ಬಹಳ ದೊಡ್ಡದು.

ವಿ. ಅವನು ಯಾರ ಮಗ? ಅವನ ಮನೆ ಎಲ್ಲಿ?

ಕ್ರಿ. ಅವನು ಸುವಾಕ್ಯಪ್ಪನ ಮಗ, ಹರಟೆ ಬೀದಿಯಲ್ಲಿ ಅವನ ಮನೆ. ಅವನನ್ನು ತಿಳಿದವರೆಲ್ಲರು ಹರಟೆ ಬೀದಿಯ ವಾಚಾಳ ಶೆಟ್ಟಿ ಎಂದು ಹೇಳುತ್ತಾರೆ. ನಾಲಿಗೆ ಚಾತುರ್ಯವಿದ್ದರೂ ಅವನ ಮನಸ್ಸಿಗೆ ಒಳ್ಳೇ ಗುಣವಿಲ್ಲ.

ವಿ. ಅವನು ಸಜ್ಜನನ ಹಾಗೆ ಕಾಣುತ್ತಾನಲ್ಲವೋ?

ಕ್ರಿ. ಪೂರ್ಣವಾಗಿ ತಿಳಿಯದವರಿಗೆ ಕಾಣುತ್ತಾನೆ. ಅವನು ಹೊರಗೆ ಹೋದರೆ ವಾಶಿ, ಮನೆಯಲ್ಲಿದ್ದರೆ ಕರಕರೆ. ದೂರದಿಂದ ಬೆಟ್ಟ ನುಣ್ಣಗೆ ಅಂದ ಹಾಗೆ.

ವಿ. ನೀವು ನಕ್ಕು ಕುಚೋದ್ಯ ಮಾಡ ಬೇಡಿರೈಯ್ಯಾ.

ಕ್ರಿ. ನಕ್ಕರೂ ಕುಚೋದ್ಯ ಮಾಡಲಾರೇನು. ಒಬ್ಬನ ಮೇಲೆ ಇಲ್ಲದ ದೂರು ಹೇಳಲಾರೆನು. ಇನ್ನು ಅವನ ಲಕ್ಷಣ ಹೇಳುತ್ತೇನೆ ಕೇಳಿರಿ. ಈ ಮನುಷ್ಯನು ದೇಶಕ್ಕೆ ತಕ್ಕ ಭಾಷೆಯುಳ್ಳವನು. ಈಗ ನಿಮ್ಮ ಸಂಗಡ ಮಾತಾಡಿದ ಹಾಗೆಯೇ ಸಾರಾಯದ ಅಂಗಡಿಯಲ್ಲಿ ಸಹ ಮಾತಾಡುವನು. ಅವನ ತಲೆಗೆ ಅಮಲು ಏರಿದಷ್ಟು ಬಾಯಿಯಲ್ಲಿ ಮಾತು ಹೆಚ್ಚುವದು. ಅವನ ಹೃದಯದಲ್ಲಿಯೂ ಮನೆಯಲ್ಲಿಯೂ ನಡತೆಯಲ್ಲಿಯೂ ಅಲ್ಲ, ಅವನ ನಾಲಿಗೆಯ ತುದಿಯಲ್ಲಿಯೇ ಭಕ್ತಿಯುಂಟು. ಅವನ ಭಕ್ತಿ ಗದ್ದಲವೇ ಸರಿ.

ವಿ. ಹೀಗೋ? ಹಾಗಾದರೆ ಅವನ ಒಳ ಗುಟ್ಟು ತಿಳಿಯಲಿಲ್ಲ.

ಕ್ರಿ. ತಿಳಿಯಲಿಲ್ಲವೆಂದು ನಂಬ ಬಹುದು. ಅವರು ಹೇಳುತ್ತಾರೆ, ಆದರೆ ಮಾಡುವದಿಲ್ಲವೆಂಬ ವಾಕ್ಯವನ್ನು ನೆನಪು ಮಾಡಿ ಕೊಳ್ಳಿರಿ. ದೇವರ ರಾಜ್ಯವು ಮಾತಿನಲ್ಲಿ ಅಲ್ಲ ಬಲದಲ್ಲಿ ಇರುತ್ತದೆ. ಅವನು ಪ್ರಾರ್ಥನೆ ಮಾನಸಾಂತರ ವಿಶ್ವಾಸ ಪುನರ್ಜನ್ಮ ಎಂಬವುಗಳ ಮಾತನ್ನಾಡುತ್ತಾನೆ. ಆದರೆ ಇವುಗಳು ಬಾಯಿಯಲ್ಲಿ ಮಾ

ತ್ರವೇ ಇವೆ. ಅವನ ಮನೆಯನ್ನು ನಾನು ಬಲ್ಲೆನು. ಅವನ ಅಂತ
ರಂಗ ಬಹಿರಂಗ ಕಂಡಿದ್ದೇನೆ. ಅವನ ನಡತೆಯು ನಾನು ಹೇಳಿದ
ಪ್ರಕಾರವೇ ಸರಿ. ಉಪ್ಪಿಲ್ಲದ ಅಂಬಲಿ ಎಷ್ಟು ರುಚಿಯೋ ಹಾಗೆ
ಅವನ ಮನೆಯಲ್ಲಿರುವ ಭಕ್ತಿಯು. ಅಲ್ಲಿ ಪ್ರಾರ್ಥನೆಯೂ ಪಾಪ
ಕ್ಕೋಸ್ಕರವಾದ ಪಶ್ಚಾತ್ತಾಪವೂ ಯಾವದೂ ಇಲ್ಲ. ಮೃಗ ಜಾತಿ
ಸಹ ಅವನಿಗಿಂತ ಚನ್ನಾಗಿ ದೇವರನ್ನು ಸೇವಿಸುತ್ತದೆ. ಅವನನ್ನು
ಬಲ್ಲವರೆಲ್ಲರಿಗೆ ಭಕ್ತಿಗೆ ಅಪ ಕೀರ್ತಿಯೂ ನಿಂದೆಯೂ ಕಳಂಕವೂ
ಅವನ ತಪ್ಪಿನಿಂದ ಉಂಟಾಗುವವು. ಅವನು ವಾಸವಾಗಿರುವ ಬೀ
ದಿಯಲ್ಲಿ ಅವನಿಂದಲೇ ಭಕ್ತಿಗೆ ಅವಮಾನ ಉಂಟಾಯಿತು. ಪರ
ರಿಗೆ ಆಚಾರಿ, ಮನೆಗೆ ಮಾರಿ; ಹೊರಗೆ ಭಕ್ತಿ ಒಳಗೆ ಕತ್ತಿ ಎಂಬ
ಗಾದೆಗಳು ಅವನಿಗೆ ತಕ್ಕವು. ಅವನ ಕ್ರೂರ ನಡತೆಯನ್ನು ಅವನ
ಕುಟುಂಬದವರು ಬಲ್ಲರು. ಅವನು ತನ್ನ ಚಾಕರಿಯವರಿಗೆ ಕೋಪ
ಮಾಡಿ, ಬೈಯುತ್ತಾ ಹೊಡೆಯುತ್ತಾ ಬರುವದರಿಂದ, ಅವನಿಗೆ ಏನು
ಬೇಕೋ, ಹ್ಯಾಗೆ ಮಾತಾಡ ಬೇಕೋ, ಎಂದು ಅವರಿಗೆ ತಿಳಿಯದೆ
ಹೋಯಿತು. ಅವನ ಸಂಗಡ ವ್ಯಾಪಾರ ನಡಿಸುವವರು ಇವನಿಗಿಂತ
ಕಳ್ಳನು ವಾಸಿ ಎಂದು ಹೇಳುತ್ತಾರೆ. ಯಾಕಂದರೆ ಸಾಧ್ಯವಾದರೆ
ಈ ವಾಚಾಳ ಶೆಟ್ಟಿಯು ಅವರಿಗೆ ಮೋಸ ದಗೆ ತಂಟಿ ಮಾಡುವನು.
ಅದಲ್ಲದೆ ತನ್ನ ಮಕ್ಕಳಿಗೆ ತನ್ನ ಬುದ್ಧಿಯನ್ನೇ ಕಲಿಸುತ್ತಾನೆ. ಮತ್ತು
ಅವರಲ್ಲಿ ಒಬ್ಬನು ದುರ್ನಡತೆಗೆ ಸ್ವಲ್ಪ ಭಯ ಪಟ್ಟರೆ, ಆ ಭಯ
ಕ್ಕೆ ಹೇಡಿತನವೆಂದು ಹೇಳಿ, ಅವನಿಗೆ ಹುಚ್ಚನೂ ಹೆಡ್ಡನೂ ಎಂದು
ಬೈದು, ಬಹಳ ಕೆಲಸದಲ್ಲಿ ನಂಬದೆ, ಬೇರೊಬ್ಬರ ಮುಂದೆ ತಿರಸ್ಕ
ರಿಸುತ್ತಾನೆ. ಅವನು ತನ್ನ ದುರ್ನಡತೆಯಿಂದ ಅನೇಕರಿಗೆ ಎಡವುವ
ದಕ್ಕೂ ಬೀಳುವದಕ್ಕೂ ಕಾರಣವಾದನು. ದೇವರು ಇನ್ನು ಮೇಲೆ
ಯೂ ಅಡ್ಡಿ ಮಾಡದೆ ಇದ್ದರೆ ಕಾರಣವಾದಾನು ಎಂದು ನೆನಸು
ತ್ತೇನೆ.

ವಿ. ಆಗಲಿ ಸಹೋದರನೇ, ಅವನ ಗುರುತು ಬಲ್ಲೆನೆಂದು
ನೀವು ಹೇಳುತ್ತೀರಿ. ಮತ್ತು ಕ್ರಿಸ್ತಿಯನಿಗೆ ತಕ್ಕ ಹಾಗೆ ಬೇರೊ

ಬ್ಬರ ಗುಣಗಳನ್ನು ಸತ್ಯವಾಗಿ ಹೇಳುತ್ತೀರಿ. ಆದದರಿಂದ ನಿಮ್ಮ ಮಾತು ನಂಬ ಬೇಕಾಯಿತು. ನೀವು ಹಗೆಯಿಂದಲ್ಲ ಇದ್ದ ಪ್ರಕಾರವೇ ಇವುಗಳನ್ನು ಹೇಳಿದಿರೆಂದು ನೆನಸುತ್ತೇನೆ.

ಕ್ರಿ. ನಿಮ್ಮಗಿಂತ ಚನ್ನಾಗಿ ಅವನ ಗುಣವನ್ನು ನಾನು ತಿಳಿಯದಿದ್ದರೆ ನೀವು ಮೊದಲು ನೆನಸಿದ ಪ್ರಕಾರ ಒಂದು ವೇಳೆ ಅವನ ವಿಷಯ ನೆನಸುತ್ತಿದ್ದೆನು. ಭಕ್ತಿಯ ಶತ್ರುಗಳಾದವರ ಕೈಯಿಂದ ಮಾತ್ರ ಅವನ ಸಮಾಚಾರವನ್ನು ಹೊಂದಿದರೆ ಅದು ಚಾಡಿ ಎಂದು ನೆನಸುತ್ತಿದ್ದೆನು. ದುಷ್ಟರು ಒಳ್ಳೆಯವರ ಹೆಸರುಗಳಿಗೂ ನಡತೆಗಳಿಗೂ ಅನೇಕ ಸಾರಿ ಚಾಡಿ· ಹೇಳುತ್ತಾರಲ್ಲವೋ? ಆದರೆ ನಾನು ಹೇಳಿದವುಗಳನ್ನೆಲ್ಲವೂ ಅವುಗಳ ಹಾಗಿರುವ ಇನ್ನು ಅನೇಕ ದುರ್ನಡತೆಗಳನ್ನೂ ಅವನು ನಡಸಿದ್ದು ನಾನು ನೋಡಿದದರಿಂದ ನನ್ನ ಮಾತಿಗೆ ಪ್ರಮಾಣ ಮಾಡುವೆನು. ಮತ್ತು ಒಳ್ಳೆಯವರು ಅವನಿಗೆ ಸಹೋದರನೆಂದೂ ಸ್ನೇಹಿತನೆಂದೂ ಹೇಳುವದಕ್ಕೆ ಲಜ್ಜೆ ಪಡುತ್ತಾರೆ. ಅವನ ಗುಣ ತಿಳಿದವರು ಅವನ ಹೆಸರು ಕೇಳಿದರೆ ನಾಚುತ್ತಾರೆ.

ವಿ. ಒಳ್ಳೇದು ಹಾಗಾದರೆ ಮಾತು ಬೇರೆ ಕೃತ್ಯ ಬೇರೆ ಎಂದು ತಿಳು ಕೊಳ್ಳುತ್ತೇನೆ. ಅವನ ಮಾತಿಗೂ ಕೃತ್ಯಕ್ಕೂ ಹೆಚ್ಚು ಕಡಿಮೆ ಉಂಟೆಂದು ಇನ್ನು ಮೇಲೆ ಚನ್ನಾಗಿ ನೆನಪು ಮಾಡಿಕೊಳ್ಳುತ್ತೇನೆ.

ಕ್ರಿ. ಹೆಚ್ಚು ಕಡಿಮೆ ಉಂಟೆಂಬುವದು ಸರಿ. ಆತ್ಮಕ್ಕೂ ಶರೀರಕ್ಕೂ ಎಷ್ಟು ಹೆಚ್ಚು ಕಡಿಮೆ ಉಂಟೋ ಮಾತಿಗೂ ಕೃತ್ಯಕ್ಕೂ ಅಷ್ಟು ಇರುವದು. ಆತ್ಮವಿಲ್ಲದ ಶರೀರವು ಹ್ಯಾಗೆ ಹೆಣವೋ ಹಾಗೆಯೇ ಕೃತ್ಯವಿಲ್ಲದ ಮಾತು ಬರೇ ಶಬ್ದವು. ಕೃತ್ಯವು ಭಕ್ತಿಯ ಜೀವವಾಗಿದೆ. ತಂದೆಯಾದ ದೇವರ ಸನ್ನಿಧಿಯಲ್ಲಿ ಶುದ್ಧವೂ ನಿಷ್ಕಳಂಕವೂ ಆಗಿರುವ ಭಕ್ತಿ ಏನಂದರೆ, ತಂದೆ ತಾಯಿ ಇಲ್ಲದವರನ್ನೂ ವಿಧವೆಯವರನ್ನೂ ಅವರ ಉಪದ್ರದಲ್ಲಿ ಪರಾಮರಿಸಿ ಲೋಕದ ದೆಶೆಯಿಂದ ತನ್ನನ್ನು ಕಳಂಕವಿಲ್ಲದೆ ಕಾಪಾಡಿ ಕೊಳ್ಳುವದೇ. ಇದು

ವಾಚಾಳ ಶೆಟ್ಟಿಗೆ ತಿಳಿಯದು. ಕೇಳುವದೂ ಮಾತಾಡುವದೂ ಒಳ್ಳೇ ಕ್ರಿಸ್ತಿಯನಿಗೆ ಸಾಕೆಂದು ನೆನಸಿ, ಸ್ವಂತ ಆತ್ಮವನ್ನು ಮೋಸಗೊಳ್ಳಿಸುತ್ತಾನೆ. ಕೇಳುವದು ಬೀಜವನ್ನು ಬಿತ್ತುವ ಪ್ರಕಾರವಾಗಿದೆ. ಹೃದಯದಲ್ಲಿಯೂ ಜೀವದಲ್ಲಿಯೂ ಫಲ ಉಂಟೆಂದು ಬರೇ ಮಾತಿನಿಂದ ತಿಳು ಕೊಳ್ಳ ಕೂಡದು. ಮತ್ತು ನ್ಯಾಯತೀರ್ವಿಕೆಯ ದಿವಸದಲ್ಲಿ ಕೃತ್ಯವೆಂಬ ಫಲದ ಪ್ರಕಾರವೇ ಮನುಷ್ಯರಿಗೆ ನ್ಯಾಯ ತೀರಿಸಲ್ಪಡುವದೆಂಬುವದು ನಿಶ್ಚಯ. ಆ ಸಮಯದಲ್ಲಿ ನೀವು ವಿಶ್ವಾಸಿಸಿದಿರೋ? ಎಂದು ಅಲ್ಲ, ನೀವು ಕೃತ್ಯ ನಡಿಸಿದಿರೋ? ಇಲ್ಲವೆ ಬರೇ ಮಾತಾಡಿದಿರೋ? ಎಂಬ ಪ್ರಶ್ನೆಯಾಗುವದು. ಮತ್ತು ಅದಕ್ಕೆ ಅನುಸಾರವಾಗಿ ನ್ಯಾಯತೀರ್ವಿಕೆಯಾಗುವದು. ಈ ಲೋಕದ ಅಂತ್ಯವು ಪೈರು ಕೊಯ್ಯುವ ಕಾಲಿಕ್ಕೆ ಸಮಾನ ಮಾಡಲ್ಪಟ್ಟದೆ. ಮತ್ತು ಪೈರು ಕೊಯ್ಯುವವರು ಫಲವನ್ನೇ ಹೊರ್ತು ಮತ್ತೇನೂ ಹುಡುಕರೆಂದು ನಿಮಗೆ ತಿಳಿಯುವದು. ವಿಶ್ವಾಸದಿಂದ ಹುಟ್ಟಿದ ಕ್ರಿಯೆಗಳಿಲ್ಲದೆ ಮತ್ತ್ಯಾವವೂ ಅಂಗೀಕಾರವಾಗಲಿಕ್ಕಿಲ್ಲವೆಂಬುವದು ನಿಶ್ಚಯ. ಆದರೆ ವಾಚಾಳ ಶೆಟ್ಟಿಯ ನಡತೆ ಮಾತ್ರ ಆ ದಿನದಲ್ಲಿ ಯಾವ ಕೆಲಸಕ್ಕೂ ಬಾರದೆಂದು ತೋರಿಸ ಬೇಕಾಗಿ ನಿಮಗೆ ಹೇಳುತ್ತೇನೆ.

ವಿ. ಮೋಶೆಯು ಶುದ್ಧ ಮೃಗಗಳಿಗೆ ಹೇಳಿದ ಲಕ್ಷಣವು ನೆನಪಾಯಿತು. ಭಾಗವಾದ ಗೊರಸಾಗಿದ್ದು ನೆಮರು ಹಾಕುವಂಥಾದು ಶುದ್ಧ ಮೃಗವು; ಗೊರಸು ಮಾತ್ರ ಭಾಗವಾಗಿದ್ದರೆ, ಇಲ್ಲವೆ ನೆಮರು ಮಾತ್ರ ಹಾಕಿದರೆ ಅದು ಶುದ್ಧವಾದದ್ದಲ್ಲ. ಮೊಲವು ನೆಮರು ಹಾಕಿದಾಗ್ಯೂ ಭಾಗವಾದ ಗೊರಸಿಲ್ಲದ ಕಾರಣ ಅಶುದ್ಧವಾಗಿದೆ. ಅದರ ಹಾಗೆಯೇ ವಾಚಾಳ ಶೆಟ್ಟಿಯು ನೆಮರು ಹಾಕುತ್ತಾನೆ, ಅದೇನಂದರೆ, ವಾಕ್ಯವನ್ನು ಬಾಯಿಯಲ್ಲಿ ಅಗಿದು ಜ್ಞಾನವನ್ನು ಹುಡುಕುತ್ತಾನೆ, ಆದರೆ ಅವನ ಗೊರಸು ಭಾಗವಾಗಿರುವದಿಲ್ಲ. ಅದೇನಂದರೆ, ಅವನು ಪಾಪಿಷ್ಠರ ಮಾರ್ಗದಿಂದ ಬೇರೆಯಾಗದೆ, ಮೊಲದಂತೆ ನಾಯಿ ಕರಡಿ ಮೊದಲಾದವುಗಳಿಗೆ ಸಮಾನವಾದ ಕಾಲುಗಳುಳ್ಳವನಾಗಿ ಅಶುದ್ಧವಾಗಿದ್ದಾನೆ.

ಕ್ರಿ. ಈ ವಚನಗಳಿಗೆ ತಕ್ಕ ಅಭಿಪ್ರಾಯ ಮಾಡದಿದ್ದೀರೆಂದು ಕಾಣುತ್ತದೆ. ಇನ್ನೊಂದು ಹೇಳುತ್ತೇನೆ. ಪೌಲನು ವಾಚಾಳರಾದ ಮನುಷ್ಯರಿಗೆ, ಧ್ವನಿಯಾಗುವ ಹಿತ್ತಾಳಿಯೂ ಘಣ ಘಣಿಸುವ ಕೈತಾಳಗಳೂ ಎಂಬ ಹೆಸರನ್ನಿಟ್ಟಿದ್ದಾನೆ. ಬೇರೆ ಸ್ಥಳದಲ್ಲಿ ಅವರು ಶಬ್ದ ಕೊಡುವ ನಿರ್ಜೀವವಸ್ತುಗಳಾಗಿದ್ದಾರೆಂದು ಹೇಳುತ್ತಾನೆ. ಅವರು ಜೀವವಿಲ್ಲದವರು ಯಾಕಂದರೆ, ಸುವಾರ್ತೆಯ ಸತ್ಯವಿಶ್ವಾಸವೂ ಕೃಪೆಯೂ ಅವರಲ್ಲಿ ಇರುವದಿಲ್ಲ. ಅವರ ಸಂಭಾಷಣೆ ಎಂಬ ಧ್ವನಿಯು ಒಬ್ಬ ದೂತನ ಶಬ್ದದ ಹಾಗಿದ್ದಾಗ್ಯೂ ಅವರು ಪರಲೋಕದ ರಾಜ್ಯದಲ್ಲಿ ಜೀವದ ಮಕ್ಕಳಾದವರೊಳಗೆ ಸೇರರು.

ವಿ. ಒಳ್ಳೇದು. ಮೊದಲು ಪಟ್ಟ ಸಂತೋಷಕ್ಕಿಂತ ಅವನ ಸಹವಾಸದಿಂದ ಈಗ ಪಡುವ ಅಸಹ್ಯವು ಹೆಚ್ಚಾಯಿತು. ಅವನನ್ನು ತಳ್ಳಿ ಬಿಡುವದಕ್ಕೆ ಏನು ಉಪಾಯ ಮಾಡುವ?

ಕ್ರಿ. ನಾನು ಒಂದು ಯುಕ್ತಿ ಹೇಳುತ್ತೇನೆ. ಅದನ್ನು ನೀವು ಮಾಡಿದರೆ ದೇವರು ಅವನ ಹೃದಯಕ್ಕೆ ತಗಲಿ ಅದನ್ನು ತಿರುಗಿಸ್ಯಾನು. ಇಲ್ಲದಿದ್ದರೆ ಅವನು ಸ್ವಲ್ಪದರಲ್ಲಿ ನಿಮ್ಮ ಸಹವಾಸಕ್ಕೆ ಬೇಸರ ಪಟ್ಟು ಹೋಗುವನು.

ವಿ. ಏನು ಮಾಡ ಬೇಕು? ಹೇಳಿ.

ಕ್ರಿ. ಅವನ ಬಳಿಗೆ ಹೋಗಿ ಭಕ್ತಿಯ ಬಲವನ್ನು ಕುರಿತು ಸಂಭಾಷಣೆ ಮಾಡಿರಿ. ಅದಕ್ಕೆ ಅವನು ಸಂದೇಹವಿಲ್ಲದೆ ಒಪ್ಪ್ಯಾನು. ಆ ಮೇಲೆ, ಭಕ್ತಿಯು ಅವನ ಹೃದಯದಲ್ಲಿಯಾಗಲಿ ಮನೆಯಲ್ಲಿಯಾಗಲಿ ನಡತೆಯಲ್ಲಿಯಾಗಲಿ ಪ್ರಸಿದ್ಧಿಯಾಗಿದೆಯೋ? ಎಂದು ಸ್ಪಷ್ಟವಾಗಿ ಕೇಳಿರಿ.

ತರುವಾಯ ವಿಶ್ವಾಸೈಯ್ಯನು ತಿರಿಗಿ ಮುಂದಕ್ಕೆ ಹೋಗಿ ವಾಚಾಳ ಶೆಟ್ಟಿಗೆ ಹೇಳಿದ್ದು,

ವಿ. ನಿಲ್ಲಿ; ಕೂಡಾ ಹೋಗೋಣ; ಕ್ಷೇಮವೋ? ಹ್ಯಾಗೋ?

ವಾ. ನಿಮ್ಮ ದಯದಿಂದ ಕ್ಷೇಮವೇ ಸರಿ. ಇಷ್ಟು ಹೊತ್ತಿನ ತನಕ ಒಳ್ಳೇ ಸಂಭಾಷಣೆಯಾಗುವದೆಂದು ನೆನಸಿದೆನು.

ವಿ. ನಿಮಗೆ ಮನಸ್ಸಿದ್ದರೆ ಈಗಾಗಲಿ. ಸಂಭಾಷಣೆಯನ್ನು ಆರಂಭಿಸುವದಕ್ಕೆ ನೀವು ಅಪ್ಪಣೆ ಕೊಟ್ಟದರಿಂದ ದೇವರಿಂದಾದ ಭಕ್ತಿಯು ಮನುಷ್ಯರ ಹೃದಯದಲ್ಲಿ ಇದ್ದರೆ ಅದು ಹ್ಯಾಗೆ ಪ್ರಸಿದ್ಧಿಯಾಗುತ್ತದೆಂಬ ಪ್ರಶ್ನೆ ಮಾಡುತ್ತೇನೆ.

ವಾ. ಹಾಗಾದರೆ ಕಾರ್ಯಗಳ ಬಲವನ್ನು ಕುರಿತು ಮಾತಾಡಬೇಕೆಂದು ತಿಳಿದು ಕೊಳ್ಳುತ್ತೇನೆ. ಆಗಲಿ, ಬಹು ಒಳ್ಳೇ ಪ್ರಶ್ನೆ ಕೇಳಿದಿರಿ. ಅದಕ್ಕೆ ಉತ್ತರ ಕೊಡ ಮನಸ್ಸಾಗಿದ್ದೇನೆ. ಸಂಕ್ಷೇಪವಾದ ಉತ್ತರವೇನಂದರೆ, ಮೊದಲು ದೇವಭಕ್ತಿಯು ಒಬ್ಬರ ಹೃದಯದಲ್ಲಿದ್ದರೆ ಅದರಿಂದ ಪಾಪಕ್ಕೆ ವಿರೋಧವಾಗಿ ದೊಡ್ಡ ಗದ್ದಲ ಉಂಟಾಗುವದು. ಎರಡನೇದು—

ವಿ. ತಾಳಿ, ತಾಳಿ, ನಿಮ್ಮ ಮಾತುಗಳನ್ನು ಒಂದೊಂದಾಗಿ ವಿಚಾರಿಸಿ ನೋಡುವ. ದೇವಭಕ್ತಿಯು ಹೃದಯದಲ್ಲಿ ಪಾಪದ ಹೇಸಿಗೆಯನ್ನು ಹುಟ್ಟಿಸುವದೆಂದು ಹೇಳ ಬೇಕಾದೀತಲ್ಲವೋ?

ವಾ. ಪಾಪಕ್ಕೆ ವಿರೋಧವಾದ ಗದ್ದಲಕ್ಕೂ ಹೇಸಿಗೆಗೂ ಹೆಚ್ಚು ಕಡಮೆ ಏನು?

ವಿ. ಬಹಳ ಹೆಚ್ಚು ಕಡಮೆ ಉಂಟು. ಒಬ್ಬನು ಯುಕ್ತಿಯಿಂದಲೇ ಪಾಪಕ್ಕೆ ವಿರೋಧವಾದ ಗದ್ದಲ ಮಾಡ್ಯಾನು, ಆದರೆ ಭಕ್ತಿಯಿಂದ ಅದನ್ನು ಅಸಂಹಿಸಿದರೆ, ಹೊರ್ತು ಅದನ್ನು ಹೇಸನು. ಅನೇಕರು ಪ್ರಸಂಗ ಮಾಡಿ ಪಾಪಕ್ಕೆ ವಿರೋಧವಾದ ಗದ್ದಲ ಮಾಡಿದ್ದಾಗ್ಯೂ ತಮ್ಮ ಹೃದಯಗಳಲ್ಲಿಯೂ ಮನೆಯಲ್ಲಿಯೂ ನಡತೆಯಲ್ಲಿಯೂ ಅದನ್ನು ಚನ್ನಾಗಿ ಆದರಿಸುತ್ತಾರೆ. ಯೋಸೇಫನನ್ನು ಪಾಪಕ್ಕೆ ಎಳದ ಸ್ತ್ರೀಯು ತಾನು ಬಹು ಶುದ್ಧಳೆಂದು ತೋರಿಸುವದಕ್ಕೆ ಘಟ್ಟಿಯಾಗಿ ಕೂಗಿದಾಗ್ಯೂ ಅವನ ಸಂಗಡ ದುಷ್ಟ ಕೆಲಸವನ್ನು ನಡಿಸುವದಕ್ಕೆ ಪೂರ್ಣ ಮನಸ್ಸಾಗಿದ್ದಳು. ತಾಯಿಯು ಮೊಲೆಯ ಕೂಸಿಗೆ ಬುದ್ಧಿಗೇಡಿಯೇ, ಹುಚ್ಚು ಮಗುವೇ ಎಂದು ಬೈದ ಮೇಲೆ ಅದನ್ನು ಅಪ್ಪಿ ಕೊಂಡು ಮುದ್ದಿಡುವ ಪ್ರಕಾರ ಕೆಲವರು ಪಾಪಕ್ಕೆ ವಿರೋಧವಾಗಿ ಗದ್ದಲ ಮಾಡುತ್ತಾರೆ.

ವಾ. ಮಾತಿನಲ್ಲಿ ನನ್ನನ್ನು ಶಿಕ್ಷಿಸಿ ಕೊಳ್ಳುತ್ತೀರೋ?

ವಿ. ಅಲ್ಲ, ಅಲ್ಲ, ತಪ್ಪಾಗದ ಹಾಗೆ ಮಾತ್ರ ನೋಡುತ್ತೇನೆ. ಆದರೆ ಮನುಷ್ಯರ ಹೃದಯದಲ್ಲಿ ಇರುವ ದೇವಭಕ್ತಿಗೆ ಎರಡನೇ ಗುರುತು ಏನು?

ವಾ. ಸುವಾರ್ತೆಯ ಮರ್ಮಗಳ ವಿಶೇಷವಾದ ತಿಳುವಿಕೆಯು ಎರಡನೇ ಗುರುತಾಗಿದೆ.

ವಿ. ಇದನ್ನು ಮೊದಲೇ ಹೇಳ ಬೇಕಾಗಿತ್ತು. ಆದರೆ ಮೊದಲು ಹೇಳಿದರೂ ಆ ಮೇಲೆ ಹೇಳಿದರೂ ತಪ್ಪೇ ಆಗಿದೆ. ಹ್ಯಾಗಂದರೆ, ತಮ್ಮ ಹೃದಯಗಳೊಳಗೆ ದೇವಭಕ್ತಿ ಇಲ್ಲದಿದ್ದಾಗ್ಯೂ ಸುವಾರ್ತೆಯ ಮರ್ಮಗಳ ಜ್ಞಾನವು ಬಹಳ ಇರ ಬಹುದು. ಒಬ್ಬನಿಗೆ ಸಂಪೂರ್ಣ ಜ್ಞಾನವಿದ್ದರೂ ಅವನು ಏನೂ ಇಲ್ಲದವನಾಗಿಯೂ ದೇವರ ಮಕ್ಕಳಲ್ಲಿ ಸೇರದವನಾಗಿಯೂ ಇರ ಬಹುದು. ಈ ಕಾರ್ಯಗಳನ್ನೆಲ್ಲಾ ತಿಳಿದಿದ್ದೀರೋ ಎಂದು ಯೇಸು ಕೇಳಿದ್ದಕ್ಕೆ ಶಿಷ್ಯರು ಹೌದೆಂದು, ಉತ್ತರ ಹೇಳಿದ ಮೇಲೆ, ಅವನು, ನೀವು ಅವುಗಳನ್ನು ಮಾಡಿದರೆ ಭಾಗ್ಯವಂತರೆಂದು ಹೇಳಿ, ತಿಳಿದಿರುವದರಲ್ಲಿ ಅಲ್ಲ, ಮಾಡುವದರಲ್ಲಿಯೇ ಭಾಗ್ಯ ಉಂಟೆಂದು ತೋರಿಸಿದನು. ಯಾಕಂದರೆ ತಮ್ಮ ಯಜಮಾನನ ಚಿತ್ತವನ್ನು ತಿಳಿದು ಮಾಡದೆ ಇರುವವರು ಇದ್ದಾರೆ. ದೇವದೂತನ ಜ್ಞಾನವು ಒಬ್ಬನಿಗೆ ಇದ್ದಾಗ್ಯೂ ಅವನು ಕ್ರಿಸ್ತನವನಾಗದೆ ಇರ ಬಹುದು. ಆದದರಿಂದ ಜ್ಞಾನವೆಂಬ ಲಕ್ಷಣವು ನಿಜವಾದದ್ದಲ್ಲ. ಜ್ಞಾನದಲ್ಲಿ ವಾಚಾಳರೂ ಗರ್ವಿಷ್ಟರೂ ಸಂತೋಷ ಪಡುತ್ತಾರೆ. ಮಾಡುವದರಲ್ಲಿ ದೇವರು ಆನಂದ ಪಡುತ್ತಾನೆ. ಜ್ಞಾನವಿಲ್ಲದ ಹೃದಯವು ಒಳ್ಳೇದಾಗಿರ ಬಹುದೆಂದು ನಾನು ಹೇಳುವದಿಲ್ಲ. ಯಾಕಂದರೆ ಜ್ಞಾನವಿಲ್ಲದ ಹೃದಯದಲ್ಲಿ ಸತ್ಯವಿಲ್ಲ. ಹೀಗಿರುವದರಿಂದ ಜ್ಞಾನದಲ್ಲಿ ಎರಡು ವಿಧ ಉಂಟು. ವ್ಯರ್ಥಜ್ಞಾನದಿಂದ ಹುಟ್ಟುವ ಜ್ಞಾನ ಒಂದು; ದೇವರ ಚಿತ್ತದ ಪ್ರಕಾರ ಪೂರ್ಣ ಮನಸ್ಸಿನಿಂದ ನಡೆಯುವದಕ್ಕೆ ಮನುಷ್ಯನನ್ನು ಪ್ರೇರೇಪಿಸುವಂಥ ವಿಶ್ವಾಸವೂ ಪ್ರೀತಿಯೂ ಉಳ್ಳಂಥ ಜ್ಞಾನವು ಒಂದು. ಇವುಗ

ಳಲ್ಲಿ ಮೊದಲನೇದು ವಾಚಾಳರಿಗೆ ಸಾಕು, ಆದರೆ ಎರಡನೇದು ನಿಜ ಕ್ರಿಸ್ತಿಯರಿಗೆ ಅವಶ್ಯವಾಗಿ ಬೇಕು. ನನಗೆ ಜ್ಞಾನವನ್ನು ಕೊಡು, ಆಗಲು ನಾನು ನಿನ್ನ ನ್ಯಾಯಪ್ರಮಾಣವನ್ನು ಕೈಕೊಳ್ಳುವೆನು; ಹೌದು ನನ್ನ ಸಂಪೂರ್ಣ ಹೃದಯದಿಂದ ಅದನ್ನು ಕೈಕೊಳ್ಳುವೆನು, ಎಂದು ಬರೆದಿರುವದಿಲ್ಲವೋ?

ವಾ. ತಿರಿಗಿ ಮಾತಿನಲ್ಲಿ ನನ್ನನ್ನು ಶಿಕ್ಕಿಸಿ ಕೊಳ್ಳುತ್ತೀರಿ. ಇದು ಉಪಯೋಗವಾಗಿರುವದಿಲ್ಲ.

ವಿ. ಆಗಲಿ ನಿಮಗೆ ಮನಸ್ಸಿದ್ದರೆ ಮನುಷ್ಯನ ಹೃದಯದಲ್ಲಿರುವ ದೇವಭಕ್ತಿಗೆ ಇನ್ನೊಂದು ಲಕ್ಷಣವನ್ನು ಹೇಳಿರಿ.

ವಾ. ನನಗೆ ಬೇಡ, ನಿಮ್ಮನ್ನು ಮೆಚ್ಚಿಸಲಾರೆನು.

ವಿ. ಹಾಗಾದರೆ ನಿಮಗೆ ಮನಸ್ಸಿಲ್ಲವಾದರೆ ನನಗೆ ಅಪ್ಪಣೆ ಕೊಟ್ಟೀರೊ?

ವಾ. ದಯ ಮಾಡ ಬಹುದು.

ವಿ. ಆತ್ಮದಲ್ಲಿರುವ ದೇವರ ಕೃಪೆಯಿಂದಾದ ಭಕ್ತಿಯ ತ್ರಾಣವು ಅದನ್ನು ಹೊಂದಿದವನಿಗೂ, ಅವನ ನೆರೆಯವರಿಗೂ, ಪ್ರತ್ಯಕ್ಷವಾಗುತ್ತದೆ.

ಹೊಂದಿದವನಿಗೆ ಪ್ರತ್ಯಕ್ಷವಾಗುವದು. ಹ್ಯಾಗಂದರೆ, ಅವನು ತನ್ನ ಸ್ವಭಾವವು ಬಹುಕೆಟ್ಟದ್ದೆಂದೂ, ತನಗೆ ವಿಶ್ವಾಸವಿಲ್ಲದ ಕಾರಣ ತಾನು ಮಹಾ ಪಾಪಿಷ್ಟನಾಗಿದ್ಧೇನೆಂದೂ ನೋಡಿ, ಯೇಸು ಕ್ರಿಸ್ತನಲ್ಲಿಡುವ ವಿಶ್ವಾಸದ ಮೂಲವಾಗಿ ದೇವರ ಸನ್ನಿಧಿಯಲ್ಲಿ ತನಗೆ ಕರುಣೆ ಶಿಕ್ಕದಿದ್ದರೆ ಆಜ್ಞೆ ನಿರ್ಣಯವಾಗುವದೆಂದು ತಿಳಿದು, ಪಾಪಕ್ಕೋಸ್ಕರ ದುಖ್ಖವೂ ನಾಚಿಕೆಯೂ ಪಟ್ಟು, ಜಗದ್ರಕ್ಷಕನ ವಾಕ್ಯವನ್ನು ಕೇಳಿ, ಆತನಿಗೆ ಜೀವಾಂತ್ಯದ ಪರ್ಯಂತರ ತನ್ನನ್ನು ಒಪ್ಪಿಸ ಬೇಕೆಂದು ನಿಶ್ಚಯಿಸಿ, ಈ ರಕ್ಷಕನಿಗೋಸ್ಕರವೇ ಆತ್ಮದಲ್ಲಿ ದಾಹಗೊಂಡು, ತನಗೆ ಕರುಣೆ ಉಂಟಾಯಿತೆಂದು ತಿಳಿದು ಕೊಂಡ ಮೇಲೆ ಸಂತೋಷ ಪಡುವನು. ತರುವಾಯ ಅವನು ರಕ್ಷಕನಲ್ಲಿಡುವ ವಿಶ್ವಾಸ ಬಲದ ಹೆಚ್ಚು ಕಡಮೆಗೆ ಅನುಸಾರವಾಗಿ ಅವನ

ಸಂತೋಷವೂ ಸಮಾಧಾನವೂ ಇರುವದು. ಒಬ್ಬ ಮನುಷ್ಯನ
ಲ್ಲಿ ಯತ್ನೈಸುವ ದೇವರ ಕೃಪೆಯು ಈ ಪ್ರಕಾರ ಪ್ರತ್ಯಕ್ಷವಾದಾ
ಗ್ಯ್ಯೊ ಅವನು ಇನ್ನು ತನ್ನಲ್ಲಿರುವ ಪಾಪಕ್ಕೋಸ್ಕರವೂ ಪಾಪದ ಸೇ
ವೆಯೊಳಗೆ ಕೆಟ್ಟು ಹೋದ ಬುದ್ಧಿಗೋಸ್ಕರವೂ ನಿಶ್ಚಯ ಮಾಡ
ಲಾರದೆ ದೇವರ ಕೃಪೆಯ ಯತ್ನಗಳು ತನ್ನಲ್ಲಿ ಮತ್ತೂ ಬಲವಾಗಿ
ರ ಬೇಕೆಂದು ಅಪೇಕ್ಷೆ ಪಡುತ್ತಾನೆ.

ಮನುಷ್ಯನ ಹೃದಯದಲ್ಲಿರುವ ದೇವರ ಕೃಪೆಯು ಕೆಲಸವು
ಬೇರೆ ಮನುಷ್ಯರಿಗೆ ಪ್ರತ್ಯಕ್ಷವಾಗುವದು ಹ್ಯಾಗಂದರೆ, ೧. ಕ್ರಿಸ್ತ
ನಲ್ಲಿ ವಿಶ್ವಾಸಿಸುವವರು ತಮ್ಮ ವಿಶ್ವಾಸವನ್ನು ಚಂಚಲವಿಲ್ಲದೆ ಅ
ರಿಕೆ ಮಾಡುತ್ತಾರೆ. ೨. ಆ ವಿಶ್ವಾಸಕ್ಕೆ ತಕ್ಕ ಪ್ರಕಾರ ಪರಿಶುದ್ಧ
ರಾಗಿ ಸಂಚರಿಸಿ, ತಮ್ಮ ಹೃದಯಗಳಲ್ಲಿಯೂ ಕುಟುಂಬದಲ್ಲಿಯೂ
ಪ್ರಪಂಚದಲ್ಲಿಯೂ ನಿಷ್ಕಳಂಕರಾಗಿದ್ದು, ಅಂತರಂಗವಾಗಿ ಸ್ವಂತ
ಹೃದಯದೊಳಗೆ ತಮ್ಮ ಪಾಪಗಳನ್ನೂ ಪಾಪ ಮಾಡಿದ ತಮ್ಮನ್ನೂ
ಹೇಸಿ, ತಮ್ಮ ಕುಟುಂಬದಲ್ಲಿ ದುರ್ನಡತೆಯನ್ನು ನಿಲ್ಲಿಸಿ, ವಂಚನೆ
ಯುಳ್ಳ ಮಾತಿನಿಂದಲ್ಲ, ವಿಶ್ವಾಸವೂ ಪ್ರೀತಿಯೂ ಉಳ್ಳ ವಿಧೇ
ಯತ್ವದಿಂದ, ವಾಕ್ಯದ ಅಧಿಕಾರಕ್ಕೆ ಒಳ ಬಿದ್ದು, ನಡೆಯುತ್ತಾರೆ.
ಈಗ ಹೇಳಿದ ಮಾತಿಗೆ ಏನಾದರೂ ಆತಂಕವಿದ್ದರೆ ಹೇಳ ಬೇಕು.
ಇಲ್ಲವಾದರೆ ಇನ್ನೊಂದು ಪ್ರಶ್ನೆ ಕೇಳುವದಕ್ಕೆ ನನಗೆ ಅಪ್ಪಣೆ ಕೊ
ಡಿರೈಯಾ.

ವಾ. ತರ್ಕ ಮಾಡುವದು ಅಲ್ಲ, ಕೇಳುವದು ನನಗೆ ಯೋ
ಗ್ಯವಾಗಿದೆ. ಎರಡನೇ ಪ್ರಶ್ನೆಯನ್ನು ನನಗೆ ತಿಳಿಸ ಬೇಕು.

ವಿ. ಅದು ಯಾವದಂದರೆ, ನಾನು ಈಗ ವಿವರಿಸಿದವುಗಳು
ನಿಮ್ಮಲ್ಲಿ ನಿಶ್ಚಯವೋ? ನೀವು ಹೀಗೆ ನಡೆಯುತ್ತೀರೋ? ಇಲ್ಲ
ವೇ ನಿಮ್ಮ ಭಕ್ತಿಯು ಕ್ರಿಯೆಯಲ್ಲಿಯೂ ಸತ್ಯದಲ್ಲಿಯೂ ಇರದೆ
ಮಾತಿನಲ್ಲಿಯೂ ನಾಲಿಗೆಯಲ್ಲಿಯೂ ಮಾತ್ರ ಇರುತ್ತದೆಯೋ?
ಎಂಬ ವಿಷಯದಲ್ಲಿ ನನಗೆ ಉತ್ತರ ಕೊಡ ಮನಸ್ಸಾಗಿದ್ದರೆ ಪರಮ
ದೇವರ ಸನ್ನಿಧಿಯಲ್ಲಿ ಸತ್ಯವಾದವುಗಳನ್ನೂ ನಿಮ್ಮ ಮನೋಭಾವ

ನೆಯಿಂದ ಸಾಕ್ಷಿ ಹೊಂದಿದವುಗಳನ್ನೂ ನನಗೆ ಹೇಳಿರಿ. ಯಾತ
ಕ್ಕಂದರೆ ತನ್ನನ್ನು ಪ್ರತಿಷ್ಠೆ ಮಾಡಿ ಕೊಳ್ಳುವವನಲ್ಲ ಕರ್ತನಿಂದ
ಪ್ರತಿಷ್ಠೆ ಮಾಡಿಸಿ ಕೊಂಡವನು ಮಾತ್ರ ಪರೀಕ್ಷಿತನಾಗಿದ್ಧಾನೆ. ಒ
ಬ್ಬನು ತಾನು ಪರೀಕ್ಷಿತನೆಂದು ಹೇಳಿ, ನಡತೆಯಿಂದಲೂ ನೆರೆಯ
ವರ ಸಾಕ್ಷಿಯಿಂದಲೂ ಅದು ಸುಳ್ಳೆಂದು ತೋರ ಮಾಡಿದರೆ, ಮ
ಹಾ ದೋಷವಾಗಿದೆಯಲ್ಲವೋ?

ಈ ಮಾತಿಗೆ ವಾಚಾಳ ಶೆಟ್ಟಿಯು ಮೊದಲು ಸ್ವಲ್ಪ ನಾಚಿ,
ಕಡೆಗೆ ಧೈರ್ಯ ಹೊಂದಿ, ಹಾಗಾದರೆ ಅನುಭವವೂ ಮನೋಭಾವ
ನೆಯೂ ಎಂಬವುಗಳ ಮಾತನ್ನಾಡಿ ಹೇಳಿದವುಗಳ ವಿಷಯವಾಗಿ
ದೇವರನ್ನು ಸಾಕ್ಷಿಯಾಗಿ ಇಟ್ಟು ಕೊಳ್ಳುತ್ತೀರಿ. ಇಂಥ ಸಂಭಾ
ಷಣೆಯಾಗುವದೆಂದು ನಾನು ನೆನಸಲಿಲ್ಲ. ಅಂಥ ಪ್ರಶ್ನೆಗಳಿಗೆ ಉ
ತ್ತರ ಕೊಡ ಮನಸ್ಸಾಗಿರುವದಿಲ್ಲ. ಅದು ಅವಶ್ಯವೂ ಇಲ್ಲ. ನೀವು
ಉಪದೇಶಿಯಾದಿರೇನೊ? ಆದರೂ ನಾನು ನ್ಯಾಯಾಧಿಪತಿಗಾಗುವ
ಪ್ರಕಾರ ನಿಮಗೆ ಒಳಗಾಗೆನು. ಇಂಥ ಪ್ರಶ್ನೆಗಳನ್ನು ನನಗೆ ಯಾಕೆ
ಕೇಳುತ್ತೀರಿ? ಎಂದು ಹೇಳಿದನು.

ವಿ. ನೀವು ಮಾತಾಡುವದಕ್ಕೆ ಆತುರ ಪಡುವದನ್ನು ಕಂಡು
ಬರೀ ಮಾತೇ ಹೊರ್ತು ಇನ್ನೇನಾದರೂ ಇರುವದಿಲ್ಲವೆಂದು ನೆನ
ಸಿದೆನು. ಇದ್ದದ್ದು ಹೇಳಲೋ? ನಿಮ್ಮ ಭಕ್ತಿ ಮಾತಿನಲ್ಲೇ ಉಂ
ಟೆಂದೂ, ನಡತೆ ನೋಡಿದರೆ ನಿಮ್ಮ ಭಕ್ತಿ ಸುಳ್ಳಾಗಿ ಕಾಣುವದೆಂ
ದೂ, ಸಮಾಚಾರ ಕೇಳಿ ಇದ್ದೆನು. ನೀವು ಕ್ರಿಸ್ತನ ಸಭೆಯಲ್ಲಿ ಕ
ಳಂಕವಾಗಿದ್ಧೀರಿ. ನಿಮ್ಮ ದುಷ್ಟ ನಡತೆಯಿಂದ ಭಕ್ತಿಗೆ ದೋಷವಾ
ಗುತ್ತದೆ. ನಿಮ್ಮ ದುರ್ಮಾರ್ಗತನದಿಂದ ಈಗಲೇ ಕೆಲವರಿಗೆ ಅಭ್ಯಂ
ತರವಾಯಿತು. ಬಹು ಮಂದಿ ಅದಕ್ಕೋಸ್ಕರ ಕೆಟ್ಟು ಹೋಗುವ
ಗಂಡಾಂತರದಲ್ಲಿ ಇರುತ್ತಾರೆ. ನೀವು ಕುಡಿಯುವದನ್ನೂ ದ್ರವ್ಯಾಶೆ
ಯನ್ನೂ ಅಶುದ್ಧತ್ವವನ್ನೂ ದೂಷಣೆಯನ್ನೂ ಸುಳ್ಳನ್ನೂ ದು
ಷ್ಟರ ಸಹವಾಸವನ್ನೂ ಭಕ್ತಿಗೆ ಕೂಡಿಸುತ್ತೀರಿ ಎಂಬ ಈ ಮೊದ
ಲಾದ ಸಾಕ್ಷಿಯನ್ನು ನಿಮ್ಮ ವಿಷಯ ಕೇಳಿದ್ಧೇನೆ. ಹಾದರಗಿತ್ತಿ

ಯಿಂದ ಸ್ತ್ರೀಯರಿಗೆಲ್ಲಾ ನಾಚಿಕೆ ಅಲ್ಲವೇ? ಹಾಗೆ ನಿಮ್ಮಿಂದ ಎಲ್ಲಾ ಭಕ್ತರಿಗೆ ಅವಮಾನವಾಯಿತು.

ವಾ. ಕೇಳಿದ ಸುದ್ದಿಯನ್ನು ನಂಬಿ ನೀವು ನ್ಯಾಯ ತೀರಿಸುವದಕ್ಕೆ ಆತುರ ಪಡುವದರಿಂದ ನೀವು ಮುಂಗೋಪಿಯೂ ಅಳುಬುದುಕನೂ, ಸಂಭಾಷಣೆಗೆ ತಕ್ಕವರಲ್ಲವೆಂದು ಕಾಣುತ್ತದೆ. ನಾನು ಹೋಗುತ್ತೇನೆ.

ತರುವಾಯ ಕ್ರಿಸ್ತಿಯನು ಬಂದು ತನ್ನ ಸಹೋದರನಿಗೆ ಹೇಳಿದ್ದೇನಂದರೆ,

ಕ್ರಿ. ಮೊದಲೇ ನಾನು ಹೇಳಲಿಲ್ಲವೋ? ನಿಮ್ಮ ಮಾತುಗಳಿಗೂ ಅವನ ಆಶೆಗಳಿಗೂ ಒಪ್ಪಿಗೆಯಾಗುವದಿಲ್ಲ. ಅವನು ಬೇರೆ ನಡತೆ ಕಲಿತು ಕೊಳ್ಳುವದಕ್ಕಿಂತ ನಿಮ್ಮ ಸಹವಾಸವನ್ನು ಬಿಟ್ಟರೆ ವಾಸಿ ಎಂದು ನೆನಸಿ ಹೋದನು. ಹೋದರೆ ಚಿಂತೆ ಇಲ್ಲ. ಅವನಿಗೆಯೇ ನಷ್ಟವಾಯಿತು. ನಾವು ಅವನನ್ನು ತಳ್ಳ ಬೇಕಾಗಲಿಲ್ಲ. ಇದೇ ಬುದ್ಧಿ ಅವನಲ್ಲಿ ಇದ್ದರೆ ಅವನ ಸಹವಾಸವು ನಮಗೆ ಸರಿ ಇಲ್ಲ. ಅಂಥವರನ್ನು ಬಿಟ್ಟು ಪ್ರತ್ಯೇಕವಾಗಿರಿ ಎಂದು ಅಪೊಸ್ತಲನು ಹೇಳುತ್ತಾನೆ.

ವಿ. ಆದರೆ ಅವನ ಸಂಗಡ ಸ್ವಲ್ಪ ಸಂಭಾಷಣೆ ಮಾಡಿದ ಕಾರಣ ಸಂತೋಷ ಪಡುತ್ತೇನೆ. ನಾನು ಹೇಳಿದ್ದು ಅವನು ಒಂದು ವೇಳೆ ನೆನಪು ಮಾಡ್ಯಾನು. ಹ್ಯಾಗಾದರೂ ಅವನ ಸಂಗಡ ಸ್ಪಷ್ಟವಾಗಿ ಮಾತಾಡಿದದರಿಂದ ಅವನು ಕೆಟ್ಟು ಹೋದರೆ ಅವನ ರಕ್ತದ ಅಪರಾಧವು ನನ್ನ ಮೇಲೆ ಇರುವದಿಲ್ಲ.

ಕ್ರಿ. ಅವನ ಸಂಗಡ ಸ್ಪಷ್ಟವಾಗಿ ಮಾತಾಡಿ ಚನ್ನಾಗಿ ಮಾಡಿದಿರಿ. ಈಗಿನ ಕಾಲದಲ್ಲಿ ಯಥಾರ್ಥವಾಗಿ ಮಾತಾಡುವದು ಕಡಮೆಯಾದದರಿಂದ ಭಕ್ತಿಗೆ ಬಹಳ ಅಪಮಾನವಾಯಿತು. ಬರೀ ಮಾತಿನಿಂದ ಭಕ್ತಿಯುಳ್ಳವರಾಗಿ, ನಡತೆಯಲ್ಲಿ ವ್ಯರ್ಥರೂ ಭ್ರಷ್ಟರೂ ಆಗಿರುವ ವಾಚಾಳರಾದ ಹುಚ್ಚರು, ನಿಜ ಭಕ್ತರ ಸಹವಾಸದಲ್ಲಿ ಬಹಳವಾಗಿ ಸೇರಿ, ಪ್ರಪಂಚದವರಿಗೆ ಆಶ್ಚರ್ಯವನ್ನೂ, ಕ್ರಿಸ್ತ ಮತ

ಕ್ಕೆ ಕಳಂಕವನ್ನೂ, ಸತ್ಯ ಮನಸ್ಸುಳ್ಳವರಿಗೆ ದುಃಖವನ್ನೂ, ಹುಟ್ಟಿಸುತ್ತಾರೆ, ನೀವು ಮಾಡಿದ ಹಾಗೆಯೇ ಅಂಥವರಿಗೆ ಎಲ್ಲರೂ ಮಾಡಿದರೆ ಭಕ್ತಿಯನ್ನು ಹೆಚ್ಚಾಗಿ ಅನುಸರಿಸ್ಯಾರು, ಇಲ್ಲವೇ ಭಕ್ತರ ಸಹವಾಸವೇ ಬೇಡ, ಅಂದಾರು.

ಅದರ ಮೇಲೆ ವಿಶ್ವಾಸ್ಯೈಯ್ಯನು ಹೇಳಿದ್ದೇನಂದರೆ,

ಇವನೆನಿತುಗರ್ವಿಸಿದನಾದಿಯೊ
ಳಿವನುಬಲ್ಲವನಂತೆನುಡಿದನು
ಇವನಕೃತ್ಯವುಬರಿದೆಯೊಗಿಹುದದಪರೀಕ್ಷಿಸಲೂ ||
ರವಿಯುಪೂರ್ವದೆ.ಳುದಿಸೆಮುಂಜಿನ
ನಿವಹಭೂಮಿಯೊಳಿರದೆಬೇಗದಿ
ಸವೆದುಹೋಗುವ ತೆರದೊಳಾದುದುಬಯಲಭಕ್ತಿಯದು ||

ಈ ಪ್ರಕಾರ ಅವರು ಮಾರ್ಗದಲ್ಲಿ ಕಂಡದ್ದನ್ನು ಕುರಿತು ಸಂಭಾಷಿಸುತ್ತಾ ಕಾಡನ್ನು ದಾಟಿ ಹೋಗುವ ಹಾದಿಯಲ್ಲಿ ಹೊತ್ತು ಕಳೆದರು.

---

## 13. Vanity Fair.

## ೧೩. ಮಾಯಾಪುರದ ಸಂತೆಯು.

---

ಅವರು ಆ ಕಾಡಿನ ಅಂಚಿಕೆ ಬಂದಾಗ ವಿಶ್ವಾಸ್ಯೈಯ್ಯನು ಅಕಸ್ಮಾತ್ತಾಗಿ ಹಿಂದೆ ನೋಡಿ ಗುರುತು ಇರುವ ಒಬ್ಬ ಮನುಷ್ಯನು ಹಿಂದೆ ಬರುವದನ್ನು ಕಂಡು ಅಗೋ ಅಲ್ಲಿ ಬರುವವನು ಯಾರೆಂದು ಸ್ನೇಹಿತನನ್ನು ಕೇಳಿದನು. ಕ್ರಿಸ್ತಿಯನು ನೋಡಿ, ಅವನು ನನ್ನ ಪ್ರಿಯ ಸ್ನೇಹಿತನಾದ ಸುವಾರ್ತಿಕನೆಂದು ಹೇಳಿದಾಗ, ವಿಶ್ವಾಸ್ಯೈಯ್ಯನು, ಅವನು ನನಗೂ ಸ್ನೇಹಿತನಾಗಿರುತ್ತಾನೆ. ಇಕ್ಕಟ್ಟಾದ ಬಾಗಲಿನ ಮಾರ್ಗವನ್ನು ನನಗೆ ತೋರಿಸಿದವನು ಅವನೇ ಎಂದು ಹೇಳಿದನು. ಅಷ್ಟರೊಳಗೆ ಸುವಾರ್ತಿಕನು ಅವರನ್ನು ಕಲತು ವಂದಿಸಿ ಹೇಳಿದ್ದೇನಂದರೆ,

ಸು. ಅತ್ಯಂತ ಪ್ರಿಯರೇ, ನಿಮ್ಮ ಸಂಗಡ ಸಮಾಧಾನವಿರಲಿ.

ಕ್ರಿ. ಪ್ರಿಯ ಸುವಾರ್ತಿಕರೇ, ನೀವು ಬಂದದ್ದು ಒಳ್ಳೇದಾಯಿತು. ನಿಮ್ಮ ಮುಖವನ್ನು ಕಂಡು ನೀವು ಮುಂಚೆ ನನ್ನ ನಿತ್ಯವಾದ ಕ್ಷೇಮಕ್ಕಾಗಿ ಮಾಡಿದ ದಯವನ್ನೂ ಪಟ್ಟ ಕಷ್ಟವನ್ನೂ ನೆನಪು ಮಾಡಿ ಕೊಳ್ಳುತ್ತೇನೆ.

ವಿ. ಇಷ್ಟರಾದ ಸುವಾರ್ತಿಕರೇ, ನೀವು ಬಂದದ್ದು ಸಹಸ್ರ ಪಾಲಿಗೆ ಒಳ್ಳೇದು. ನಿಮ್ಮ ಸಹವಾಸವು ಬಡ ಪ್ರಯಾಣಸ್ಥರು ಅಪೇಕ್ಷಿಸ ಎಷ್ಟೋ ತಕ್ಕದ್ದಾಗಿದೆ.

ಸು. ಸ್ನೇಹಿತರೇ, ನಾವು ಕಡೇ ಸಾರಿ ಅಗಲಿದಂದಿನಿಂದ ನಿಮಗೆ ಏನೇನಾಯಿತು? ಏನು ಅನುಭವಿಸಿದಿರಿ? ಹ್ಯಾಗೆ ನಡೆದು ಕೊಂಡಿರಿ?

ಕ್ರಿಸ್ತಿಯನೂ ವಿಶ್ವಾಸ್ಯೈಯ್ಯನೂ ಪಯಣಗತಿಯಿಂದ ತಮಗೆ ಪ್ರಾಪ್ತಿಸಿದ ಸಮಸ್ತ ಸಂಗತಿಗಳನ್ನೂ ತಾವು ಈಗ ಇರುವ ಸ್ಥಳಕ್ಕೆ ಶೇರುವವರೆಗೆ ಸಂಭವಿಸಿದ ಪ್ರಯಾಸಗಳನ್ನೂ ತಿಳಿಸಿದ ಮೇಲೆ ಸುವಾರ್ತಿಕನು ಹೇಳಿದ್ದೇನಂದರೆ,

ಸು. ನೀವು ಕಷ್ಟವನ್ನನುಭವಿಸಿದ್ದರಿಂದಲ್ಲ, ಜಯಶಾಲಿಗಳಾದದರಿಂದಲೂ, ನಾನಾ ಬಗೆಯಾಗಿ ಬಲಹೀನರಾದಾಗ್ಯೂ ಇಂದಿನವರೆಗೂ ಮಾರ್ಗದಲ್ಲಿ ಸ್ಥಿರವಾಗಿದ್ದದರಿಂದಲೂ, ಅತಿ ಸಂತೋಷಪಡುತ್ತೇನೆ

ನನಗೋಸ್ಕರವೂ ನಿಮಗೋಸ್ಕರವೂ ಅತಿ ಸಂತೋಷ ಪಡುತ್ತೇನೆ. ಯಾಕಂದರೆ, ನಾನು ಬಿತ್ತಿದ್ಧೇನೆ. ನೀವು ಪೈರನ್ನು ಕೊಯಿದಿದ್ಧೀರಿ. ಬಿತ್ತುವವನೂ ಕೊಯ್ಯುವವನೂ ಇಬ್ಬರೂ ಕೂಡಾ ಸಂತೋಷಿಸುವ ದಿನವು ಬರುತ್ತದೆ. ನಿಶ್ಚಯವಾಗಿ ನೀವು ಕುಂದದೆ ಇದ್ದರೆ ತಕ್ಕ ಕಾಲದಲ್ಲಿ ಪೈರನ್ನು ಹೊಂದುವಿರಿ. ಕಿರೀಟವು ನಿಮ್ಮ ಮುಂದೆ ಅದೆ. ಅದು ನಿರ್ಲಯವಾದದ್ದು. ಹಾಗಾದರೆ ಅದು ಶಿಕ್ಕುವ ಹಾಗೆ ಓಡಿರಿ. ಆ ಕಿರೀಟಕ್ಕೋಸ್ಕರ ಹೊರಟವರಲ್ಲಿ ಕೆಲವರು ದೂರ ಹೋದ ಮೇಲೆ ಬೇರೆ ಕೆಲವರು ಬಂದು ಗೆದ್ದು ಮೊದಲಿನವರಿಗೆ ಶಿಕ್ಕದ

ಹಾಗೆ ಮಾಡುತ್ತಾರೆ. ಆದದರಿಂದ ನೀವು ನಿಮಗಿದ್ದದ್ದನ್ನು ಸ್ಥಿರವಾಗಿ ಕೈಕೊಂಡು ಮತ್ತ್ಯಾರೂ ಅದನ್ನು ಕಸಕೊಳ್ಳದ ಹಾಗೆ ನೋಡಿರಿ. ನೀವು ಇನ್ನೂ ಸೈತಾನನ ಎಸೆಗೆ ತಪ್ಪಲಿಲ್ಲ. ಪಾಪಕ್ಕೆ ವಿರೋಧವಾಗಿ ರಕ್ತ ಬರುವ ವರೆಗೂ ಎದುರಿಸಲಿಲ್ಲ. ನೀವು ರಾಜ್ಯವನ್ನು ನಿತ್ಯ ನೆನಸಿಕೊಂಡು ಕಾಣ ಕೂಡದ ಕಾರ್ಯಗಳ ವಿಷಯವಾಗಿ ದೃಢ ವಿಶ್ವಾಸದಿಂದ ಇರಿ. ಇಹಲೋಕಕ್ಕೆ ಸಂಬಂಧವಾದದ್ದು ಒಂದಾದರೂ ನಿಮ್ಮೊಳಗೆ ಪ್ರವೇಶಿಸದಿರಲಿ. ಮುಖ್ಯವಾಗಿ ಸಕಲ ಕಾರ್ಯಗಳಿಗಿಂತ ಕಪಟವೂ ಮಹಾ ಕೆಟ್ಟವೂ ಆಗಿರುವ ನಿಮ್ಮ ಹೃದಯಗಳನ್ನೂ ಅವುಗಳ ಆಶೆಗಳನ್ನೂ ಚನ್ನಾಗಿ ನೋಡಿ ಕೊಂಡು ನಿಮ್ಮ ಮುಖಗಳನ್ನು ಚಕ್ಕಮುಕ್ಕೆ ಕಲ್ಲಿನ ಹಾಗೆ ಮಾಡಿರಿ. ಪರಲೋಕ ಭೂಲೋಕಗಳಲ್ಲಿರುವ ಸಕಲವಾದ ಶಕ್ತಿಯು ನಿಮ್ಮ ಸಹಾಯಕ್ಕಾಗಿರುವದು.

ಅವನು ಹೇಳಿದ ಬುದ್ಧಿಗೆ ಕ್ರಿಸ್ತಿಯನು ಮೆಚ್ಚಿ ಇನ್ನು ಮೇಲೆ ಬರುವ ಮಾರ್ಗಕ್ಕೋಸ್ಕರ ತಮಗೆ ಇನ್ನೂ ಉಪದೇಶಿಸ ಬೇಕೆಂದು ಬೇಡಿ ಕೊಂಡು, ನೀವು ಪ್ರವಾದಿಯಾಗಿದ್ಧೀರೆಂದು ಬಲ್ಲೆವು, ಇನ್ನು ಮೇಲೆ ಆಗುವ ಕಾರ್ಯಗಳನ್ನು ನಮಗೆ ತಿಳಿಸಿ ಅವುಗಳನ್ನು ಎದುರಿಸಿ ಜಯಿಸುವ ಉಪಾಯವನ್ನು ನೀವೇ ಹೇಳ ಬೇಕೆಂದು ಬಿನ್ನೈಸಿದ್ದಕ್ಕೆ ವಿಶ್ವಾಸ್ಯೈಯ್ಯನು ಸಮ್ಮತಿಸಿದಾಗ ಸುವಾರ್ತಿಕನು ಹೇಳಿದ್ದು—

ಸು. ಪ್ರಿಯ ಮಕ್ಕಳೇ, ಅನೇಕ ಹಿಂಸೆಗಳಿಂದ ನೀವು ದೇವರ ರಾಜ್ಯದಲ್ಲಿ ಪ್ರವೇಶಿಸ ಬೇಕಾಗಿದೆ ಎಂದೂ, ಪಟ್ಣ ಪಟ್ಣದಲ್ಲಿ ಸಂಕೋಲೆಗಳೂ ಹಿಂಸೆಗಳೂ ನಿಮಗೋಸ್ಕರ ಸಿದ್ಧವಾಗಿವೆ ಎಂದೂ, ಅವುಗಳಲ್ಲಿ ಒಂದನ್ನಾದರೂ ಅನುಭವಿಸದೆ ನೀವು ದೂರ ಪ್ರಯಾಣವನ್ನು ಮಾಡಲಾರಿರೆಂದೂ, ಸುವಾರ್ತೆಯ ಸತ್ಯ ವಾಕ್ಯಗಳಿಂದ ತಿಳಿದು ಕೊಂಡಿದ್ಧೀರಿ. ನಿಮ್ಮ ವಿಷಯವಾದ ಈ ಸಾಕ್ಷಿಯು ಸತ್ಯವೆಂದು ಈಗ ಸ್ವಲ್ಪ ಕಂಡಿದ್ಧೀರಿ. ಇನ್ನು ಮೇಲೆ ಹೆಚ್ಚಾಗಿ ಕಾಣುವಿರಿ. ಈಗ ಕಾಡಿನ ಅಂಚಿಗೆ ಬಂದಿರಿ. ಆದದರಿಂದ ಸ್ವಲ್ಪ ಕಳದ ಮೇಲೆ ನಿಮ್ಮ ಮುಂದೆ ಕಾಣುವ ಪಟ್ಣಕ್ಕೆ ಹೋಗುವಿರಿ. ಆ ಪಟ್ಣದೊಳಗೆ ಶತ್ರುಗಳು ನಿಮ್ಮನ್ನು ತೊಂದರೆ ಪಡಿಸಿ ನಿಮ್ಮನ್ನು ಕೊಲ್ಲು

ವ ಹಾಗೆ, ಬಹಳ ಪ್ರಯತ್ನ ಮಾಡುವರು. ನಿಮ್ಮಲ್ಲಿ ಒಬ್ಬನಾಗಲಿ ಇಬ್ಬರಾಗಲಿ ನೀವು ಹೇಳುವ ಸಾಕ್ಷಿಗೆ ರಕ್ತ ಚಲ್ಲಿ ಮುದ್ರೆ ಹಾಕ ಬೇಕು. ಹ್ಯಾಗಾದರೂ ಮರಣದ ಪರಿಯಂತರ ಸ್ಥಿರವಾಗಿರಿ. ಆಗ ಲು ಅರಸನು ನಿಮಗೆ ಜೀವದ ಕಿರೀಟವನ್ನು ಕೊಡುವನು. ಅಲ್ಲಿ ಸಾಯುವವನು ಒಂದು ವೇಳೆ ಬಹಳ ನೊಂದು ದುರ್ಮರಣವನ್ನು ಹೊಂದಿದರೂ, ಪರಲೋಕದಲ್ಲಿ ಮೊದಲನೆಯವನಾಗಿ ಶೇರುವದ ರಿಂದ ಉಳಿದ ಪ್ರಯಾಣದಲ್ಲಿ ಮತ್ತೊಬ್ಬನಿಗಾಗುವ ಅನೇಕ ಉಪ ದ್ರಗಳಿಗೆ ತಪ್ಪಿ ಹೋಗುವದರಿಂದ ಜತೆಗಾರನಿಗಿಂತ ಸುಖಿಯಾಗಿ ರುವನು. ಹೀಗಿರುವದರಿಂದ ನೀವು ಪಟ್ಣದಲ್ಲಿ ಪ್ರವೇಶಿಸಿ ನಾನು ಹೇ ಳಿದ ಹಾಗೆ ಆಗುವದನ್ನು ಕಂಡರೆ ಸ್ನೇಹಿತನಾದ ನನ್ನನ್ನು ನೆನಪು ಮಾಡಿ, ಧೈರ್ಯವಾಗಿದ್ದು, ನಿಮ್ಮ ಆತ್ಮಗಳ ಸಂರಕ್ಷಣೆಯನ್ನು ನಂಬಿಕೆಯುಳ್ಳ ಸೃಷ್ಟಿಕರ್ತನಾದ ದೇವರಿಗೆ ಸತ್ಕ್ರಿಯೆಗಳೊಂ ದಿಗೆ ಒಪ್ಪಿಸಿರಿ.

ತರುವಾಯ ನಾನು ಕನಸಿನಲ್ಲಿ ಕಂಡದ್ದೇನಂದರೆ, ಅವರು ಕಾ ಡಿನಿಂದ ಹೊರಟಾಗಲೇ ಮುಂದೆ ಇರುವ ಮಾಯಾಪುರವೆಂಬ ಪ ಟ್ಣವನ್ನು ಕಂಡರು. ಆ ಪಟ್ಣದೊಳಗೆ ಮಾಯವೆಂಬ ಸಂತೆಯು ಪ್ರತಿ ದಿನವೂ ಆಗುತ್ತದೆ. ಆ ಪಟ್ಣವು ಮಾಯಕ್ಕಿಂತ ಹೀನವಾಗಿ ರುವದರಿಂದಲೂ, ಅದಕ್ಕೆ ಬಂದು ಕ್ರಯ ವಿಕ್ರಯವಾಗುವ ವ್ಯಾಪಾ ರವೆಲ್ಲಾ ಮಾಯವಾಗಿರುವದರಿಂದಲೂ, ಆ ಸಂತೆಗೆ ಮಾಯಾಸಂತೆ ಎಂಬ ಹೆಸರುಂಟಾಯಿತು. ಆ ಸಂತೆಯು ಹೊಸದ್ದಲ್ಲ, ಅನಾದಿ ಯಾದದ್ದು. ಅದು ಉಂಟಾದ ಚರಿತ್ರೆಯನ್ನು ವಿವರಿಸುತ್ತೇನೆ. ಹೆ ಚ್ಚು ಕಡಮೆ ಐದು ಸಾವಿರ ವರುಷಗಳ ಹಿಂದೆ ಸಜ್ಜನರಾದ ಈ ಇಬ್ಬರ ಹಾಗಿರುವ ಪ್ರಯಾಣಸ್ಥರು ಪರಲೋಕ ಪಟ್ಣಕ್ಕೆ ಹೋಗ ಲಿಕ್ಕಿರಲಾಗಿ ಆ ಪರಲೋಕ ಪಟ್ಣಕ್ಕೆ ಹೋಗುವ ಮಾರ್ಗವು ಈ ಮಾಯಾಪುರದ ಮೇಲೆ ಹೋಗುತ್ತದೆಂದು ತಿಳಿದು, ಮಾರಿಯೂ ಶಿವನೂ ಗಣೇಶನೂ ಮೊದಲಾದವರು ಸಕಲವಾದ ಮಾಯದ ವ್ಯಾ ಪಾರವಾಗುವ ಪ್ರತಿ ದಿನದ ಸಂತೆಯನ್ನು ತಮ್ಮ ಜತೆಗಾರರ ಸಹಾ

ಯದಿಂದ ಇದರೊಳಗೆ ಸ್ಥಾಪಿಸಿದರು. ಆದಕಾರಣ ಮನೆ ಭೂಮಿ
ಉದ್ಯೋಗ ಮಾನ ಚಾಕರಿ ಶೀಮೆ ರಾಜ್ಯ ಭೋಗ ಸಂಭ್ರಮ ಸ
ಕಲ ವಿಧವಾದ ಉಲ್ಲಾಸ ಮೊದಲಾದವುಗಳೂ, ಮತ್ತು ಸೂಳೆಯ
ರೂ ಕುಂಟಲಗಿತ್ತಿಯರೂ ಹೆಂಗಸರೂ ಗಂಡಸರೂ ಮಕ್ಕಳೂ ಯ
ಜಮಾನರೂ ದಾಸರೂ ಶರೀರಗಳೂ ಆತ್ಮಗಳೂ ಬೆಳ್ಳಿಯೂ ಭಂ
ಗಾರವೂ ಮುತ್ತುಗಳೂ ರತ್ನಗಳೂ ಮುಂತಾಗಿ ಈ ಸಂತೆಯ
ಲ್ಲಿ ಕ್ರಯ ವಿಕ್ರಯವಾಗುತ್ತವೆ. ಶಿಕ್ಕದೆ ಇರುವದು ಒಂದೂ ಇ
ಲ್ಲ. ಇದಲ್ಲದೆ ಈ ಸಂತೆಯಲ್ಲಿ ಗಾರಡಿಗಾರರೂ ಜೂಜುಗಾರರೂ
ಹಾಸ್ಯಗಾರರೂ ಮೋಸಗಾರರೂ ಕಳ್ಳರೂ ಈ ಮೊದಲಾದದ್ದನ್ನೆಲ್ಲಾ
ಪ್ರತಿ ದಿವಸವು ನೋಡ ಬಹುದು. ವಿಶೇಷವಾಗಿ ಕಳ್ಳತನಗಳೂ
ನರಹತ್ಯಗಳೂ ಜಾರತ್ವಗಳೂ ಸುಳ್ಳುಪ್ರಮಾಣಗಳೂ ಮುಂತಾದ
ಚಮತ್ಕಾರಗಳನ್ನು ಹಣ ಕೊಡದೆ ಕಾಣ ಬಹುದು.

ಅದಲ್ಲದೆ ಬೇರೆ ಪಟ್ಣಗಳಲ್ಲಿ ಇದ್ದ ಹಾಗೆ ಇದರಲ್ಲಿಯೂ ಸರ
ಕುಗಳ ವಿಶೇಷಕ್ಕೆ ಅನುಸಾರವಾಗಿ ಬೇರೆ ಬೇರೆ ಹೆಸರುಳ್ಳ ಬೀದಿ
ಗಳವೆ. ಆಯಾ ಬೀದಿಗಳಲ್ಲಿ ಆಯಾ ಸರಕುಗಳು ಸುಲಭವಾಗಿ
ಶಿಕ್ಕುತ್ತವೆ. ಆ ಪಟ್ಣದ ಮುಖ್ಯವಾದ ಬೀದಿಗಳು ಯಾವವಂದರೆ;
ಬ್ರಾಹ್ಮಣರ ಬೀದಿ, ಮುಸಲಮಾನರ ಬೀದಿ, ಲಿಂಗವಂತರ ಬೀದಿ,
ಈ ಮೊದಲಾದವುಗಳೇ. ಇವುಗಳಲ್ಲಿ ಬಹಳ ವ್ಯಾಪಾರ ನಡಿಯು
ತ್ತವೆ. ಆದರೆ ಬೇರೆ ಬೇರೆ ಸಂತೆ ಸ್ಥಳಗಳಲ್ಲಿ ಬೇರೆ ಬೇರೆ ಜೀನ
ಸುಗಳು ಮುಖ್ಯ ವ್ಯಾಪಾರವಾಗಿ ನಡಿಯುವ ಪ್ರಕಾರ ಇಲ್ಲಿ ಭಂಗಾರ
ಬೆಳ್ಳಿ ಲೋಹ ಮರ ಕಲ್ಲು ಮುಂತಾದವುಗಳಿಂದ ಮಾಡಲ್ಪಟ್ಟ ವಿಗ್ರ
ಹಗಳ ವ್ಯಾಪಾರ ವಿಶೇಷವಾಗಿ ನಡಿಯುತ್ತದೆ. ಅಲ್ಲಿ ಬಡವರು
ಕ್ರಯಕ್ಕೆ ತೆಗೆದು ಕೊಳ್ಳುವ ದುಡ್ಡಿನ ವಿಗ್ರಹಗಳು ಬೈಲು ಸಂತೆಗ
ಳಲ್ಲಿ ಇರುತ್ತವೆ. ಅರಸರು ಹರಿಕೆಯಾಗಿ ಕೊಡ ತಕ್ಕ ಲಕ್ಷ ರೂ
ಪಾಯಿ ಕ್ರಯದ ವಿಗ್ರಹಗಳು ಸೊನಗಾರರ ಅಂಗಡಿಗಳಲ್ಲಿ ಹೊ
ಳೆಯುತ್ತವೆ.

ನಾನು ಹೇಳಿದ ಹಾಗೆ ಪರಲೋಕ ಪಟ್ಟಣಕ್ಕೆ ಹೋಗುವ ಮಾರ್ಗವು ಈ ಸಂತೆ ಇರುವ ಪಟ್ಟಣದಿಂದ ಹಾದು ಹೋಗುತ್ತದೆ. ಈ ಪಟ್ಟಣವನ್ನು ದಾಟದೆ ಪರಲೋಕ ಪಟ್ಟಣದಲ್ಲಿ ಸೇರ ಮನಸ್ಸುಳ್ಳವನು ಪ್ರಪಂಚವನ್ನು ಬಿಟ್ಟು ಹೋಗ ಬೇಕಾದೀತು. ಅರಸರ ಅರಸನು ಈ ಲೋಕದಲ್ಲಿ ಸಂಚರಿಸಿದಾಗ ಸಂತೆಯ ಕಾಲದಲ್ಲಿ ಈ ಪಟ್ಟಣದಲ್ಲಿ ಹೊಕ್ಕು ಸ್ವದೇಶಕ್ಕೆ ಹೋದನು. ಮತ್ತು ಸಂತೆಯ ಮುಖ್ಯಸ್ಥನಾದ ಸೈತಾನನು ತನ್ನ ಮಾಯಾ ವ್ಯಾಪಾರಗಳನ್ನು ಕೊಂಡು ಕೊಳ್ಳ ಬೇಕೆಂದು ಅವನಿಗೆ ಹೇಳಿ ಪಟ್ಟಣದಿಂದ ಹಾದು ಹೋಗುವ ಮಾರ್ಗದಲ್ಲಿ ತನಗೆ ನಮಸ್ಕಾರ ಮಾಡಿದರೆ ಸಂತೆ ಪಟ್ಟಣ ರಾಜ್ಯ ಇವುಗಳ ಅಧಿಕಾರವನ್ನು ನಿನಗೆ ಒಪ್ಪಿಸುವೆನೆಂದು ಮಾತು ಕೊಟ್ಟ ಹಾಗೆ ಕಾಣುತ್ತದೆ. ಹೌದು, ಅವನು ಮಹಾ ಪುರುಷನಾಗಿರುವದರಿಂದ ಸೈತಾನನು ಅವನನ್ನು ಬೀದಿ ಬೀದಿಗಳಲ್ಲಿ ತಿರುಗಿಸಿ, ಮತ್ತು ಈ ಲೋಕದ ರಾಜ್ಯಗಳನ್ನೆಲ್ಲಾ ತೋರಿಸಿ, ಸ್ತೋತ್ರಕ್ಕೆ ತಕ್ಕವನಾದ ಅವನನ್ನು ಆ ಮಾಯಾ ವ್ಯಾಪಾರಗಳಲ್ಲಿ ಕೆಲವು ಕೊಂಡು ಕೊಳ್ಳುವ ಹಾಗೆ ಮೋಸ ಗೊಳ್ಳಿಸುವ ಪ್ರಯತ್ನದಲ್ಲಿ ಇದ್ದನು. ಆದರೆ ಅವನು ಆ ವ್ಯಾಪಾರದ ಮೇಲೆ ಎಷ್ಟು ಮಾತ್ರವೂ ಮನಸ್ಸು ಇಡದೆ ಒಂದು ಕಾಸಾದರೂ ವೆಚ್ಚ ಮಾಡದೆ ಪಟ್ಟಣದಿಂದ ಹೊರಟು ಹೋದನು. ಹೀಗಿರುವದರಿಂದ ಆ ಸಂತೆಯು ಬಹು ಒಳ್ಳೇದೂ, ಆದಿಯಿಂದ ಇದ್ದದ್ದೂ, ಬಹಳ ದೊಡ್ಡದೂ, ಆಗಿದೆ.

ಪ್ರಯಾಣಸ್ಥರಾದ ಕ್ರಿಸ್ತಿಯನೂ ವಿಶ್ವಾಸ್ಯೈಯ್ಯನೂ ಪಯಣಗತಿಯಿಂದ ಆ ಸಂತೆ ದಾಟಿ ಹೋಗ ಬೇಕೆಂದಿದ್ದಾಗ ಅದರಲ್ಲಿರುವ ಜನರೆಲ್ಲಾ ಆಶ್ಚರ್ಯ ಪಟ್ಟರು. ಅವರಿಗೋಸ್ಕರ ಪಟ್ಟಣದಲ್ಲಿ ಬಹು ಗುಲ್ಲು ಉಂಟಾಯಿತು. ಆ ಗದ್ದಲಕ್ಕೆ ಕೆಲವು ಕಾರಣಗಳು ಇದ್ದವು. ಅವು ಯಾವವಂದರೆ,

೧. ಸಂತೆಯಲ್ಲಿ ವ್ಯಾಪಾರ ಮಾಡುವವರೆಲ್ಲರಿಗೆ ಉಂಟಾದ ವಸ್ತ್ರಕ್ಕೆ ಸಮಾನವಾಗದ ವಸ್ತ್ರವನ್ನು ಪ್ರಯಾಣಸ್ಥರು ಹೊದ್ದುಕೊಂಡು ಬೊಟ್ಟು ಜುಟ್ಟು ಜನಿವಾರವಿಲ್ಲದವರಾಗಿ ಬಂದರು. ಆದ

ದರಿಂದ ಸಂತೆಯವರು ಅವರನ್ನು ನೋಡಿ ಬಹಳ ಆಶ್ಚರ್ಯ ಪಟ್ಟು ಕೆಲವರು ಅವರು ಪೈತ್ಯಗಾರರೆಂದೂ, ಕೆಲವರು ಅವರು ಹುಚ್ಚರೆಂದೂ, ಕೆಲವರು ಅವರು ಜಾತಿಭ್ರಷ್ಟರೆಂದೂ ಹೇಳಿದರು.

೨. ಅವರ ವಸ್ತ್ರಕ್ಕೆ ಜನರು ಆಶ್ಚರ್ಯ ಪಟ್ಟ ಪ್ರಕಾರ ಮಾತಿಗೂ ಆಶ್ಚರ್ಯ ಪಟ್ಟರು. ಯಾಕಂದರೆ ಅವರ ಮಾತು ಕಾನಾನ ದೇಶದ ಭಾಷೆಯಾಗಿತ್ತು. ಆದರೆ ಸಂತೆಯಲ್ಲಿ ಕೊಟ್ಟು ಕೊಳ್ಳುವ ಜನರು ಪ್ರಪಂಚ ದೇಶದ ಭಾಷೆ ಆಡುತ್ತಿದ್ದರು. ಹೀಗಿರುವದರಿಂದ ಒಬ್ಬರಿಗೊಬ್ಬರು ಅನ್ಯರಾಗಿ ತೋರಿದರು. ಅವರ ಭಾಷೆ ಇವರಿಗೆ ತಿಳಿಯದು. ಇವರ ಭಾಷೆ ಅವರಿಗೂ ತಿಳಿಯದು.

೩. ಆ ವ್ಯಾಪಾರಸ್ಥರು ಹೆಚ್ಚಾಗಿ ಆಶ್ಚರ್ಯ ಪಟ್ಟ ಕಾರಣವೇನಂದರೆ, ಆ ಪ್ರಯಾಣಸ್ಥರು ಅವರ ವ್ಯಾಪಾರಗಳನ್ನೆಲ್ಲಾ ಅತಿ ಅಲ್ಪವೆಂದು ಎಣಿಸಿ, ಅವುಗಳನ್ನು ಎಷ್ಟು ಮಾತ್ರವು ನೋಡದೆ, ಕೊಂಡು ಕೊಳ್ಳ ಬೇಕೆಂದು ಹೇಳಿದರೆ ತಮ್ಮ ಕಿವಿಗಳಲ್ಲಿ ಬೆರಳಿಟ್ಟು, ನಮ್ಮ ಕಣ್ಣುಗಳು ಮಾಯವನ್ನು ನೋಡದ ಹಾಗೆ ಕಾಪಾಡೆಂದು ಕೂಗಿ, ಮೇಲಕ್ಕೆ ನೋಡಿ, ತಮ್ಮ ಸಂಚಾರವೂ ವ್ಯಾಪಾರವೂ ಪರಲೋಕದಲ್ಲಿ ಅದೆ ಎಂದು, ಸಂಜ್ಞೆ ಮಾಡುತ್ತಿದ್ದರು.

ಅವರು ನುಡಿಯುವದನ್ನು ಕೇಳಿ, ಹಾಸ್ಯದಿಂದ ಒಬ್ಬನು—ನಿಮಗೆ ಏನು ಬೇಕೆಂದು ಕೇಳಿದಾಗ, ಅವರು ನೆಟ್ಟ ದೃಷ್ಟಿಯಿಂದ—ಸತ್ಯವನ್ನು ಕೊಂಡು ಕೊಳ್ಳುತ್ತೇವೆಂದು ಉತ್ತರ ಕೊಡಲು, ಅವರನ್ನು ಹೆಚ್ಚಾಗಿ ತಿರಸ್ಕರಿಸುವದಕ್ಕೆ ಆಸ್ಪದವಾಯಿತು. ಕೆಲವರು ಹಾಸ್ಯ ಮಾಡಿ, ಕೆಲವರು ಬೈದು, ಕೆಲವರು ನಿಂದಿಸಿ, ಕೆಲವರು ಅವರನ್ನು ಹೊಡೆಯ ಬೇಕೆಂದು ಬೇರೆಯವರಿಗೆ ಆಲೋಚನೆಯನ್ನು ಹೇಳಿದರು. ಕಡೆಗೆ ಸಂತೆಯಲ್ಲಿ ದೊಡ್ಡ ಗುಬಾರು ಉಂಟಾಗಿ ಕೆಲಸವೆಲ್ಲಾ ನಿಂತು ಹೋಯಿತು. ಸಂತೆ ಸ್ಥಳದ ಮುಖ್ಯಸ್ಥನು ಈ ಸಮಾಚಾರವನ್ನು ಕೇಳಿ ಶೀಘ್ರವಾಗಿ ಇಳಿದು ಬಂದು ಸಂತೆಗೆ ಅಡ್ಡಿ ಮಾಡುವ ಈ ಮನುಷ್ಯರನ್ನು ವಿಚಾರಿಸ ಬೇಕೆಂದು ಹೆಚ್ಚಾದ ನಂಬಿಕೆಯುಳ್ಳ ಕೆಲವು ಮಂದಿ ಸ್ನೇಹಿತರಿಗೆ ಅಪ್ಪಣೆ ಕೊಟ್ಟನು.

ಈ ಪ್ರಕಾರ ಅವರು ಇವರನ್ನು, ನೀವು ಬಂದದ್ದು ಎಲ್ಲಿಂದ? ಹೋ
ಗುವದು ಎಲ್ಲಿಗೆ? ಈ ಅಪರೂಪ ವಸ್ತ್ರಗಳನ್ನು ಧರಿಸಿದ್ದು ಯಾಕೆ?
ಎಂದು ವಿಚಾರಿಸಲು, ಅವರು ಪ್ರತ್ಯುತ್ತರವಾಗಿ, ನಾವು ಈ ಲೋ
ಕದಲ್ಲಿ ಪ್ರಯಾಣಸ್ಥರೂ ಪರದೇಶಿಗಳೂ ಆಗಿದ್ದು ಮೇಲಿನ ಯೆ
ರೂಸಲೇಮೆಂಬ ಸ್ವದೇಶಕ್ಕೆ ಹೋಗುತ್ತೇವೆ. ನಮ್ಮನ್ನು ಬೈಯು
ವದಕ್ಕೂ ಪ್ರಯಾಣಕ್ಕೆ ಅಡ್ಡಿ ಮಾಡುವದಕ್ಕೂ ಈ ಊರಿನ ಜನರಿಗೆ,
ವ್ಯಾಪಾರಸ್ಥರಿಗೆ ಕೂಡಾ, ನಮ್ಮಿಂದ ಏನೂ ಅಪರಾಧ ನಡೆಯಲಿಲ್ಲ.
ಅವರು ನಿಮಗೇನು ವ್ಯಾಪಾರ ಬೇಕೆಂದು ಕೇಳಿದ್ದಕ್ಕೆ ಸತ್ಯವನ್ನು
ಕೊಂಡು ಕೊಳ್ಳುತ್ತೇವೆಂದು ಹೇಳಿದೆವು, ಅಂದರು. ಆದರೆ ವಿಚಾ
ರಿಸುವದಕ್ಕೆ ಇಟ್ಟ ಜನರು ಅವರು ಹೇಳಿದ್ದನ್ನು ನಂಬದೆ, ಅವರು
ಹುಚ್ಚು ಹಿಡಿದವರೂ, ಸಂತೆಯನ್ನೆಲ್ಲಾ ಗಲಿಬಿಲಿ ಮಾಡುವದಕ್ಕೆ
ಬಂದವರೂ, ಆಗಿದ್ದಾರೆಂದು ನಿಶ್ಚಯಿಸಿ, ಅವರನ್ನು ಹೊಡಿಸಿ,
ಕೆಸರು ಹಚ್ಚಿಸಿ, ಸಂತೆಯವರೆಲ್ಲರ ವಿನೋದಕ್ಕಾಗಿ ಪಂಜರದಲ್ಲಿ
ಹಾಕಿದರು. ಆ ಪಂಜರದೊಳಗೆ ಅವರು ಸ್ವಲ್ಪ ಹೊತ್ತು ಇದ್ದು
ಬಂದವರೆಲ್ಲರ ಹಾಸ್ಯಕ್ಕೂ ಹಗೆಗೂ ಗುರಿಯಾಗಿರಲು, ಆ ಸಂತೆ
ಯ ಯಜಮಾನನು ಅವರಿಗೆ ಸಂಭವಿಸಿದ್ದೆಲ್ಲಾದಕ್ಕೋಸ್ಕರ ನಗು
ತ್ತಿರಲು, ಅವರು ತಾಳ್ಮೆಯಿಂದಿದ್ದು ಬೈಯ್ಯುವವರನ್ನು ಬೈಯದೆ,
ಆಶೀರ್ವದಿಸುತ್ತಾ, ಕೆಟ್ಟ ಮಾತುಗಳನ್ನಾಡುವವರಿಗೆ ಒಳ್ಳೇ ಮಾತು
ಗಳನ್ನು ಹೇಳಿ, ಅಪಕಾರ ಮಾಡುವವರಿಗೆ ಉಪಕಾರವನ್ನು ಮಾಡು
ತ್ತಾ, ಇರುವದರಿಂದ, ಆ ಸಂತೆಯವರಲ್ಲಿ ಕೆಲವರು ಮಿಕ್ಕಾದವರಿಗಿಂ
ತ ಚನ್ನಾಗಿ ಪರೀಕ್ಷಿಸಿ, ಹಗೆ ಸ್ವಲ್ಪ ಆರಿಸಿ, ಎಡೆ ಬಿಡದೆ ಆ ಇ
ಬ್ಬರಿಗೆ ಉಪದ್ರ ಪಡಿಸುವ ನೀಚರನ್ನು ಹೆದರಿಸಿ, ಗದರಿಸಲಾರಂಭಿಸಿ
ದರು. ಅದಕ್ಕೆ ಅವರು ಕೋಪ ಮಾಡಿ, ಇವರ ಮೇಲೆ ಬಿದ್ದು,
ನೀವೂ ಪಂಜರದಲ್ಲಿರುವವರ ಹಾಗೆಯೇ ಇದ್ದೀರಿ. ಅವರಿಗೂ ನಿ
ಮಗೂ ಒಡಂಬಡಿಕೆ ಆಯಿತೆಂದು ಕಾಣುತ್ತದೆ. ಅವರಿಗಾದ ದಂಡ
ನೆ ನಿಮಗಾದರೆ ಒಳ್ಳೇದಾಗಿತ್ತು, ಅನ್ನಲಾಗಿ, ಇವರು, ಆ ಪಂಜರ
ದೊಳಗಿರುವ ಮನುಷ್ಯರು ಶಾಂತರೂ ಸ್ವಸ್ಥ ಬುದ್ಧಿಯುಳ್ಳವರೂ

ಯಾರಿಗಾದರೂ ಕೇಡನ್ನು ಮಾಡದಂಥವರೂ ಎಂಬ ಹಾಗೆ ಕಾಣು ತ್ತದೆ. ಸಂತೆಯೊಳಗೆ ವ್ಯಾಪಾರ ಮಾಡುವವರಲ್ಲಿ ಅನೇಕರು ಇವ ರಿಗಿಂತ ಪಂಜರದಲ್ಲಿ ಹಾಕಲ್ಪಡುವದಕ್ಕಾದರೂ ಕತ್ತೆ ಮೇಲೆ ಮೆರವ ಣಿಗೆ ಮಾಡಿಸಲ್ಪಡುವದಕ್ಕಾದರೂ ಪಾತ್ರರಾಗಿದ್ದಾರು, ಅಂದರು. ಹೀಗೆ ಪಂಜರದಲ್ಲಿರುವವರು ಬಹಳ ಬುದ್ಧಿಯಿಂದ ನಡೆದು ಕೊಂಡು ಮಾತಾಡುತ್ತಿರುವ ವೇಳೆಯಲ್ಲಿ ಆ ಉಭಯಪಕ್ಷದವರು ವಾಗ್ವಾದ ಮಾಡಿ, ಬಡಿದಾಡಿ, ಒಬ್ಬರಿಗೊಬ್ಬರು ಘಾಯ ಮಾಡಿ ಕೊಂಡದ ರಿಂದ ಸಂತೆಯಲ್ಲಿ ಉಂಟಾದ ಗದ್ದಲಕ್ಕೆ ಕಾರಣವಾದವರೆಂದು ಆ ದಿಕ್ಕಿಲ್ಲದ ಇಬ್ಬರು ತಿರಿಗಿ ನ್ಯಾಯಾಧಿಪತಿಗಳ ಬಳಿಗೆ ತರಲ್ಪಟ್ಟರು. ಇವರು ಅವರನ್ನು ಕನಿಕರವಿಲ್ಲದೆ ಹೊಡಿಸಿ, ಕಾಲುಗಳಿಗೆ ಕೋಳ ಹಾಕಿಸಿ, ಮತ್ತ್ಯಾರೂ ಅವರ ಗುಣಕ್ಕಾಗಿ ಮಾತಾಡಿ ಸಹಾಯ ಮಾಡದ ಹಾಗೆ ಎಲ್ಲರಿಗೂ ಹೆದರಿಸುವ ಬಗ್ಯೆ ಅವರನ್ನು ಸಂಕೋ ಲೆಗಳಿಂದ ಕಟ್ಟಿಸಿ ಬೀದಿ ಬೀದಿಯಲ್ಲಿ ತಿರುಗಾಡಿಸಿದರು.

ಆದರೆ ಕ್ರಿಸ್ತಿಯನೂ ವಿಶ್ವಾಸ್ಯೆಯ್ಯನೂ ಇನ್ನೂ ಅಧಿಕವಾದ ಬುದ್ಧಿಯಿಂದ ನಡೆದು ಕೊಂಡು ತಾವು ಪಡುವ ನಿಂದೆ ಅವಮಾನ ಗಳನ್ನು ಅಧಿಕವಾದ ಶಾಂತಿಯಿಂದ ತಾಳಿದ ಕಾರಣ ಸಂತೆಯ ಜನ ರಲ್ಲಿ ಕೆಲವರು ಅವರ ಪಕ್ಷದಲ್ಲಿ ಕೂಡಿದರು. ಆ ಕೂಡಿದವರಿಗಿಂತ ಲೆಖ್ಖವಿಲ್ಲದೆ ಇರುವ ಬೇರೆ ಪಕ್ಷದವರು ಇದನ್ನು ನೋಡಿ, ಅತಿ ರೌದ್ರ ಪಟ್ಟು, ಆ ಇಬ್ಬರೂ ಸಾಯ ಬೇಕೆಂದು ನಿಶ್ಚಯಿಸಿ, ಪಂ ಜರವಾಗಲಿ ಸಂಕೋಲೆಯಾಗಲಿ ಸಾಲದು, ಅವರು ನಡಸಿದ ಅಕ್ರ ಮಕ್ಕೋಸ್ಕರವೂ ಸಂತೆಯವರಿಗೆ ಮಾಡಿದ ಮೋಸಕ್ಕೋಸ್ಕರವೂ ಸಾಯಲೇ ಸಾಯ ಬೇಕೆಂದು ಹೇಳಿದರು.

ತರುವಾಯ ಅವರ ವಿಷಯ ಬೇರೆ ಅಪ್ಪಣೆಯಾಗುವ ಪ ರ್ಯಂತರ ತಿರಿಗಿ ಪಂಜರದಲ್ಲಿ ಇಟ್ಟು ಅವರ ಕಾಲುಗಳನ್ನು ಕೋ ಳಕ್ಕೆ ಹಾಕಿದರು.

ಆಗಲವರು ನಂಬಿಗೆಯುಳ್ಳ ಸ್ನೇಹಿತನಾದ ಸುವಾರ್ತಿಕನಿಂದ ಕೇಳಿದ ಮಾತುಗಳನ್ನು ನೆನಪು ಮಾಡಿ, ಅವನು ಮುಂತಿಳಿಸಿದ್ದೇ

ಸಂಭವಿಸಿತೆಂಬ ಆಲೋಚನೆಯಿಂದ ತಮಗೆ ಬಂದ ಕಷ್ಟದಲ್ಲಿ ಧೈ
ರ್ಯವಾಗಿದ್ದರು. ಮರಣವನ್ನು ತಾಳ ಬೇಕಾದವನಿಗೆ ಒಳ್ಳೇ ಗತಿ
ಯಾಗುತ್ತದೆಂದು ಒಬ್ಬರಿಗೊಬ್ಬರು ಆದರಿಸಲಾಗಿ, ಅವರಲ್ಲಿ ಒ
ಬ್ಬೊಬ್ಬನು ತನಗೆ ಮರಣ ಪ್ರಾಪ್ತಿಯಾಗ ಬೇಕೆಂದು ಕೋರಿದಾ
ಗ್ಯೂ ಸಕಲ ಕಾರ್ಯಗಳನ್ನು ಸರ್ವಜ್ಞಾನದಿಂದ ನಡಿಸುವ ದೇವ
ರಿಗೆ ತಮ್ಮನ್ನು ಒಪ್ಪಿಸಿ, ಹೊಸ ಅಪ್ಪಣೆ ಬರುವ ಪರ್ಯಂತರ ತಾ
ವು ಇದ್ದ ಸ್ಥಿತಿಯಲ್ಲೇ ಬಹು ಸಂತುಷ್ಟರಾಗಿದ್ದರು.

ಕಡೆಗೆ ತಕ್ಕ ಕಾಲವು ನೇಮಿಸಲ್ಪಟ್ಟ ಮೇಲೆ ಅವರ ನಿರ್ಣಯ
ಕ್ಕೋಸ್ಕರವಾದ ವಿಚಾರಣೆಗೆ ಆರಂಭವಾಯಿತು. ಆ ಕಾಲದಲ್ಲಿ
ಅವರು ತಮ್ಮ ವೈರಿಗಳ ಸನ್ನಿಧಿಯಲ್ಲಿ ನಿಲ್ಲಿಸಲ್ಪಟ್ಟು ತಮಗೆ ವಿ
ರೋಧವಾದ ದೂರನ್ನು ಕೇಳಿದರು. ನ್ಯಾಯಾಧಿಪತಿಗೆ ಉತ್ತಮ
ವಿರೋಧಿ ಎಂಬ ಹೆಸರು ಇತ್ತು. ಅವನ ಮುಂದೆ ಮಾಡಿದ ಫಿ
ರ್ಯಾದಿಗಳಲ್ಲಿ ಸ್ವಲ್ಪ ಹೆಚ್ಚು ಕಡಮೆ ಇದ್ದಾಗ್ಯೂ ಇಬ್ಬರ ಮೇ
ಲೆ ಇರುವ ದೂರಿನ ತಾತ್ಪರ್ಯ ಒಂದೇ. ಹ್ಯಾಗಂದರೆ,

೧. ಕ್ರಿಸ್ತಿಯನೂ ವಿಶ್ವಾಸ್ಯೈಯ್ಯನೂ ಇವರು ಈ ಸಂತೆಯ
ಲ್ಲಿ ಆಗುವ ವ್ಯಾಪಾರಗಳಿಗೆ ವಿರೋಧವಾಗಿ ಅಟಕಾವು ಮಾಡಿ
ದರು.

೨. ಇವರು ಈ ಊರಲ್ಲಿ ಗುಬಾರನ್ನು ಉಂಟು ಮಾಡಿದರು.

೩. ಇವರು ಮೋಸ ಮಾಡಿ ತಮ್ಮ ಹೊಸ ಮಾರ್ಗದಲ್ಲಿ ಜ
ನರನ್ನು ಶೇರಿಸಿದರು. ಈ ದುರ್ನಡತೆಗಳು ರಾಜನೀತಿಗೆ ವಿರೋಧ
ವಾದ ಕಾರಣ ಈ ಅಕ್ರಮವನ್ನು ನಡಿಸಿದವರಿಗೆ ತಕ್ಕ ದಂಡನೆ ಆಗ
ಬೇಕೆಂದು ಪ್ರಾರ್ಥಿಸುತ್ತೇವೆಂದು ಬರೆದಿತ್ತು.

ಅದಕ್ಕೆ ವಿಶ್ವಾಸ್ಯೈಯ್ಯನು—ಮೊದಲನೇದು, ಪರಾತ್ಪರನಿಗೆ
ವಿರೋಧವಾದವುಗಳನ್ನು ಮಾತ್ರ ನಾನು ವಿರೋಧಿಸಿದ್ದೇನೆ. ಎರ
ಡನೇದು, ಶಾಂತನಾದ ನಾನು ಗುಬಾರು ಎಬ್ಬಿಸಲಾರೆನು. ಮೂರ
ನೇದು, ನಮ್ಮ ಮಾರ್ಗದಲ್ಲಿ ಶೇರಿದವರು ನಾವು ಸತ್ಯವಂತರೂ
ನಿರಪರಾಧಿಗಳೂ ಆಗಿದ್ದೇವೆಂದು ನೋಡಿ, ದುರ್ಮಾರ್ಗ ಬಿಟ್ಟು

ಸನ್ಮಾರ್ಗದಲ್ಲಿ ಸೇರಿದವರಾಗಿದ್ದಾರೆ. ಇದಲ್ಲದೆ ನೀವು ಹೇಳುವ ರಾಜನು ನಮ್ಮ ಕರ್ತನ ಶತ್ರುವಾದ ಸೈತಾನನಾಗಿರುವದರಿಂದ ಅವನಿಗೂ ಅವನ ರಾಜನೀತಿಗೂ ಅವನ ದೂತರೆಲ್ಲರಿಗೂ ಎಷ್ಟು ಮಾತ್ರವು ವಿಧೇಯನಾಗಲೊಲ್ಲೆನೆಂದು ಉತ್ತರ ಹೇಳಿದನು.

ಅದರ ತರುವಾಯ, ಬಂದಿವಾನನಿಗೆ ವಿರೋಧವಾಗಿ ಸಾಕ್ಷಿ ಹೇಳುವಂತವರು ಹಾಜರಾಗಿ ತಮ್ಮ ಸಾಕ್ಷಿಯನ್ನು ಒಪ್ಪಿಸ ಬೇಕೆಂದು ಸರಕಾರದ ಕಡೆಯಿಂದ ಡಂಗರ ಹಾಕಿಸಲ್ಪಟ್ಟ ಮೇಲೆ ಮೂರು ಮಂದಿ ಸಾಕ್ಷಿಯವರು ಬಂದರು. ಅವರ್ಯಾರಂದರೆ, ಹೊಟ್ಟೇಕಿಚ್ಚಪ್ಪನು, ವ್ಯರ್ಥಭಕ್ತನು, ಇಚ್ಚಕನು, ಈ ಮೂರು ಜನರು ಒಳಗೆ ಬಂದ ಮೇಲೆ, ಬಂದಿವಾನನ ಗುರುತುಂಟೋ? ಇವನ ವಿಷಯ ಏನಾದರೂ ಬಲ್ಲಿರೊ? ಎಂದು ಕೇಳಲ್ಪಟ್ಟಾಗ, ಹೊಟ್ಟೇಕಿಚ್ಚಪ್ಪನು ಮುಂದೆ ನಿಂತು, ಸಲಾಮ್ ಮಾಡಿ, ಸ್ವಾಮಿಾ, ನಾನು ಈ ಮನುಷ್ಯನನ್ನು ಬಹು ಕಾಲದಿಂದ ಬಲ್ಲೆನು. ಈ ನ್ಯಾಯಸ್ಥಾನದ ಸನ್ನಿಧಾನದಲ್ಲಿ ಅವನ ಗುಣವನ್ನೆಲ್ಲಾ ಇದ್ದ ಹಾಗೆಯೇ ಹೇಳುತ್ತೇನೆ, ಅಂದನು.

ನ್ಯಾಯಾಧಿಪತಿಯು—ತಾಳು, ಪ್ರಮಾಣ ಮಾಡು, ಅಂದನು.

ಅವನು ಪ್ರಮಾಣ ಮಾಡಿದ ಮೇಲೆ ಹೇಳಿದ್ದೇನಂದರೆ, ಸ್ವಾಮಿಾ, ಈ ವಿಶ್ವಾಸೈಯ್ಯನಿಗೆ ಒಳ್ಳೇ ಹೆಸರು ಇದ್ದಾಗ್ಯೂ ಬಹು ನೀಚನಾಗಿದ್ಧಾನೆ. ಇವನು ನಮ್ಮ ಜಾತಿಯ ಕಟ್ಟಳೆಗಳನ್ನಾಗಲಿ ಹಿಂದು ಜನರ ನೇಮಗಳಲ್ಲಿ ಯಾವದನ್ನಾಗಲಿ ಕೈಕೊಳ್ಳದೆ, ಅಲಕ್ಷ್ಯ ಮಾಡುತ್ತಾನೆ. ವಿಶ್ವಾಸವೂ ಪರಿಶುದ್ಧತ್ವವೂ ಎಂದು ತಾನು ಹೇಳಿ ಕೊಳ್ಳುವ ದ್ರೋಹವುಳ್ಳ ಬೋಧನೆಗಳ ಮಾರ್ಗದಲ್ಲಿ ಜನರೆಲ್ಲರನ್ನು ಸೇರಿಸುವದಕ್ಕೆ ತನ್ನ ಕೈಲಾದ ಮಟ್ಟಿಗೆ ಪ್ರಯತ್ನ ಮಾಡುತ್ತಾನೆ. ಸ್ವಾಮಿಾ, ವಿಶೇಷವಾಗಿ ಸತ್ಯಮಾರ್ಗವೂ ನಮ್ಮ ಮಾಯಾಪುರದ ಮರ್ಯಾದೆಯೂ ಒಂದಕ್ಕೊಂದು ಪೂರ್ಣ ವಿರೋಧವಾಗಿವೆ ಎಂದು ಹೇಳಿ, ನಮ್ಮ ಶಾಸ್ತ್ರಗಳನ್ನೂ ಪೂರ್ವಿಕರ ವಾಡಿಕೆಗಳನ್ನೂ ಬಹಳವಾಗಿ ದೂಷಿಸುತ್ತಾನೆ.

ನ್ಯಾಯಾಧಿಪತಿಯು— ಇನ್ನೇನಾದರೂ ಉಂಟೋ? ಹೇಳಂದನು.

ಹೊಟ್ಟೇಕಿಚ್ಚಪ್ಪ— ಸ್ವಾಮಿ, ಇನ್ನೂ ಬಹಳವದೆ. ಈ ನ್ಯಾಯಸ್ಥಾನಕ್ಕೆ ತೊಂದರೆಯಾದೀತೆಂದು ಭಯ ಪಡುತ್ತೇನೆ. ಆದರೆ ಆ ಬೇರೆ ಜನರು ಸಾಕ್ಷಿ ಹೇಳಿದ ಮೇಲೆ ಅವನನ್ನು ಕೊಲ್ಲುವ ನಿರ್ಣಯಕ್ಕೆ ಸಾಲದಿದ್ದರೆ ಇನ್ನೂ ಹೇಳುವೆನು, ಅಂದನು. ಇಷ್ಟು ಹೇಳಿದ ಮೇಲೆ ಅವನು ಆಚೆಯಲ್ಲಿ ನಿಲ್ಲ ಬೇಕೆಂದು ಅಪ್ಪಣೆಯಾಯಿತು.

ತರುವಾಯ ವ್ಯರ್ಥಭಕ್ತನನ್ನು ಕರಸಿ, ಬಂದಿವಾನನ ಗುರುತುಂಟೋ? ಇವನ ವಿಷಯ ಏನಾದರೂ ಬಲ್ಲಿರೋ? ಎಂದು ಕೇಳಲು, ಇವನು ಪ್ರಮಾಣ ಮಾಡಿ ಹೇಳಿದ್ದೇನಂದರೆ,

ಸ್ವಾಮಿ, ನಾನು ಈ ಮನುಷ್ಯನನ್ನು ಬಹಳವಾಗಿ ಕಂಡವನಲ್ಲ. ಇನ್ನೂ ಕಾಣುವ ಅವಶ್ಯವೂ ಇಲ್ಲ. ಈ ಪಟ್ಣದಲ್ಲಿ ಮಾತ್ರ ಮೊನ್ನೆ ಅವನ ಸಂಗಡ ಸಂಭಾಷಿಸಿದಾಗ ಅವನು ಕೇವಲ ದುಷ್ಟನೆಂದು ತಿಳು ಕೊಂಡೆನು. ಹ್ಯಾಗಂದರೆ, ಆ ಸಂಭಾಷಣೆಯಲ್ಲಿ ನಮ್ಮ ಮತವು ಸುಳ್ಳಾಗಿದೆ, ಅದರಲ್ಲಿ ಪ್ರವರ್ತಿಸುವವರು ದೇವರನ್ನು ಮೆಚ್ಚಿಸಲಾರರೆಂದೂ, ಈ ಪಟ್ಣದ ಘನವಾದ ದೇವಸ್ಥಾನಗಳಲ್ಲಿ ಇರುವ ವಿಗ್ರಹಗಳು ಸುಳ್ಳೆಂದೂ, ಅವುಗಳನ್ನು ಆರಾಧಿಸುವದು ಪಾಪವೆಂದೂ, ನಾವು ನಂಬುವ ಶಿವ ನಾರಾಯಣ ದುರ್ಗ ಗಣಪತಿ ವೀರಭದ್ರ ಮೊದಲಾದ ದೇವರುಗಳು ಪಿಶಾಚಿಗಳೆಂದೂ, ಅವನು ಹೇಳಿದ್ದನ್ನು ಕೇಳಿದೆನು. ಅವನ ಮಾತು ಸತ್ಯವಾಗಿದ್ದರೆ ನಾವೆಲ್ಲರು ವ್ಯರ್ಥಭಕ್ತಿಯನ್ನು ಮಾಡಿ ಪಾಪ ಪರಿಹಾರವಿಲ್ಲದೆ ನಾಶವಾಗುವೆವು ಎಂಬ ಹಾಗೆ ಕಾಣುವದೆಂದು ಸ್ವಾಮಿಗಳಿಗೆ ಪರಾಂಬರಿಕೆಯಾಗುವದು. ನಾನು ತಿಳಿದದ್ದು ಇಷ್ಟೇ ಸರಿ.

ಆ ಮೇಲೆ ಇಚ್ಛಕನನ್ನು ಕರಿಸಿ, ಇವನ ವಿಷಯ ಹೇಳುವದಕ್ಕೆ ಏನಾದರೂ ಉಂಟೋ? ಎಂದು ಕೇಳಿದರು. ಅವನು ಪ್ರಮಾಣ ಮಾಡಿ ಹೇಳಿದ್ದೇನಂದರೆ,

ಬುದ್ಧೀ ಸ್ವಾಮಿಾ, ಬಹಳ ದಿನದಾರಭ್ಯ ನಾನು ಇವನನ್ನು ನೋಡಿದ್ದೇನೆ. ಇವನು ಆಗದ ಮಾತುಗಳಾಡುವದನ್ನು ಕೇಳಿದ್ದೇನೆ. ಏನಂದರೆ, ಅವನು ನಮ್ಮ ಜಗನ್ನಾಥನನ್ನು ದೂಷಿಸಿ, ಅವನ ಘನವುಳ್ಳ ಸ್ನೇಹಿತರಾದ ಕಾಮ ರುದ್ರ ಕುಬೇರ ಇಂದ್ರ ರಾವಣ ಮೊದಲಾದ ನಮ್ಮ ರಾಜ್ಯದ ಸರದಾರರಿಗೆ ಅವಮಾನ ಮಾಡಿದ್ಧಾನೆ. ಮತ್ತು ತನಗೆ ಎಲ್ಲರು ಸಮ್ಮತಿಸುವದಾದರೆ ಆ ಸರದಾರರಲ್ಲಿ ಒಬ್ಬನನ್ನಾದರೂ ಪಟ್ಣದಲ್ಲಿ ಉಳಿಸೆನೆಂದು ಅವನು ಹೇಳಿದ್ದುಂಟು. ಇದಲ್ಲದೆ ಈಗ ಅವನನ್ನು ವಿಚಾರಿಸುವ ಈ ಸನ್ನಿಧಾನವು ಭಕ್ತಿ ಭ್ರಷ್ಟ ಮೋಸವಾದದ್ದೆಂಬ ಮೊದಲಾದ ಅನೇಕ ಕೆಟ್ಟ ಮಾತುಗಳನ್ನಾಡುತ್ತಾನೆ.

ಇಚ್ಛಕನು ಇಷ್ಟು ಅಂದ ಮೇಲೆ ನ್ಯಾಯಾಧಿಪತಿಯು ಬಂದಿವಾನನಿಗೆ ಜಾತಿಭ್ರಷ್ಟನೇ, ದ್ರೋಹಿಯೇ, ಈ ಸಜ್ಜನರು ನಿನಗೆ ವಿರೋಧವಾಗಿ ಹೇಳಿದ ಸಾಕ್ಷಿಯನ್ನು ಕೇಳಿದಿಯಾ? ಎಂದು ಹೇಳಿದನು.

ವಿಶ್ವಾಸ್ಯೆಯ್ಯನು ಉತ್ತರವಾಗಿ—ನಾನು ಕೆಲವು ಮಾತು ಅರಿಕೆ ಮಾಡುವದಕ್ಕೆ ಅಪ್ಪಣೆಯಾದೀತೋ? ಅನ್ನಲು, ನ್ಯಾಯಾಧಿಪತಿಯು, ಎಲಾ ನಿನ್ನನ್ನು ಉಳಿಸದೆ ಇಲ್ಲೇ ಕೊಂದರೆ ಒಳ್ಳೇದು. ಆದಾಗ್ಯೂ ನಿನ್ನ ವಿಷಯ ನಾವು ಮಾಡುವ ತಾಳ್ಮೆಯು ಎಲ್ಲರಿಗೂ ಪ್ರಸಿದ್ಧಿಯಾಗುವ ಹಾಗೆ ನೀನು ಹೇಳುವ ಮಾತು ಯಾವದು ನೋಡುವ, ಅಂದನು.

ವಿ. ಹೊಟ್ಟೇಕಿಚ್ಚಪ್ಪನು ಹೇಳಿದ ಸಾಕ್ಷಿಯಲ್ಲಿ, ಈ ದೇಶದ ಕಟ್ಟಳೆ ಸಂಪ್ರದಾಯಗಳು ಸತ್ಯಕ್ಕೆ ಕೇವಲ ವಿರೋಧವಾಗಿವೆ ಎಂದು ನಾನು ಅಂದೆನೆಂದು ಹೇಳಿದ್ದೇ ಹೊರ್ತು ಇನ್ನೇನೂ ಹೇಳಲಿಲ್ಲ. ಈ ಮಾತು ಸುಳ್ಳಾದರೆ ನಾನು ಮಾಡಿದ ತಪ್ಪನ್ನು ನನಗೆ ತೋರಿಸಿ ಕೊಟ್ಟ ಕೂಡಲೇ ನಿಮ್ಮ ಸನ್ನಿಧಾನದಲ್ಲಿ ನನ್ನ ಅಪರಾಧ ಅರಿಕೆ ಮಾಡಿ, ಅದನ್ನು ಕ್ಷಮಿಸ ಬೇಕೆಂದು ಬೇಡಿ ಕೊಳ್ಳುವೆನು. ಎರಡನೇಯವನು ವ್ಯರ್ಥಭಕ್ತನೆಂಬವನು ಹೇಳಿದ ಸಾಕ್ಷಿಯ

ಪ್ಪಂದ, ನಾನು ದೇವತಾರಾಧನೆಗೆ ದೇವರಿಂದ ಹುಟ್ಟಿದ ವಿಶ್ವಾಸವು ಅವಶ್ಯವಾಗಿದೆ ಎಂದೂ, ದೇವರ ಚಿತ್ತಕ್ಕೆ ವಿರೋಧವಾಗಿ ಮನುಷ್ಯರು ಕಲ್ಪಿಸಿದ ದೇವರುಗಳನ್ನು ಆರಾಧಿಸಿ ವಿಗ್ರಹಗಳಿಗೆ ಪೂಜೆ ಮಾಡಿದರೆ ಶಿಕ್ಷೆ ಬರುವದೆಂದೂ, ವಿಗ್ರಹಾರಾಧಕರು ಪಾಪದ ಕುಂಡದಲ್ಲಿ ಮುಣುಗಿ ಹೋಗುವರೆಂದೂ, ಹೇಳಿದ್ದು ನಿಜವೇ. ಮೂರನೇಯವನು ಇಚ್ಛಕನೆಂಬವನು ಹೇಳಿದ ಸಾಕ್ಷಿಯು ಹಾಗೆ, ನಾನು ದೂಷಣೆ ಮೊದಲಾದವುಗಳನ್ನು ಹೇಳಿದೆನೆಂಬ ಮಾತು ಹಾಗಿರಲಿ. ಆದಾಗ್ಯೂ ಈ ಪಟ್ಟಣದ ಯಜಮಾನನಿಗೂ ಇವನು ಹೇಳಿದ ಅವನ ಸ್ನೇಹಿತರಾದ ದುರ್ಜನರಿಗೂ ಈ ಪಟ್ಟಣವಲ್ಲ ನರಕವೇ ತಕ್ಕ ಸ್ಥಳವೆಂದು ನಾನು ಹೇಳಿದ್ದು ಉಂಟು. ಇನ್ನೇನು ಹೇಳಲಿ? ನನ್ನನ್ನು ದೇವರೇ ರಕ್ಷಿಸಲಿ, ಅಂದನು.

ತರುವಾಯ ನ್ಯಾಯಾಧಿಪತಿಯಾದ ಉತ್ತಮ ವಿರೋಧಿ ತನ್ನ ಹತ್ತರ ನಿಂತು ಆ ವಿಚಾರಣೆಯನ್ನು ಕೇಳುತ್ತಿದ್ದ ಪಂಚಾಯತರಿಗೆ ಹೇಳಿದ್ದು — ಪಂಚಾಯತರೇ, ಈ ಪಟ್ಟಣದಲ್ಲಿ ಹುಟ್ಟಿದ ದೊಡ್ಡ ಗುಬಾರಿಗೆ ಕಾರಣವಾಗಿರುವ ಈ ಮನುಷ್ಯನನ್ನು ನೋಡಿದ್ದೀರಿ. ಈ ಮೂರು ಮಂದಿ ಸಜ್ಜನರು ಅವನಿಗೆ ವಿರೋಧವಾಗಿ ಹೇಳಿದ ಸಾಕ್ಷಿಯನ್ನೂ, ಅವನು ಹೇಳಿದ ಪ್ರತ್ಯುತ್ತರವನ್ನೂ, ಅರಿಕೆಯನ್ನೂ, ಕೇಳಿದ್ದೀರಿ. ಆದದರಿಂದ ಅವನನ್ನು ಉಳಿಸುವದೂ ಅಳಿಸುವದೂ ನಿಮ್ಮಾಧೀನ ಆದಾಗ್ಯೂ ನಮ್ಮ ರಾಜ್ಯದ ನ್ಯಾಯಗಳನ್ನು ನಿಮಗೆ ತಿಳಿಸ ಬೇಕೆಂದು ನನಗೆ ಸರಿಯಾಗಿ ತೋರುತ್ತೆ, ಹ್ಯಾಗಂದರೆ,

ನಮ್ಮ ರಾಜಾಧಿರಾಜನ ಸೇವಕನಾದ ಫರೋನನೆಂಬ ಘನವುಳ್ಳ ಅರಸನ ಕಾಲದಲ್ಲಿ ಪರ ಮತದವರು ಹೆಚ್ಚಿ ಪ್ರಬಲವಾಗದ ಹಾಗೆ ಅವರ ಗಂಡು ಕೂಸುಗಳನ್ನು ನದಿಯೊಳಗೆ ಮುಣುಗಿಸ ಬೇಕೆಂಬ ಕಟ್ಟಳೆ ಉಂಟಾಯಿತು. ಮತ್ತು ನೆಬುಕದ್ನೇಚರನೆಂಬ ಮಹಾರಾಜನ ಕಾಲದಲ್ಲಿ ಅವನು ಮಾಡಿದ ಚಿನ್ನದ ವಿಗ್ರಹಕ್ಕೆ ಅಡ್ಡ ಬಿದ್ದು ಆರಾಧಿಸದವರು ಉರಿಯುವ ಬೆಂಕಿಯ ಕುಂಡದಲ್ಲಿ ದೊಬ್ಬಲ್ಪಡ

ಬೇಕೆಂಬ ಕಟ್ಟಳೆ ಉಂಟಾಯಿತು. ಅದೇ ಪ್ರಕಾರ ದರ್ಯಾವೆಸನೆಂಬ ಮಹಾರಾಜನ ಕಾಲದಲ್ಲಿ ಕೆಲವು ಕಾಲದ ಪರ್ಯಂತರ ಅರಸನಿಗೆ ವಿನಾಯಿಸಿ ಯಾವ ದೇವನಿಗಾದರೂ ಮನುಷ್ಯನಿಗಾದರೂ ಬಿನ್ನಹ ಮಾಡುವವನನ್ನು ಸಿಂಹಗಳ ಗವಿಯಲ್ಲಿ ಬಿಸಾಡ ಬೇಕೆಂಬುವ ಕಟ್ಟಳೆ ಉಂಟಾಯಿತು. ಕಟ್ಟಳೆಗಳ ಮುಖ್ಯಾರ್ಥವನ್ನು ಸಹಿಸ ಕೂಡದ ದುರಾಲೋಚನೆಗಳಿಂದ ಮಾತ್ರವಲ್ಲ ಪೂರ್ಣ ಅಸಂಹ್ಯವಾಗಿರುವ ದುರ್ವಾಕ್ಯಗಳಿಂದಲೂ ದುರ್ನಡತೆಗಳಿಂದಲೂ ಸ್ವಾಮಿದ್ರೋಹಿಯಾದ ಈ ಬಂದಿವಾನನು ಪೂರ್ಣವಾಗಿ ಮೀರಿದವನಾಗಿದ್ಧಾನೆ. ಫರೋನನ ಕಟ್ಟಳೆಯು ಅಕ್ರಮವು ಹುಟ್ಟದ ಹಾಗೆ ಕೂಸುಗಳನ್ನು ಕೊಂದು ಹಾಕ ಬೇಕೆಂದು ನೇಮಿಸಿತ್ತು. ಆದರೆ ಇವನು ಅಕ್ರಮವನ್ನು ಪೂರೈಸಿದದರಿಂದ ನಮ್ಮ ರಾಜ್ಯದ ಮತಗಳಿಗೆ ವಿರೋಧವಾಗಿ ಮಾತಾಡಿ ಮಾಡಿದ ದ್ರೋಹಕ್ಕೋಸ್ಕರ ಅವನು ಮರಣದ ಶಿಕ್ಷೆ ಹೊಂದ ಪಾತ್ರನಾಗಿದ್ಧಾನೆ.

ತರುವಾಯ ಕುರುಡದಾಸ, ನಿಷ್ಪ್ರಯೋಜಕ ಶೆಟ್ಟಿ, ಕ್ರೋಧಿಗೌಡ, ಕಾಮಾಪೇಕ್ಷಿ, ಇಚ್ಛಾನುಭೋಗಿ, ಆತುರನಾಯಕ, ಅಹಂಕಾರಯ್ಯ, ಹಗೆಯುಪ್ಪ, ಅಬದ್ಧಜೋಗಿ, ಕ್ರೂರಪ್ಪ, ಜ್ಞಾನವಿರೋಧಿ, ಅಕ್ಷಮಶಾಸ್ತ್ರಿ ಎಂಬ ಈ ಪಂಚಾಯತರು ಪ್ರತ್ಯೇಕವಾದ ಸ್ಥಳದಲ್ಲಿ ತಮ್ಮೊಳಗೆ ಆಲೋಚಿಸಿ ತಮತಮಗೆ ಕಂಡ ತೀರ್ಪುಗಳನ್ನು ಹೇಳಿದ್ದು ಹ್ಯಾಗಂದರೆ,

ಅವರೊಳಗೆ ಮುಖ್ಯಸ್ಥನಾದ ಕುರುಡದಾಸನು, ಇವನು ಮತಭ್ರಷ್ಟನೆಂದು ಸ್ಪಷ್ಟವಾಗಿ ದೃಷ್ಟಿಸಿ ನೋಡಿ ತಿಳಿದಿದ್ಧೇನೆ.

ನಿಷ್ಪ್ರಯೋಜಕ ಶೆಟ್ಟಿ. ಇಂಥವನನ್ನು ಭೂಮಿಯಲ್ಲಿ ಇರಿಸ ಬಾರದು.

ಕ್ರೋಧಿಗೌಡ. ಹೌದೈಯ್ಯ, ಅವನ ಮುಖ ನೋಡಿದರೆ ಅಸಂಹ್ಯವಾಗುತ್ತದೆ.

ಕಾಮಾಪೇಕ್ಷಿ. ಮೊದಲಿನಿಂದಲೇ ಇವನನ್ನು ಕಂಡರೆ ನನಗೆ ಆಗದು.

ಇಚ್ಛಾನುಭೋಗಿ. ನನಗೂ ಆಗದು. ಯಾಕಂದರೆ ನನ್ನ ನಡತೆ ಕೆಟ್ಟದ್ದೆಂದು ಯಾವಾಗಲೂ ಹೇಳುತ್ತಿರುವನು.

ಆತುರನಾಯಕ. ಗಲ್ಲಿಗೆ ಹಾಕಿರಿ, ಗಲ್ಲಿಗೆ ಹಾಕಿರಿ.

ಅಹಂಕಾರಯ್ಯ. ಛೀ ಅವನು ಜಾತಿಭ್ರಷ್ಟ.

ಹಗೆಯಪ್ಪ. ನನಗೆ ಮೈಯೆಲ್ಲಾ ಉರಿಯುತ್ತದೆ.

ಅಬದ್ಧಜೋಗಿ. ಮೋಸಗಾರನೇ ಸರಿ.

ಕ್ರೂರಪ್ಪ. ಗಲ್ಲಿಗೆ ಹಾಕಿದರೆ ಸಾಲದು.

ಜ್ಞಾನವಿರೋಧಿ. ಅವನನ್ನು ನಿರ್ಮೂಲ ಮಾಡುವ.

ಅಕ್ಷಮಶಾಸ್ತ್ರಿ. ಲೋಕವೆಲ್ಲಾ ನನ್ನದಾದರೂ ಅವನಿಗೆ ಕ್ಷಮಿಸಲಾರೆ.

ಹೀಗೆ ಮರಣ ಶಿಕ್ಷೆ ಅವನಿಗೆ ನಿರ್ಣಯಿಸ ಬೇಕೆಂದು ಅವರೆಲ್ಲರು ಒಂದೇ ಮನಸ್ಸಾಗಿ ನ್ಯಾಯಾಧಿಪತಿಗೆ ಹೇಳಿದಾಗ, ಬಂದಿವಾನನನ್ನು ನ್ಯಾಯಸ್ಥಾನದೊಳಗಿಂದ ಅವನು ಮೊದಲು ಇದ್ದ ಬಂದೊಬಸ್ತಿನ ಜಾಗಕ್ಕೆ ಒಯ್ದು ಅತಿ ಕ್ರೂರವಾದ ಶಿಕ್ಷೆಯಿಂದ ದಂಡಿಸಿ ಸಂಹರಿಸ ಬೇಕೆಂಬ ತೀರ್ಪಾಯಿತು.

ಈ ಮೇರೆಗೆ ಉಂಟಾದ ತೀರ್ಪಿನ ಪ್ರಕಾರ ಅವನನ್ನು ಹೊರಗೆ ತಂದು, ಚಬುಕಿನಿಂದ ಹೊಡದು, ಚನ್ನಾಗಿ ಗುದ್ದಿ, ಕತ್ತಿಗಳಿಂದ ಘಾಯ ಮಾಡಿ, ಕಲ್ಲೆಸದು, ತಮ್ಮ ಖಡ್ಗಗಳಿಂದ ತಿವಿದು, ಕಡೆಗೆ ಬೆಂಕಿಯಲ್ಲಿ ಸುಟ್ಟು, ಬೂದಿಯನ್ನು ನೀರಿನಲ್ಲಿ ಹಾಕಿದರು. ವಿಶ್ವಾಸ್ಯೈಯ್ಯಗೆ ಆದ ಅಂತ್ಯವು ಇದೇ.

ಆದರೆ ಆ ಸಮೂಹದ ಜನರು ಕಾಣದ ಹಾಗೆ ಎರಡು ಕುದುರೆಗಳು ಕಟ್ಟಿದ ಒಂದು ರಥವು ವಿಶ್ವಾಸ್ಯೈಯ್ಯನಿಗೋಸ್ಕರ ಕಾದಿರುವದನ್ನೂ ವಿರೋಧಿಗಳು ಅವನನ್ನು ಕೊಂದಾಗಲೇ ಅವನು ಅದರೊಳಗೆ ಎತ್ತಲ್ಪಟ್ಟು ತುತೂರಿಯ ಧ್ವನಿಯೊಡನೆ ಮೇಘಗಳ ಮಾರ್ಗವಾಗಿ ಸಮೀಪವಾದ ಹಾದಿಯಿಂದ ಪರಲೋಕದ ಬಾಗಲಿಗೆ ಸರಿಯಾಗಿ ಒಯ್ಯಲ್ಪಡುವದನ್ನೂ ನನ್ನ ಕನಸಿನಲ್ಲಿ ಕಂಡೆನು.

ಕ್ರಿಸ್ತಿಯನಿಗೆ ಆ ಸಮಯದಲ್ಲಿ ತೀರ್ಪು ಉಂಟಾಗಲಿಲ್ಲ. ಅವನು ತಿರಿಗಿ ಶೆರೆಗೆ ವೈಯ್ಯಲ್ಪಟ್ಟು, ಅಲ್ಲಿ ಸ್ವಲ್ಪ ಕಾಲವಿದ್ದನು. ಆದರೆ ಸಕಲ ಕಾರ್ಯಗಳಿಗೆ ಪರಮ ಯಜಮಾನನಾಗಿರುವ ದೇವರು ಆ ಮಾಯಾಪುರದವರ ರೌದ್ರವನ್ನು ನಿಲ್ಲಿಸಿ ಕ್ರಿಸ್ತಿಯನನ್ನು ಅವರ ಕೈಯಿಂದ ತಪ್ಪಿಸಿದ ಮೇಲೆ ಅವನು ಪಯಣಗತಿಯಿಂದ ಹೊರಟು ಹಾಡಿದ ಪದವೇನಂದರೆ,

ನಿನಗೆ ಸುಖವೈ ಪ್ರಿಯನೆ ಸತ್ಯಕೆ
ಮುನಿದ ಮೂಢರೊಳಿತ್ತೆ ಸಾಕ್ಷಿಯ
ತನುವ ಹಿಂಸಿಸಿ ಸುಟ್ಟರೆಯುಜಯ ಚಿಂತೆಯೇನಿದಕೆ ||
ಕೊನೆಯಗಾಣದ ನರಕ ಕುಣಿಯಲಿ
ಮುಣುಗಿ ಶತ್ರುಗಳಿರುವ ಕಾಲದಿ
ಘನಕೆ ಘನತರವಾದ ಮೋಕ್ಷವು ನಿನಗೆ ದೊರಕುವದು. ||

---

## 14. Christian and Hopeful.

## ೧೪. ಕೋರಿಕೆಗೌಡ. ಇಹಭಕ್ತಶೆಟ್ಟಿ ಮೊದಲಾದವರು.

---

ತರುವಾಯ ನಾನು ಸ್ವಪ್ನದೊಳಗೆ ಕಂಡದ್ದೇನಂದರೆ, ಅಲ್ಲಿಂದ ಕ್ರಿಸ್ತಿಯನು ಒಂಟಿಗನಾಗಿ ಹೊರಡಲಿಲ್ಲ. ಆ ಸಂತೆಯೊಳಗೆ ಕ್ರಿಸ್ತಿಯನೂ ವಿಶ್ವಾಸೈಯ್ಯನೂ ಆಡಿದ ಮಾತುಗಳನ್ನು ಕೇಳಿದದರಿಂದಲೂ, ಅವರ ಶ್ರಮೆಗಳನ್ನು ನೋಡಿದದರಿಂದಲೂ, ಉತ್ತಮವಾದ ಕೋರಿಕೆಯನ್ನು ಹೊಂದಿದ ಕೋರಿಕೆಗೌಡನು ಅವನ ಸಂಗಡ ಕೂಡಿ, ನಾನು ನಿಮ್ಮ ಸಂಗಡ ಪ್ರಯಾಣ ಮಾಡುತ್ತೇನೆಂದು ಹೇಳಲು, ಕ್ರಿಸ್ತಿಯನು, ಅವನು ಸತ್ಯಭಕ್ತನೆಂದು ನಂಬಿ, ಸಹೋದರನಿಗೆ ತಕ್ಕದ್ದಾದ ಒಡಂಬಡಿಕೆಯಲ್ಲಿ ಅವನನ್ನು ಶೇರಿಸಿ ಕೊಂಡನು.

ಈ ಪ್ರಕಾರ ಒಬ್ಬನು ಸತ್ಯದ ಸಾಕ್ಷಿಗೋಸ್ಕರ ಸಾಯಲು ಅವನು ಸತ್ತ ಸ್ಥಳದಲ್ಲಿಯೇ ಅವನಿಗೆ ಬದಲಾಗಿ ಮತ್ತೊಬ್ಬನು ಕ್ರಿಸ್ತಿಯನು ಮಾಡುವ ಪ್ರಯಾಣದಲ್ಲಿ ಜತೆಗಾರನಾಗ ಸಿದ್ಧವಾದನು. ಅದಲ್ಲದೆ ಸ್ವಲ್ಪ ಕಾಲದ ಮೇಲೆ ಆ ಸಂತೆಯವರಲ್ಲಿ ಅನೇಕರು ತಮ್ಮ ಹಿಂದೆ ಬಂದಾರೆಂದು ಕೋರಿಕೆಗಾರನು ಕ್ರಿಸ್ತಿಯನಿಗೆ ಹೇಳಿದನು.

ಈ ಪ್ರಕಾರ ಅವರು ಆ ಸಂತೆಯ ಸ್ಥಳವನ್ನು ಬಿಟ್ಟ ಕೂಡಲೇ, ತಮ್ಮ ಮುಂದೆ ನಡೆದು ಹೋಗುವ ಇಹಭಕ್ತಶೆಟ್ಟಿ ಎಂಬವನನ್ನು ಕಲತು, ಯಾವ ಊರು? ಈ ಮಾರ್ಗದಲ್ಲಿ ಎಲ್ಲಿ ಪರ್ಯಂತರ ಬರುತ್ತೀರಿ? ಎಂದು ಕೇಳಲು, ಅವನು, ಸುಭಾಷೆಪುರದಿಂದ ಬಂದೆನು. ಪರಲೋಕಪಟ್ಣಕ್ಕೆ ಹೋಗುತ್ತೇನೆಂದು ಹೇಳಿದನೇ ಹೊರ್ತು ತನ್ನ ಹೆಸರು ಅವರಿಗೆ ತಿಳಿಸಲಿಲ್ಲ.

ಕ್ರಿಸ್ತಿಯನು. ಹಾಗಾದರೆ, ಸುಭಾಷೆಪುರದಿಂದ ಬರೋಣವಾಯಿತೋ? ಅಲ್ಲಿ ಯಾರಾದರೂ ಒಳ್ಳೆಯವರು ಇದ್ದಾರೋ? ಅನ್ನಲು, ಅಂಥವರು ಇದ್ದಾರೆ, ಅಂದನು.

ಕ್ರಿ. ನಿಮ್ಮ ಹೆಸರೇನು?

ಇಹಭಕ್ತಶೆಟ್ಟಿ. ನಿಮ್ಮ ಗುರುತು ನನಗೆ ಇಲ್ಲ. ನನ್ನ ಗುರುತು ನಿಮಗೆ ಇಲ್ಲ. ಇದೇ ಮಾರ್ಗವಾಗಿ ನನ್ನ ಸಹವಾಸಕ್ಕೆ ಬಂದರೆ, ಒಳ್ಳೇದು; ಇಲ್ಲದಿದ್ದರೆ ನಿಮ್ಮ ಮನಸು.

ಕ್ರಿ. ಆ ಸುಭಾಷೆಪುರದ ಸುದ್ದಿ ಕೇಳಿದ್ದೇನೆ. ಒಳ್ಳೇ ಸಾವುಕಾರರು ಇರುವ ಪಟ್ಣವಂತೆ.

ಇಹ. ಹೌದು, ಹೌದು. ಅಲ್ಲಿ ನನಗೆ ಬಹು ಮಂದಿ ಐಶ್ವರ್ಯ ಉಳ್ಳ ನೆಂಟರು ಇದ್ದಾರೆ.

ಕ್ರಿ. ಅಲ್ಲಿರುವ ನಿಮ್ಮ ನೆಂಟರು ಯಾರೆಂದು ಕೇಳ ಬಹುದೋ?

ಇಹ. ಸುಮಾರು ಊರವರೆಲ್ಲರು ನನ್ನ ನೆಂಟರೇ. ಮುಖ್ಯವಾಗಿ ಚಪ್ಪಳ ಸ್ವಾಮಿ, ಪುನಲಾಯಿಕ ಸ್ವಾಮಿ, ಸುಭಾಷೆ ಸ್ವಾಮಿ, ಇವರೇ. ಇವರ ಹಿರಿಯರು ಪಟ್ಣವನ್ನು ಪ್ರಬಲ ಮಾಡಿದವರು.

ಇವರಲ್ಲದೆ ಮೃದುವಾಕ್ಯಶೆಟ್ಟಿ, ದ್ವಿಮುಖಶೆಟ್ಟಿ, ಸರ್ವಸಮ್ಮತಶೆಟ್ಟಿ, ಎಂಬವರು ನನ್ನ ಸ್ನೇಹಿತರಾಗಿದ್ದಾರೆ. ಮತ್ತು ನಮ್ಮ ವಕೀಲಸಾದ ಇಬ್ಬಾಯಿ ಶೆಟ್ಟಿಯು ನನಗೆ ಸೋದರಮಾವನಾಗ ಬೇಕು. ನಾನು ಈಗ ಒಳ್ಳೇ ಸಾವುಕಾರನಾದಾಗ್ಯೂ, ನನ್ನ ಮುತ್ತಾತನು ಸುಂಕದ ಕೋಲಕಾರನಾಗಿದ್ದನು ಅಷ್ಟೇ. ಸರಕಾರದಿಂದ ಸಂಬಳವನ್ನೂ, ಸಾವುಕಾರರಿಂದ ಲಂಚವನ್ನೂ, ತೆಗೆದುಕೊಳ್ಳುತ್ತಾ, ಐಶ್ವರ್ಯವಂತನಾದನು. ನನ್ನ ಸ್ಥಿತಿಯೂ ಹೀಗೆಯೇ, ಬಹಳವಾಗಿ ಸಂಪಾದಿಸಿದ್ದೇನೆ.

ಕ್ರಿ. ನಿಮಗೆ ಸಂಸಾರ ಉಂಟೋ?

ಇ ಹ. ಉಂಟು. ನನ್ನ ಹೆಂಡತಿ ಬಹು ಗುಣವಂತಳು. ಗುಣವಂತಳಾದ ಕಪಟಮ್ಮನ ಮಗಳು. ಅವಳ ಮನೆತನ ದೊಡ್ಡದ್ದು. ಅವಳ ವಂಶದವರೆಲ್ಲಾ ದೊಡ್ಡ ಧೊರೆಗಳಾಗಿರುವದರಿಂದ ಅರಸರ ಸಂಗಡಲೂ ಒಕ್ಕಲಿಗರ ಸಂಗಡಲೂ ಯೋಗ್ಯವಾದ ಪ್ರಕಾರ ಮಾತಾಡ ಬಲ್ಲಳು. ಅತಿಭಕ್ತರಿಗೂ ನಮಗೂ ಸ್ವಲ್ಪ ಭೇದ ಉಂಟು ಹೌದು. ಆದಾಗ್ಯೂ ಅದು ದೊಡ್ಡದಲ್ಲ. ನಾವು ಬಿಸಲು ಬಂದ ಕಡೆ ಕೊಡೆ ಹಿಡಿಯುತ್ತೇವಷ್ಟೆ. ಮತ್ತು ಕನಕವೃಷ್ಟಿ ಸುರಿಯುವ ಸಮಯದಲ್ಲಿ ಅದು ತೀರ್ಥವೆಂದು ಸ್ನಾನ ಮಾಡುತ್ತೇವೆ. ಬಿಸಿಲು ಕಾಲದಲ್ಲಿ ಆಕಾಶವು ನಿರ್ಮಲವಾಗಿರುವಾಗ ಪ್ರಜೆಯು ಅರಸನಿಗೆ ಮಾನ ಮಾಡಿದ ಹಾಗೆ ಜನರು ಭಕ್ತಿಗೆ ಮಾನ ಮಾಡಿದರೆ ನಾವು ಸಹ ಹತ್ತರೊಳಗೆ ಹನ್ನೊಂದಾಗಿ ಬಂದು ಅಡ್ಡ ಬಿದ್ದು ವಂದನೆ ಮಾಡುತ್ತೇವೆ.

ಆಗ ಕ್ರಿಸ್ತಿಯನು ಸ್ವಲ್ಪ ವಾರೆಯಾಗಿ ಜತೆಗಾರನಾದ ಕೋರಿಕೆಗೌಡನ ಹತ್ತರ ಹೋಗಿ, ಇವನು ಸುಭಾಷೆಪುರದ ಇಹಭಕ್ತನೆಂದು ನನಗೆ ತೋರುತ್ತದೆ. ಹಾಗಾದರೆ ದೊಡ್ಡ ಕಳ್ಳನು ನಮ್ಮ ಗುಂಪಿಗೆ ಸೇರಿದ್ದಾನೆ. ಇಂಥಾ ಮೋಸಗಾರ ಇನ್ನು ಎಲ್ಲಿಯೂ ಸಿಕ್ಕುವದಿಲ್ಲ. ಇದಕ್ಕೆ ಕೋರಿಕೆಗೌಡನು—ಅವನ ಹೆಸರನ್ನು ಕೇಳಿರಿ ತನ್ನ ಹೆಸರನ್ನು ಹೇಳುವದಕ್ಕೆ ನಾಚಿಕೆ ಪಡನೆಂದು ನೆನಸುತ್ತೇನೆ. ಈ

ಪ್ರಕಾರ ಕ್ರಿಸ್ತಿಯನು ಅವನನ್ನು ತಿರಿಗಿ ಕಲತು, ಐಯ್ಯಾ, ನೀವು ಬಹು ಬುದ್ಧಿವಂತರು ಸರಿ. ನಿಮ್ಮ ಸಮಾಚಾರ ಮುಂಚೆ ಕೇಳಿದ ಹಾಗೆ ತೋರುತ್ತೆ. ಸುಭಾಷೆಪುರದ ಇಹಭಕ್ತಶೆಟ್ಟಿ ಎಂದು ನಿಮ್ಮ ನಾಮಧೇಯವಾಗಿದ್ದೀತಲ್ಲವೋ?

ಇಹ. ಅದು ನನ್ನ ನಿಜ ಹೆಸರಲ್ಲ. ಅಡ್ಡಹೆಸರು ಸರಿ. ನನಗೆ ಆಗದವರು ಈ ಹೆಸರಿಟ್ಟಿದ್ದಾರೆ. ಬೇರೆ ಸಜ್ಜನರು ಅಂಥ ಹೆಸರುಗಳನ್ನು ಹೊಂದಿದ ಪ್ರಕಾರವೇ ನಾನು ಹೊಂದಿ ತಾಳುತ್ತೇನೆ.

ಕ್ರಿ. ಆದರೆ ಈ ಹೆಸರು ಬರುವದಕ್ಕೆ ಏನಾದರೂ ಕಾರಣವಾಯಿತೋ?

ಇಹ. ಛೀ ಛೀ, ಎಷ್ಟು ಮಾತ್ರವೂ ಇಲ್ಲ. ನಾನು ಮಾಡಿದವುಗಳಲ್ಲಿ ಬಂದು ಮಾತ್ರ ಸುಮ್ಮನೆ ತಪ್ಪೆಂದು ಹಿಡಿದಿದ್ದಾರೆ. ಅದೇನಂದರೆ, ಪ್ರಪಂಚದಲ್ಲಿ ಪ್ರಬಲವಾದ ಬುದ್ಧಿಗೆ ಸಮ್ಮತಿಸಿ ಹತ್ತಿರೊಳಗೆ ಹನ್ನೊಂದಾಗಿ ಏನಾದರೂ ಸಂಪಾದಿಸಿ ಕೊಳ್ಳುವದೇ ನನ್ನ ಅದೃಷ್ಟವಾಗಿದೆ. ಈ ಪ್ರಕಾರ ಎಲ್ಲಾ ನನಗೆ ಕೈಕೂಡಿ ಬಂದರೆ ಅದು ದೇವರ ದಯ ಸರಿ. ಇದಕ್ಕೋಸ್ಕರವೇ ಬಹಳ ನೀಚರು ನನ್ನನ್ನು ನಿಂದಿಸುತ್ತಾರೆ. ನಿಂದಿಸಲಿ, ಚಿಂತೆ ಇಲ್ಲ.

ಕ್ರಿ. ನಾನು ಹೇಳಿದ ಹಾಗೇ ಸರಿ. ಈ ಹೆಸರು ನಿಮಗೆ ಚನ್ನಾಗಿ ಒಪ್ಪುತ್ತದೆಂದು ತಿಳುಕೊಳ್ಳುತ್ತೇನೆ.

ಇಹ. ಹೀಗೆ ತಿಳಕೊಂಡರೆ ನಾನು ಏನು ಮಾಡಲಿ? ಹ್ಯಾಗಾದರೂ ನಿಮ್ಮ ಸಂಗಡ ಬಂದರೆ ನಾನು ಒಳ್ಳೇ ಜತೆಗಾರನೆಂದು ತಿಳಿದು ಕೊಳ್ಳುವಿರಿ.

ಕ್ರಿ. ನಮ್ಮ ಸಂಗಡ ಬಂದರೆ ಬಿಸಲು ಬಂದ ಕಡೆ ಕೊಡೆ ಹಿಡಿಯಲಾಗದು. ಕನಕವೃಷ್ಟಿ ಸುರಿದರೆ ಮಾತ್ರವಲ್ಲ ಕಲ್ಲು ಮಳೆ ಬಂದರೂ ಭಕ್ತನಾಗಿರ ಬೇಕು. ಜನರು ಮೆಚ್ಚಿದರೆ ಮಾತ್ರವಲ್ಲ. ದೂಷಿಸಿದರೂ ಹಿಂಸಿಸಿದರೂ ಸ್ಥಿರವಾಗಿರ ಬೇಕು. ಈ ಎಲ್ಲಾದಕ್ಕೆ ನೀವು ಒಡಂಬಡಲಾರಿರೆಂದು ನೆನಸುತ್ತೇನೆ.

ಇಹ. ನನಗೆ ಆಜ್ಞಾಪಿಸುವದಕ್ಕೂ ಹೆದರಿಸುವದಕ್ಕೂ ನಿಮಗೆ ಅಧಿಕಾರವಿಲ್ಲ. ಹೊತ್ತು ಬಂದ ಹಾಗೆ ನಡಿಯುವೆನು. ನಿಮ್ಮ ಸಂಗಡ ಬರಲಿಕ್ಕೆ ಮಾತ್ರ ಅಪ್ಪಣೆ ಕೊಡಿರಿ.

ಕ್ರಿ. ನಾನು ಹೇಳಿದ ಹಾಗೆ ಮಾಡಿದರೆ ಸರಿ. ಇಲ್ಲದಿದ್ದರೆ ಒಂದು ಹೆಜ್ಜೆಗೆ ಆದರೂ ಬರ ಕೂಡದು.

ಇಹ. ನನ್ನ ಮುಂಚಿನ ನಡತೆಯಲ್ಲಿ ಏನೂ ದೋಷ ಕಾಣುವದಿಲ್ಲ. ಅದರಿಂದ ಬಹಳ ಪ್ರಯೋಜನವಾಗುವದೆಂದು ಬಲ್ಲೆನು. ಅದು ಹ್ಯಾಗೆ ಬಿಡಲಿ? ನಿಮ್ಮ ಸಂಗಡ ಬರುವದಕ್ಕೆ ಅಪ್ಪಣೆಯಾಗದಿದ್ದರೆ ಮುಂಚಿನ ಹಾಗೆ ಆದರೂ ಒಂಟಿಯಾಗಿ ಹೋಗುತ್ತೇನೆ. ನನ್ನ ಸಹವಾಸಕ್ಕೆ ಸಂತೋಷ ಪಡುವವರು ಇನ್ನು ಯಾರಾದರೂ ಬಂದಾರು.

ತರುವಾಯ ನನ್ನ ಸ್ವಪ್ನದಲ್ಲಿ ಕಂಡದ್ದೇನಂದರೆ, ಕ್ರಿಸ್ತಿಯನೂ ಕೋರಿಕೆಗೌಡನೂ ಇಹಭಕ್ತಶೆಟ್ಟಿಯನ್ನು ಬಿಟ್ಟು ಸ್ವಲ್ಪ ದೂರ ಮುಂದೆ ಹೋಗಿ, ಹಿಂದಿರುಗಿ ನೋಡಿದಾಗ, ಇಹಭಕ್ತಶೆಟ್ಟಿಯ ಹಿಂದೆ ಬರುವ ಮೂರು ಜನರನ್ನು ಕಂಡರು. ಇವರು ಅವನನ್ನು ಕಲತಾಗ, ಸ್ವಾಮಿಗಳೇ ಎಂದು ಅವನು ಬೊಗ್ಗಿ ಕೈಮುಗಿಯಲು, ಅವರು ವಂದನೆ ಮಾಡಿದರು. ಅವರು ಯಾರೆಂದರೆ, ಪ್ರಪಂಚಪ್ರೇಮಶಾಸ್ತ್ರಿ, ಹಣದಾಪೇಕ್ಷೆಸ್ವಾಮಿ, ಲೋಭಿಯಪ್ಪ. ಈ ಮೂರು ಮಂದಿಯ ಗುರುತನ್ನು ಇಹಭಕ್ತಶೆಟ್ಟಿಯು ಪೂರ್ವದಿಂದ ಕಂಡಿದ್ದನು. ಹ್ಯಾಗಂದರೆ, ಅವರು ಚಿಕ್ಕತನದಲ್ಲಿ ಒಂದೇ ಸಾಲೆಯೊಳಗೆ ವಿದ್ಯಾಭ್ಯಾಸ ಮಾಡುತ್ತಿದ್ದರು. ಉತ್ತರ ದಿಕ್ಕಿನಲ್ಲಿರುವ ಆಶಾಳ ದೇಶದ ಲಾಭಪುರದಲ್ಲಿ ವಾಸಿಸುವ ಎಲ್ಲಾ ಕಸುಕೊಳ್ಳುವ ರಾಯ ಅವರ ಉಪಾಧ್ಯನಾಗಿದ್ದನು. ಇವನ ಹತ್ತರ ಆ ನಾಲ್ಕು ಜನರು ಬಲಾತ್ಕಾರದಿಂದಲೂ ಇಚ್ಛಕತನದಿಂದಲೂ ಸುಳ್ಳಿನಿಂದಲೂ ಭಕ್ತಿಯ ವೇಷದಿಂದಲೂ ಹಣ ಸಂಪಾದನೆ ಮಾಡುವ ವಿದ್ಯವನ್ನು ಅಭ್ಯಾಸ ಮಾಡಿ, ತಾವೇ ಉಪಾಧ್ಯರಾಗುವ ಮಟ್ಟಿಗೆ ಪ್ರವೀಣರಾದರು.

ಅವರು ತಮ್ಮ ತಮ್ಮೊಳಗೆ ತಕ್ಕ ಮರ್ಯಾದೆ ಮಾಡಿದ ಮೇಲೆ ಹಣದಾಪೇಕ್ಷೆ ಸ್ವಾಮಿಯು ಸ್ವಲ್ಪ ದೂರದಲ್ಲಿರುವ ಕ್ರಿಸ್ತಿಯು

ನನ್ನೂ ಕೋರಿಕೆಗೌಡನನ್ನೂ ಕಂಡು, ಓ ಅಲ್ಲಿ ನಮ್ಮ ಮುಂದೆ ಹೋಗುವವರು ಯಾರು? ಎಂದು ಇಹಭಕ್ತಶೆಟ್ಟಿಯನ್ನು ಕೇಳಿದನು.

ಇಹ. ಅವರು ಯಾರೋ ದೂರದೇಶಸ್ಥರು. ತಮ್ಮ ಮರ್ಯಾದೆಯ ಪ್ರಕಾರ ಯಾತ್ರೆಗೆ ಹೋಗುತ್ತಾರೆ.

ಹಣದಾಪೇಕ್ಷೆ ಸ್ವಾಮಿ. ಅಯ್ಯೋ, ಅವರು ಯಾಕೆ ನಿಲ್ಲಲಿಲ್ಲ? ಕೂಡಾ ಹೋಗ ಬಹುದಾಗಿತ್ತು. ನಾವೂ ನೀನೂ ಸಹ ಯಾತ್ರೆಗೆ ಹೋಗುತ್ತೇವಲ್ಲವೋ?

ಇಹ. ಹೋಗುತ್ತೇವೆ ಹೌದು. ಆದರೆ ನಮ್ಮ ಮುಂದೆ ಹೋಗುವ ಆ ಜನರು ಬಹು ಮೂರ್ಖರು. ಹೊಸದಾಗಿ ನಮ್ಮ ದೇಶಕ್ಕೆ ಬಂದ ತಾಮ್ರಮುಖಿಗಳ ಮಾತನ್ನು ನಂಬಿ, ಹುಚ್ಚು ಹಿಡಿದವರಾಗಿದ್ದಾರೆ. ಅವರು ಮತ್ತೊಬ್ಬರ ಬುದ್ಧಿಯನ್ನು ಬಹು ಅಲ್ಪವೆಂದೂ ತಮ್ಮದು ಅತ್ಯುತ್ತಮವೆಂದೂ ನೆನಸಿ, ಎಲ್ಲಾ ವಿಷಯಗಳಲ್ಲಿ ಎಷ್ಟು ಭಕ್ತಿಯುಳ್ಳವರಾದಾಗ್ಯೂ ತಮ್ಮ ಬುದ್ಧಿಗೆ ಅನುಕೂಲವಾಗಿ ನಡೆದು ಕೊಳ್ಳದವರನ್ನು ತಮ್ಮ ಸಹವಾಸದಿಂದ ತಳ್ಳಿ ಬಿಡುತ್ತಾರೆ.

ಲೋಭಿಯಪ್ಪ. ಅದು ಒಳ್ಳೇದಲ್ಲ. ಆದರೆ ಅಧಿಕ ಭಕ್ತಿಯುಳ್ಳವರು ಇರುತ್ತಾರೆಂದೂ, ಇವರು ತಮಗೆ ಹೊರ್ತು ಬೇರೊಬ್ಬರೆಲ್ಲರಿಗೂ ಆಜ್ಞೆನಿರ್ಣಯ ತೀರಿಸುತ್ತಾರೆಂದೂ, ಸಮಾಚಾರ ಕೇಳಿದ್ದೇನೆ. ಹಾಗಾದರೆ ನಿನಗೂ ಅವರಿಗೂ ಏನು ವ್ಯತ್ಯಾಸ?

ಇಹ. ಏನಂದರೆ, ಆತ್ಮದ ರಕ್ಷಣೆಗೋಸ್ಕರ ಮನೆ ಆಸ್ತಿ ಪ್ರಾಣವನ್ನು ಸಹ ಬಿಡ ಬೇಕೆಂದು ಮೂರ್ಖಬುದ್ಧಿಯಿಂದ ಹೇಳುತ್ತಾರೆ. ನಾನಾದರೆ, ತಕ್ಕಷ್ಟು ಭಕ್ತಿ ನಡಿಸಿ, ಬೇಕಾದ ಪುಣ್ಯಗಳನ್ನು ಮಾಡುತ್ತೇನೆ. ಆದರೆ ಶರೀರ ಸೌಖ್ಯಕ್ಕೋಸ್ಕರವೂ ಆಸ್ತಿಗೋಸ್ಕರವೂ, ಮಾನಕ್ಕೋಸ್ಕರವೂ, ಉಪಾಯಗಳನ್ನು ಮಾಡ ಬೇಕಷ್ಟೆ. ಉಳಿದವರೆಲ್ಲರು ಎದುರಿಸಿದರೂ ಅವರು ದೇವರ ಮಾರ್ಗದಲ್ಲಿ ಸ್ಥಿರವಾಗಿರ ಬೇಕನ್ನುತ್ತಾರೆ. ನಾನು, ಕಲಿಯುಗಕ್ಕೆ ತಕ್ಕ ಹಾಗೆ ಮಾಡಿ, ನನ್ನ ಕ್ಷೇಮವನ್ನೇ ನೋಡುತ್ತೇನೆ. ಅವರು, ಬಡತನವೂ ತಿರ

ಸ್ಕಾರವೂ ತಮಗೆ ಬಂದರೂ, ತಾಳುವರಂತೆ. ನಾನು, ಹ್ಯಾಗಾದರೂ ಲಾಭಸ್ತುತಿ ಘನಗಳನ್ನು ಕಾಪಾಡ ಬೇಕನ್ನುತ್ತೇನೆ.

ಪ್ರಪಂಚಪ್ರೇಮಶಾಸ್ತ್ರಿ. ಶೆಟ್ಟಿಯೇ, ನಿನ್ನ ಬುದ್ಧಿ ಒಳ್ಳೇದು. ತನಗೆ ತಾನು ಅನುಭವಿಸ ಬಹುದಾದ ಆಸ್ತಿಯನ್ನು ಕಳಕೊಳ್ಳುವವನು ಹುಚ್ಚನು. ನಮಗೆ ಸರ್ಪಯುಕ್ತಿ ಇರಬೇಕು. ಘಾಳಿ ಬಂದಾಗಲೇ ತೂರಿಕೊಳ್ಳ ಬೇಕು. ತುಂಬೆಗಳು ಮಳೆಕಾಲದಲ್ಲಿ ಸುಮ್ಮನಿದ್ದು ಬೇಸಿಗೆಯಲ್ಲಿ ಜೇನು ಕೂಡಿಸುತ್ತವೆಂದು ತಿಳಿಯುತ್ತದಷ್ಟೆ. ಹಾಗೆಯೇ ಬುದ್ಧಿಯುಳ್ಳ ಮನುಷ್ಯರು ಈ ಲೋಕದಲ್ಲಿ ಇರುವಾಗಲೇ ಲೋಕದ ಸುಖಗಳನ್ನು ಅನುಭೋಗಿಸುತ್ತಾರೆ. ಪ್ರಪಂಚ ಬಿಡುವದಕ್ಕೆ ಸಾಯುವ ದಿವಸವೇ ತಕ್ಕ ಸಮಯವಾಗಿದೆ. ಹೊಟ್ಟೆ ಇರುವಾಗ್ಯೆ ಹೊಟ್ಟೆ ತುಂಬಿಸ ಬೇಕು. ಶರೀರ ಇರುವಾಗ್ಯೆ ಒಳ್ಳೇ ವಸ್ತ್ರಗಳನ್ನೂ ಆಭರಣಗಳನ್ನೂ ಉಟ್ಟು ತೊಟ್ಟು ಕೊಳ್ಳ ಬೇಕು. ನರಲೋಕದಲ್ಲಿ ಇರುವಾಗ್ಯೆ ಹಣ ಮಾನ ಅಧಿಕಾರ ಇತ್ಯಾದಿಗಳನ್ನು ಪಡಕೊಳ್ಳ ಬೇಕು. ಅಡಿಗೆ ಮಾಡಿದಾಗಲೇ ಊಟ ಮಾಡ ಬೇಕು. ಈ ಲೋಕದಲ್ಲಿ ಭೋಗ. ಆ ಲೋಕದಲ್ಲಿ ಯೋಗ, ಎಂಬ ಗಾದೆಯನ್ನು ನನ್ನ ಅಜ್ಜಿ ನನಗೆ ಕಲಿಸಿದಳು. ಇದು ಉತ್ತಮ ಬುದ್ಧಿ. ದೇವರು ಇದೇ ಪ್ರಕಾರ ನೇಮಿಸಿದ್ದಾನೆ. ನಮ್ಮ ಮುಂದೆ ಇರುವ ಆ ಇಬ್ಬರಿಗೆ ಹುಚ್ಚು ಹಿಡಿದದೆ ಸರಿ.

ಲೋಭಿಯಪ್ಪ. ಶಾಸ್ತ್ರಿಗಳೇ, ಇನ್ನೇನು ಮಾತು? ಈ ವಿಷಯದಲ್ಲಿ ನಮ್ಮೆಲ್ಲರ ಬುದ್ಧಿ ಒಂದೇ ಆಗಿದೆ.

ಹಣದಾಪೇಕ್ಷೆ ಸ್ವಾಮಿ. ಇನ್ನು ಯಾವ ಮಾತೂ ಬೇಡ. ಹಿರಿಯರ ಮಾರ್ಗವನ್ನೂ ಶಾಸ್ತ್ರಗಳ ರೀತಿಯನ್ನೂ ತಿಳಿದು ಕೊಂಡು, ಸ್ವಸ್ಥ ಬುದ್ಧಿಯಿಂದ ಆಲೋಚನೆ ಮಾಡುವವನು ನಮ್ಮ ಮಾತಿಗೆ ಒಪ್ಪಿಕೊಳ್ಳುವನು.

ಇಹ. ಸ್ವಾಮಿಗಳೇ, ನಾವೆಲ್ಲವರು ಯಾತ್ರೆಗೆ ಹೋಗುತ್ತೇವಲ್ಲ? ಹಾಗಾದರೆ ನಿಷ್ಪ್ರಯೋಜಕವಾದ ಮಾತುಗಳನ್ನಾಡದ ಹಾಗೆ ನಾನು ವಿದ್ವಾಂಸರಾದ ನಿಮ್ಮನ್ನು ಒಂದು ಪ್ರಶ್ನೆ ಮಾಡುತ್ತೇನೆ.

ಅಪ್ಪಣೆ ಕೊಡಿ. ಬುದ್ಧಿವಂತನೊಬ್ಬನು ಜ್ಞಾನದ ಮಾರ್ಗವನ್ನು ಕಂಡು ದೇಶಸ್ಥರು ನಡಿಸುವ ಪೂಜೆಗಳು ವ್ಯರ್ಥ ಆಟವೆಂದೂ ಈ ದೇವತೆಗಳೆಲ್ಲ ಏನೂ ಇಲ್ಲವೆಂದೂ, ಎಲ್ಲಾ ಮಾಯವೆಂದೂ, ತಿಳಿದು ಅಂತರಂಗದಲ್ಲಿ ಮನಸಿಗೆ ಬಂದದ್ದನ್ನು ತಿಂದು ಉಂಡು ಕುಡಿದು, ಬಹಿರಂಗದಲ್ಲಿ ಜನರ ಸಂಗಡ ಬೇಕಾದ ಪೂಜೆಗಳನ್ನು ಮಾಡಿ, ನೇಮ ನಿಷ್ಟೆಗಳನ್ನು ಕೈಕೊಂಡು, ಯಾತ್ರೆಗೆ ಹೋಗುವವರ ಸಂಗಡ ಯಾತ್ರೆಗೆ ಹೋದರೆ ಅಂಥವನು ಕೆಟ್ಟವನೆಂದು ಹೇಳ ಬಹುದೋ?

ಹಣದಾಪೇಕ್ಷೆ ಸ್ವಾಮಿ. ನಿನ್ನ ಪ್ರಶ್ನೆಯ ತಾತ್ಪರ್ಯವನ್ನು ಚನ್ನಾಗಿ ತಿಳುಕೊಂಡೆನು. ನಿನಗೆ ಕೊಡ ತಕ್ಕ ಉತ್ತರ ಉಂಟು ಹ್ಯಾಗಂದರೆ, ಒಬ್ಬನು ಏನಾದರೂ ನಂಬಿದರೆ ನಂಬಲಿ. ನಂಬದಿದ್ದರೆ ಬಿಡಲಿ. ಆದರೆ ಈ ಪ್ರಪಂಚದಲ್ಲಿ ಜೀವನಕ್ಕೆ ಕಡಿಮೆಯಾದವನು ಭಕ್ತಿಯ ಆಕಾರವನ್ನು ತೋರಿಸಿ, ಒಳ್ಳೇ ವ್ಯಾಪಾರ ಮಾಡುವದಕ್ಕೂ ಒಳ್ಳೇ ಚಾಕರಿಯಲ್ಲಿ ಶೇರುವದಕ್ಕೂ ಐಶ್ವರ್ಯವಂತಳನ್ನು ಮದುವೆ ಮಾಡಿ ಕೊಳ್ಳುವದಕ್ಕೂ ನೋಡಿದರೆ ಅದರಲ್ಲಿ ಏನೂ ದೋಷವಿಲ್ಲವೆಂದು ನೆನಸುತ್ತೇನೆ. ಅದಕ್ಕೆ ಪ್ರಮಾಣವೇನಂದರೆ, ಮೊದಲನೇದು. ಯಾವ ಕಾರಣದಿಂದಲಾದರೂ ಉಂಟಾಗುವ ಭಕ್ತಿ ಮಹಾ ಪುಣ್ಯವೇ ಸರಿ. ಎರಡನೇದು. ಐಶ್ವರ್ಯವಂತರ ಮಗಳ ಮದುವೆಯಲ್ಲಿ ಯಾದರೂ ದೊಡ್ಡ ಚಾಕರಿಯಲ್ಲಿ ಯಾದರೂ ಏನೂ ದೋಷವಿಲ್ಲ. ಮೂರನೇದು. ಭಕ್ತಿಯ ಆಕಾರವನ್ನು ತೋರಿಸಿ ಈ ಮೊದಲಾದವುಗಳನ್ನು ಸಂಪಾದಿಸುವವನು ತಾನು ಒಳ್ಳೇಯವನಾಗಿದ್ದು ಒಳ್ಳೇ ಕಾರ್ಯಗಳನ್ನು ಒಳ್ಳೇಯವರ ಕೈಯಿಂದ ಸಂಪಾದಿಸುತ್ತಾನೆ. ಹೆಣ್ಣು ಹೊನ್ನು ಮಣ್ಣು ಮೊದಲಾದದ್ದೆಲ್ಲಾ ಒಳ್ಳೇ ಭಕ್ತಿ ಮಾರ್ಗದಲ್ಲಿ ಶೇರಿ ಹೊಂದುತ್ತಾನೆ. ಹೀಗಿರಲಾಗಿ ಅವುಗಳನ್ನೆಲ್ಲಾ ಸಂಪಾದಿಸುವದಕ್ಕೋಸ್ಕರ ಭಕ್ತಿಯನ್ನು ತೋರಿಸುವವನು ಒಳ್ಳೇ ಪುಣ್ಯಾತ್ಮನು, ಅಂದನು.

ಇಹಭಕ್ತಶೆಟ್ಟಿ ಮಾಡಿದ ಪ್ರಶ್ನೆಗೆ ಹಣದಾಪೇಕ್ಷೆ ಸ್ವಾಮಿಯು ಕೊಟ್ಟ ಉತ್ತರ ಅವರೆಲ್ಲರು ಕೇಳಿ ಬಹಳವಾಗಿ ಮೆಚ್ಚಿ, ಅದು ಅತಿ

ಪ್ರಯೋಜನವಾದ ಸ್ವಸ್ಥಬುದ್ಧಿ ಎಂದು ನಿಶ್ಚಯಿಸಿ, ಅದಕ್ಕೆ ಯಾ
ರೂ ಅಲ್ಲವನ್ನರು ಎಂದು ಹೇಳಿ, ಕೊಂಬಿನ ಕೂಗು ದೂರಕ್ಕಿರುವ
ಕ್ರಿಸ್ತಿಯನ್ ಕೋರಿಕೆಗಾರರನ್ನು ಕಂಡು, ಇವರು ಮೊದಲು ಇಹ
ಭಕ್ತಶೆಟ್ಟಿಯ ಸಂಗಡ ತರ್ಕಿಸಿದದರಿಂದ ಈ ಪ್ರಶ್ನೆಗೆ ಏನು ಹೇಳು
ತ್ತಾರೆ ನೋಡುವ ಎಂದು ಆಲೋಚಿಸಿ, ಇವರು ಕೂಗಲು ಅವರು
ನಿಂತರು. ಹತ್ತರ ಹೋಗುವ ಸಮಯದಲ್ಲಿ ಇಹಭಕ್ತಶೆಟ್ಟಿ, ಬೇಡ.
ಮುದುಕನಾದ ಪ್ರಪಂಚಪ್ರೇಮಶಾಸ್ತ್ರಿ ಪ್ರಶ್ನೆ ಮಾಡಲಿ. ಇಹಭಕ್ತ
ಶೆಟ್ಟಿಗೂ ಅವರಿಗೂ ಮೊದಲು ಉಂಟಾದ ಕಲಹದಿಂದ ಇನ್ನೂ
ಏನಾದರೂ ಕರಕರೆ ಉಂಟಾದೀತು ಎಂದು ತಮ್ಮೊಳಗೆ ಮಾತಾಡಿ
ಕೊಳ್ಳುತ್ತಾ ಬಂದರು.

ಬಂದು ಮರ್ಯಾದೆ ಮಾಡಿದ ಮೇಲೆ ಪ್ರಪಂಚಪ್ರೇಮಶಾಸ್ತ್ರಿ
ಯು ಕ್ರಿಸ್ತಿಯನ ಹತ್ತಿರವೂ ಅವನ ಜತೆಗಾರನ ಹತ್ತಿರವೂ ಆ
ಪ್ರಶ್ನೆಯನ್ನು ಕೇಳಿ, ಉತ್ತರ ತಿಳಿದರೆ ಹೇಳ ಬೇಕು, ಅಂದನು.

ಕ್ರಿ. ಭಕ್ತಿಮಾರ್ಗದಲ್ಲಿ ಕೂಸಾದವನು ಇಂಥಾ ಸಾವಿರ
ಪ್ರಶ್ನೆಗಳಿಗಾದರೂ ಉತ್ತರ ಕೊಟ್ಟಾನು. ಹ್ಯಾಗಂದರೆ, ಕಪಟವು
ಯಾವದಾದರೂ ಕೆಟ್ಟದ್ದೇ ಸರಿ. ಕಪಟಭಕ್ತನು ಬೇರೆ ಕಪಟಿಗಳಿ
ಗಿಂತ ಕೆಟ್ಟವನು. ಮನುಷ್ಯರು ತಾವು ಮಾಡಿದ ದೇವರುಗಳಿಗೆ
ಪೂಜೆ ಮಾಡಿ, ಪರಲೋಕ ಭೂಲೋಕಗಳನ್ನು ಉಂಟು ಮಾಡಿ
ನಮಗೆ ಪ್ರಾಣವನ್ನೂ ಅನ್ನವಸ್ತ್ರಾದಿಗಳನ್ನೂ ಕೊಡುವ ಜೀವವುಳ್ಳ
ದೇವರಿಗೆ ಸತ್ಯ ಆರಾಧನೆ ಮಾಡದೆ ಇರುವದು ಪಾಪವಾಗಿದೆ. ಈ
ದೇಶಸ್ಥರ ಮಾರ್ಗವು ಸುಳ್ಳೆಂದು ತಿಳಿದ ಮೇಲೆ, ಅದರಲ್ಲಿ ಇನ್ನು
ನಡೆದು, ಮತ್ತೊಬ್ಬರನ್ನು ಮೋಸಗೊಳಿಸುವದು, ಬಹಳ ದೊಡ್ಡ
ಪಾಪವಾಗಿದೆ. ನೀವು ಯಾತ್ರೆಗೆ ಹೋಗುತ್ತೇವೆಂದು ಹೇಳಿ ಪ್ರ
ಪಂಚದ ಮೇಲೆ ಆಶೆ ಪಡುತ್ತೀರಷ್ಟೆ. ನೀವು ಮಾನಸಾಂತರ ಪಡ
ದಿದ್ದರೆ ನರಕದ ಕುಣಿಯಲ್ಲಿ ಬೀಳುವಿರಲ್ಲ? ದೇವರು ಆತ್ಮನಾಗಿ
ದ್ದಾನೆ. ದೇವರನ್ನು ಆರಾಧಿಸುವವರು ಆತ್ಮದಿಂದಲೂ ಸತ್ಯದಿಂ
ದಲೂ ಆರಾಧನೆ ಮಾಡ ಬೇಕಾಗಿದೆ.

ಈ ಮಾತುಗಳನ್ನು ಕೇಳಿ ಅವರು ಒಬ್ಬನನ್ನೊಬ್ಬ ನೋಡಿ ನಿರುತ್ತರವಾಗಿದ್ದರು. ಕ್ರಿಸ್ತಿಯನು ಹೇಳಿದ ಉತ್ತರಕ್ಕೆ ಕೋರಿಕೆಗೌಡ ಸಹ ಮೆಚ್ಚಿದದರಿಂದ ಏನೂ ಮಾತಾಡದ ಹಾಗಾಯಿತು. ಇಹಭಕ್ತಿಶೆಟ್ಟಿ ಮೊದಲಾದವರು ಕ್ರಿಸ್ತಿಯನನ್ನೂ ಕೋರಿಕೆಗೌಡನನ್ನೂ ಬಿಡುವದಕ್ಕೆ ಮೆಲ್ಲಮೆಲ್ಲಗೆ ಹಿಂದೆ ಬಿದ್ದರು. ತರುವಾಯ ಕ್ರಿಸ್ತಿಯನು ತನ್ನ ಜತೆಗಾರನಿಗೆ ಹೇಳಿದ್ದೇನಂದರೆ, ಮನುಷ್ಯರ ನಿರ್ಣಯಕ್ಕೆ ನಿಲ್ಲಲಾರದ ಇವರು ದೇವರ ನಿರ್ಣಯಕ್ಕೆ ಹ್ಯಾಗೆ ನಿಂತಾರು? ಮಣ್ಣಿನ ಘಟಿದವರಾದ ನಾವು ಗದರಿಸಲಾಗಿ ನಿಶ್ಶಬ್ದವಾಗುವವರು ದಹಿಸುವ ಅಗ್ನಿಜ್ವಾಲೆಯಾಗಿರುವವನು ಇವರ ಮೇಲೆ ಬಿದ್ದರೆ ಏನು ಮಾಡುವರು.

ತರುವಾಯ ಕ್ರಿಸ್ತಿಯನೂ ಕೋರಿಕೆಗೌಡನೂ ಪುನಹಾ ಅವರ ಮುಂದೆ ನಡೆದು, ಸೌಖ್ಯನಾಡು ಎಂಬ ಒಂದು ರಮ್ಯವಾದ ಬೈಲಿಗೆ ಬಂದು ಆನಂದ ಪಟ್ಟರು. ಆದರೆ ಆ ಬೈಲು ಉದ್ದವಿಲ್ಲದ ಕಾರಣ ಅದನ್ನು ಬೇಗ ಹಾದು ಹೋದರು. ಆ ಬೈಲಿನ ಆಚೆಯಲ್ಲಿ ಲಾಭಗಿರಿ ಎಂಬ ಒಂದು ಗುಡ್ಡವೂ ಅದರೊಳಗೆ ಒಂದು ಬೆಳ್ಳಿಯ ಗಣಿಯೂ ಇತ್ತು. ಅದನ್ನು ಮಹಾ ಆಪರೂಪವೆಂದು ನೋಡುವದಕ್ಕೋಸ್ಕರ ಮುಂಚೆ ಹೋದ ಪ್ರಯಾಣಸ್ಥರಲ್ಲಿ ಕೆಲವರು ಮಾರ್ಗಕ್ಕೆ ವಾರೆಯಾಗಿ ಹೋಗಿ, ಗಣಿಯ ಅಂಚಿಗೆ ಸಮೀಪಿಸಿ, ಅದರ ಕೆಳಗಿನ ನೆಲ ಕೊರದು ಟೊಳ್ಳಾಗಿರುವದರಿಂದ, ಅದರಲ್ಲಿ ಬಿದ್ದು ಸತ್ತರು. ಬೇರೆ ಕೆಲವರು ಕೈಕಾಲು ಮುರಿದು ಜೀವಿತ ಕಾಲವೆಲ್ಲಾ ಅಂಗಹೀನರಾದರು.

ತರುವಾಯ ನನ್ನ ಸ್ವಪ್ನದಲ್ಲಿ ಕಂಡದ್ದೇನಂದರೆ, ದಾರಿಗೆ ಸ್ವಲ್ಪ ದೂರ ಆ ಗಣಿಗೆ ಎದುರಾಗಿ ದೊಡ್ಡ ಸಾವುಕಾರನ ಹಾಗಿರುವ ದೇಮನೆಂಬವನು (೨ ತಿಮೊಥೆ. ೪. ೧೦) ನಿಂತು ಪ್ರಯಾಣಸ್ಥರಿಗೆ— ಐಯ್ಯಾ, ಇಲ್ಲಿಗೆ ಬಂದು ನೋಡಿರಿ, ಎಂದು ಕರೆಯುತ್ತಿದ್ದನು. ಅದೇ ಪ್ರಕಾರ ಕ್ರಿಸ್ತಿಯನಿಗೂ ಅವನ ಜತೆಗಾರನಿಗೂ, ಏ ಅಪ್ಪಗಳಿರಾ, ಮಾರ್ಗ ಬಿಟ್ಟು ಈಚೆ ಬನ್ನಿ. ನಾನು ಅಪರೂಪವಾದದ್ದನ್ನು ತೋರಿಸುತ್ತೇನಂದನು.

ಕ್ರಿ. ಮಾರ್ಗ ಬಿಡ ತಕ್ಕಷ್ಟು ದೊಡ್ಡ ಕಾರ್ಯವೇನೋ?

ದೇಮನು. ಬೆಳ್ಳಿಯ ಗಣಿಯುಂಟು. ಕೆಲವರು ದ್ರವ್ಯ ಕ್ಕೋಸ್ಕರ ಅಗಿಯುತ್ತಾರೆ. ನೀವು ಬಂದು ಸ್ವಲ್ಪ ಕಷ್ಟ ಪಟ್ಟರೆ ಬಳ್ಳೇ ಐಶ್ವರ್ಯವಂತರಾಗುವಿರಿ.

ಕೋ. ಹೋಗಿ ನೋಡುವ.

ಕ್ರಿ. ನಾ ಬಲ್ಲೆ. ಈ ಸ್ಥಳದ ಮಹತ್ತು ಮುಂಚೆ ಕೇಳಿದ್ದೇನೆ. ಬಹು ಮಂದಿ ಇಲ್ಲಿ ಬಂದು ಸತ್ತರು. ಇದಲ್ಲದೆ ದ್ರವ್ಯ ಹುಡುಕುವವರಿಗೆ ಯಾತ್ರೆ ತಡೆಯಾಗುವದರಿಂದ ಇದು ಉರಲಿನ ಹಾಗಿದೆ.

ತರುವಾಯ ಕ್ರಿಸ್ತಿಯನು ದೇಮನಿಗೆ—ಆ ಸ್ಥಳದಲ್ಲಿ ಮೋಸ ಉಂಟಲ್ಲವೋ? ಅದು ಅನೇಕ ಪ್ರಯಾಣಸ್ಥರಿಗೆ ತಡೆ ಮಾಡಿತಲ್ಲವೋ? ಎಂದು ಕೇಳಲು, ಅವನು ಮೋರೆ ಬಾಡಿದವನಾಗಿ, ಜಾಗ್ರತೆ ಪಟ್ಟರೆ, ಅಷ್ಟು ಮೋಸವಿಲ್ಲವಂದನು. ಆ ಮೇಲೆ ಕ್ರಿಸ್ತಿಯನು ಕೋರಿಕೆಗೌಡನಿಗೆ, ನಾವು ಒಂದು ಹೆಜ್ಜೆಯಾದರೂ ವಾರೆಯಾಗದೆ ನೆಟ್ಟಗೆ ಹೋಗುವ, ಅನಲು, ಕೋರಿಕೆಗೌಡನು ಹೇಳಿದ್ದು—ಇಹ ಭಕ್ತಶೆಟ್ಟಿ ಇಲ್ಲಿ ಬಂದು ಆಚೆಯುವನು ಕರೆಯುವದನ್ನು ಕೇಳುವಾಗ ಅದನ್ನು ನೋಡಲಿಕ್ಕೆ ಹೋಗನೇ?

ಕ್ರಿ. ಅವನ ಮನಸ್ಸು ಅತ್ತಲಾಗಿ ಹೋಗುವದೇ. ಅವನು ಅಲ್ಲೇ ಸಾಯುವನು ಸಂದೇಹವಿಲ್ಲ.

ತರುವಾಯ ದೇಮನು ತಿರಿಗಿ ಕರೆದು—ಏನು ಅಪ್ಪಗಳಿರಾ? ಈಚೆ ಬಂದು ನೋಡುವದಕ್ಕೆ ಮನಸ್ಸಿಲ್ಲವೋ? ಅನಲು, ಕ್ರಿಸ್ತಿಯನು ಖಂಡಿತವಾಗಿ,—ದೇಮನೇ, ನೀನು ಈ ಮಾರ್ಗದ ಯಜಮಾನನ ನೆಟ್ಟಾನ ಹಾದಿಗಳಿಗೆ ಮೆಚ್ಚದೆ ವಾರೆ ಹೋದದರಿಂದ ಅರಸನ ನ್ಯಾಯಾಧಿಪತಿಗಳಲ್ಲಿ ಬಬ್ಬನ ಕೈಯಿಂದ ಆಗಲೇ ನಿರ್ಣಯವನ್ನು ಹೊಂದಿದಿ. (೨ ತಿಮೊಥೆ. ೪—೧೦.) ಇನ್ನು ಯಾಕೆ ನಮ್ಮನ್ನು ಅದೇ ಶಿಕ್ಷೆಯಲ್ಲಿ ಸೇರಿಸಲಿಕ್ಕೆ ನೋಡುತ್ತೀ? ಇದಲ್ಲದೆ ನಾವು ತುಸ ಮಾತ್ರ ವಾರೆಯಾದರೆ ನಮ್ಮ ಯಜಮಾನನಾದ ಅರಸನು ಆ ವರ್ತ

ಮಾನ ಕೇಳಿ ನಾವು ಧೈರ್ಯದಿಂದ ನಿಂತು ಕೊಳ್ಳ ಅಪೇಕ್ಷಿಸುವ ಆ ಸ್ಥಳದಲ್ಲಿ ನಾಚಿಕೆ ಪಡಿಸುವನೆಂಬುವದಕ್ಕೆ ಸಂದೇಹವಿಲ್ಲ, ಅಂದನು.

ಅದಕ್ಕೆ ದೇಮನು—ನಾನು ಸಹ ನಿಮ್ಮ ಮತದವನಾಗಿದ್ಧೇನಷ್ಟೇ. ಸ್ವಲ್ಪ ತಡೆ ಮಾಡಿದರೆ ನಿಮ್ಮ ಸಂಗಡ ನಾನೂ ಬರುವೆನು, ಅನಲಾಗಿ, ಕ್ರಿಸ್ತಿಯನು—ನಿನ್ನ ಹೆಸರೇನು? ನಾನು ಹೇಳಿದ್ದೇ ಅಲ್ಲವೋ? ಅಂದನು.

ದೇ. ನನ್ನ ಹೆಸರು ನೀವು ಹೇಳಿದ್ದೇ ಸರಿ. ನಾನು ಅಬ್ರಹಾಮನ ಸಂತತಿಯವನಾಗಿದ್ಧೇನೆ.

ಕ್ರಿ. ನಿನ್ನನ್ನು ಬಲ್ಲೆ. ನಿನ್ನ ಮುತ್ತಾತ ಗೆಹಾಜಿ ಎಂಬವನು. ನಿನ್ನ ತಂದೆ ಯೂದನು. ತಾಯಿಯಂತೆ ಕರು. ನಾಯಿಯಂತೆ ಬಾಲ. ಗುರುವಿನಂತೆ ಶಿಷ್ಯ. ತಂದೆಯಂತೆ ಮಗ ಅಂದ ಹಾಗಷ್ಟೆ. ನೀನು ಮಾಡುವದು ಪಿಶಾಚನಿಗೆ ತಕ್ಕ ಯುಕ್ತಿಯೇ ಸರಿ. ನಿನ್ನ ತಂದೆಯು ಸ್ವಾಮಿದ್ರೋಹಿಯಾಗಿ ಉರ್ಲು ಹಾಕಿ ಕೊಂಡನು. ನಿನಗೂ ಅದೇ ಪ್ರಾಪ್ತಿಯಾಗುವದು ನ್ಯಾಯವು. ನಮಗೆ ಅರಸನ ಭೇಟಿಯಾದರೆ ನಿನ್ನ ನಡತೆಯನ್ನು ತಿಳಿಸುವೆವು, ಎಂದು ಹೇಳಿ, ಅವರು ಹೋದರು.

ಆ ಸಮಯದಲ್ಲಿ ಇಹಭಕ್ತಶೆಟ್ಟಿ ಮೊದಲಾದವರು ಆ ಗಣಿ ಇದ್ದ ಸ್ಥಳಕ್ಕೆ ಶೇರಿ ಕರೆಯುವ ಶಬ್ದವನ್ನು ಕೇಳಿದಾಗಲೇ ಆಚೆಗೆ ಹೋದರು. ಅವರು ಗುಣಿಯ ಅಂಚಿನಿಂದ ಬೊಗ್ಗಿ ನೋಡಿ ಬಿದ್ದು ಹೋದರೋ, ಅಗಿಯುವದಕ್ಕೆ ಇಳಿದರೋ, ಗಣಿಯ ನೆಲದಿಂದ ಎದ್ದು ಬರುವ ಹಬೆಯಲ್ಲಿ ಉಸುರು ಶಿಕ್ಕಿ ಸತ್ತರೋ, ಏನೋ, ನಿಶ್ಚಯವಿಲ್ಲ. ಮಾರ್ಗದಲ್ಲೆಲ್ಲಿಯೂ ಕಾಣಲಿಲ್ಲ. ಆಗ ಕ್ರಿಸ್ತಿಯನು ಹಾಡಿದ ಪದವೇನಂದರೆ,

ಬಂದಾಗೆಲ್ಲರು ಬಿದ್ದರು ಕುಣಿಯೊಳು
ಕೊಂದಿತು ಮೂಢರ ಬಯಲಾಶೆ ||
ಕುಂದದೆ ಮಾರ್ಗದಿ ಸ್ಥಿರವಾದೆಮಗಾ
ನಂದದ ಲಾಭವು ಶಾಶ್ವತವು ||

ತರುವಾಯು ನಾನು ಕಂಡದ್ದೇನಂದರೆ, ಆ ಬೈಲಿನ ಆಚೆಯಲ್ಲಿ ಹಳೆ ಸ್ತಂಭವಿದ್ದ ಸ್ಥಳಕ್ಕೆ ಪ್ರಯಾಣಸ್ಥರು ಬಂದು, ಅದು ಸ್ತ್ರೀಯು ಪ್ರಕಾರ ಕಾಣುವದರಿಂದ ಇದು ಮಹಾ ಅಪರೂಪವೆಂದು ಇಬ್ಬರೂ ಆಶ್ಚರ್ಯ ಪಟ್ಟರು. ಹೀಗೆ ನೋಡುತ್ತಾ ನೋಡುತ್ತಾ ನಿಂತು ಕೊಂಡು, ಕೆಲವು ಹೊತ್ತಿನ ಪರ್ಯಂತರ ಅದು ಏನೆಂದರಿಯದೆ ಇದ್ದರು. ಕಡೆಗೆ ಕೋರಿಕೆಗೌಡನು ಅದರ ತಲೆಯ ಮೇಲೆ ದೇವ ನಾಗರ ಅಕ್ಷರದ ಬರಹವನ್ನು ನೋಡಿ ತಾನು ವಿದ್ವಾಂಸನಲ್ಲದ ಕಾರಣ ಸಂಕ್ಸೃತ ತಿಳಿದವನಾದ ಕ್ರಿಸ್ತಿಯನಿಗೆ ಅದರ ಅಭಿಪ್ರಾಯ ಹೇಳೀರೋ? ಎಂದು ಕೇಳಲು, ಇವನು ಬಂದು ಅಕ್ಷರಗಳನ್ನು ಸ್ವಲ್ಪ ನೋಡಿ ಕೊಂಡು, ಲೋಟಸ್ಯ ಪತ್ನಿಂ ಸ್ಮರಥ ಎಂಬ ಮಾತುಗಳನ್ನು ಓದಿದನು. ಇದನ್ನು ಜತೆಗಾರನಿಗೆ ಟೀಕಿಸಿದ ಮೇಲೆ ಅವರಿಬ್ಬರು ಲೋಟನ ಹೆಂಡತಿಯು ಸೊದೋಮಿನೊಳಗಿಂದ ತಪ್ಪಿಸಿ ಕೊಳ್ಳುವ ಸಮಯದಲ್ಲಿ ದ್ರವ್ಯಾಶೆಯುಳ್ಳ ಮನಸ್ಸಿನಿಂದ ಹಿಂದಕ್ಕೆ ನೋಡುವಾಗ ಉಪ್ಪಿನ ಸ್ತಂಭಕ್ಕೆ ಮಾರ್ಪಟ್ಟಳಲ್ಲವೋ? ಇದೇ ಆ ಸ್ತಂಭವಾಗಿದ್ಧೀತು ಎಂದು ತಿಳುಕೊಂಡು ಅಕಸ್ಮಿಕವಾಗಿ ತಮಗೆ ಕಾಣ ಬಂದ ಆ ಭಯಂಕರವಾದ ನೋಟಕ್ಕೋಸ್ಕರ ಸಂಭಾಷಿಸಿದ್ದೇನಂದರೆ,

ಕ್ರಿ. ಆಹಾ, ಸಹೋದರನೇ, ಆ ಲಾಭಗಿರಿ ಎಂಬ ಗುಡ್ಡಕ್ಕೆ ಬರ ಬೇಕೆಂದು ದೇಮನು ಕರದ ಮೇಲೆ ತಕ್ಕ ಕಾಲಕ್ಕೆ ಈ ನೋಟವು ಕಂಡೆವು. ನಿನಗೆ ಒಳ್ಳೇದೆಂದು ಕಂಡ ಅವನ ಬುದ್ಧಿಯನ್ನು ನಾವು ಅನುಸರಿಸಿದರೆ ನಾವು ಸಹ ಈ ಸ್ತ್ರೀಯ ಪ್ರಕಾರ ಹಿಂದೆ ಬರುವವರಿಗೆ ನೋಟವಾಗುತ್ತಿದ್ದೆವು.

ಕೋ. ನನ್ನ ದುರ್ಬುದ್ಧಿಗೋಸ್ಕರ ದುಖ್ಖ ಪಡುತ್ತೇನೆ. ನನಗೆ ಈಗಲೇ ಅವಳ ಗತಿ ಆಗದದರಿಂದ ಆಶ್ಚರ್ಯ ಪಡುತ್ತೇನೆ. ಅವಳ ಪಾಪಕ್ಕೂ ನನ್ನ ಪಾಪಕ್ಕೂ ಏನು ಹೆಚ್ಚು ಕಡಮೆ ಇದೆ? ಅವಳು ಹಿಂದಿರುಗಿ ಮಾತ್ರ ನೋಡಿದಳು. ನಾನು ಹೋಗಿ ನೋಡುವದಕ್ಕೆ ಅಪೇಕ್ಷಿಸಿದೆನು. ಅಂಥ ಆಲೋಚನೆ ಬಂದು ಸಾರಿ

ನನ್ನ ಹೃದಯದಲ್ಲಿ ಶೇರಿದದರಿಂದ ನಾನು ನಾಚಿಕೆ ಪಟ್ಟು ದೇವರ ಕನಿಕರವನ್ನು ಬೇಡುತ್ತೇನೆ.

ಕ್ರಿ. ನಾವು ಇಲ್ಲಿ ನೋಡಿದವುಗಳಿಂದ ಬುದ್ಧಿ ತಂದು ಕೊಳ್ಳೋಣ. ಈ ಸ್ತ್ರೀಯು ಸೊದೋಮಿನ ನಾಶನಕ್ಕೆ ತಪ್ಪಿ, ನಾವು ನೋಡುವ ಈ ಉಪ್ಪಿನ ಸ್ತಂಭಕ್ಕೆ ಮಾರ್ಪಟ್ಟು, ಬೇರೆ ಶಿಕ್ಷೆಯಲ್ಲಿ ಬಿದ್ದಳು.

ಕೊ. ಅದು ನಿಜ. ಅವಳನ್ನು ನೋಡಿ, ನಾವು ಅವಳ ಪಾಪಕ್ಕೆ ಭಯ ಪಟ್ಟು, ಅಂಥಾದ್ದಕ್ಕೆ ಭಯ ಪಡದವರಿಗೆ ಎಂಥಾ ಶಿಕ್ಷೆಯಾದೀತೋ ಎಂದು ಗ್ರಹಿಸಿ ಕೊಳ್ಳ ಬೇಕು. ಅದೇ ಪ್ರಕಾರ ತಮ್ಮ ಪಾಪಗಳೊಳಗೆ ನಷ್ಟವಾದ ಕೋರಹ, ದಾಥನ್, ಅಬೀರಮ್ ಮೊದಲಾದ ಇನ್ನೂರೈವತ್ತು ಮಂದಿಯು, ಬೇರೆ ಜನರನ್ನು ಹೆದರಿಸುವದಕ್ಕೆ ಮಾದರಿಯಾದರು. ೪ ಮೋಶೆ. ೧೬ — ೩೧. ೩೨. ೪ ಮೋಶೆ. ೨೬ — ೯. ೧೦. ಒಂದು ಹೆಜ್ಜೆಯಾದರೂ ಮಾರ್ಗದಿಂದ ಪಾರೆ ಹೋಗದೆ, ಹಿಂದಿರುಗಿ ಮಾತ್ರ ನೋಡಿದಂಥ ಈ ಸ್ತ್ರೀಗೆ ಉಂಟಾದ ಶಿಕ್ಷೆಯನ್ನು ಕಂಡ ಆ ದೇಮನೂ ಅವನ ಕಡೆಯವರೂ ದ್ರವ್ಯವನ್ನು ಹುಡುಕುವದಕ್ಕೆ ಧೈರ್ಯ ಪಟ್ಟದ್ದು ಹ್ಯಾಗೋ? ನಾನರಿಯೆ.

ಕ್ರಿ. ಅದು ಆಶ್ಚರ್ಯವೇ, ಹೌದು. ಅವರು ಮತಿಭ್ರಷ್ಟರಾದರೆಂದು ಕಾಣುತ್ತದೆ. ಅವರು ನ್ಯಾಯಾಧಿಪತಿಯ ಮುಂದೆ ಕಳ್ಳತನ ಮಾಡುವವರಿಗೂ, ಗಲ್ಲಿನ ಮರದ ಕೆಳಗೆ ಜೇಬಿ ಕತ್ತರಿಸುವವರಿಗೂ, ಸಮಾನರಾಗಿದ್ದಾರಷ್ಟೆ. ಸೊದೋಮಿನ ದೇಶವು ಮುಂಚೆ ಏದೆನ್ ತೋಟದ ಹಾಗೆ ರಮ್ಯವಾಗಿದ್ದದರಿಂದ ಅದರ ನಿವಾಸಿಗಳು ದೇವರು ತಮಗೆ ಕೊಟ್ಟ ದಯಗಳನ್ನು ಲಕ್ಷ್ಯವಿಡದೆ, ದೇವರ ಸನ್ನಿಧಿಯಲ್ಲಿ ಕೆಟ್ಟದ್ದನ್ನು ಮಾಡಿ, ಅಧಿಕ ಪಾಪಿಷ್ಟರಾದ ಕಾರಣ ಸ್ವಾಮಿ ಬಹಳವಾಗಿ ಕೋಪಿಸಿ ಆಕಾಶದೊಳಗಿಂದ ಬೆಂಕಿ ಸುರಿಸಿ ಅವರನ್ನು ದಂಡಿಸಿದನು. ಅದೇ ಪ್ರಕಾರ ದೇವರು ತಮಗೆ ಮಾಡುವ ವಿಶಿಷ್ಟ ಉಪಕಾರಗಳನ್ನೂ, ತಮ್ಮನ್ನು ಹೆದರಿಸುವದಕ್ಕೆ ಮುಂದಿಟ್ಟ

ಮಾದರಿಗಳನ್ನೂ, ಲಕ್ಷ್ಯ ಮಾಡದವರು ಬಹು ಕಠಿಣವಾದ ಶಿಕ್ಷೆಯೊಳಗೆ ಬೀಳುವರೆಂಬುವದು ನಿಜವೇ ಸರಿ.

ಕೋ. ನೀವು ಹೇಳಿದ್ದು ಸತ್ಯ. ಆದ ಕಾರಣ ನೀವೂ, ಮಹಾ ಪಾಪಿಯಾದ ನಾನೂ, ಅಂಥಾ ಶಿಕ್ಷೆಗಳಲ್ಲಿ ಬೀಳದೆ ಇದ್ದದರಿಂದ ದೇವರಿಗೆ ಸ್ತೋತ್ರ ಮಾಡಿ, ಆತನಿಗೆ ಹೆದರಿ, ಲೋಟನ ಹೆಂಡತಿಯನ್ನು ಯಾವಾಗಲೂ ಜ್ಞಾಪಕ ಮಾಡಿ ಕೊಳ್ಳ ಬೇಕು.

---

## 15. Giant Despair.

## ೧೫. ನಿರಾಶಾಸುರನ ಸೆರೆಯು.

---

ತರುವಾಯ ಅವರು ಪಯಣಗತಿಯಿಂದ ಅರಸನಾದ ದಾವೀದನು ದೇವರ ನದಿ ಎಂದೂ, ಅಪೊಸ್ತಲನಾದ ಯೋಹಾನನು ಜೀವಜಲನದಿ ಎಂದೂ, ಹೆಸರಿಟ್ಟ ಒಂದು ರಮ್ಯವಾದ ನದಿಯ ತೀರಕ್ಕೆ ಬಂದದ್ದನ್ನು ಕಂಡೆನು. ಆ ನದಿಯ ತೀರದ ಹತ್ತರ ಅವರ ಮಾರ್ಗವು ಹೋಗುತ್ತಿರುವದರಿಂದ ಕ್ರಿಸ್ತಿಯನೂ ಅವನ ಜತೆಗಾರನೂ ಬಹು ಆನಂದದಿಂದ ಇದ್ದು, ಆಯಾಸ ಪಟ್ಟ ತಮ್ಮ ಪ್ರಾಣಗಳನ್ನು ಉಜ್ಜೀವಿಸ ಮಾಡುವ ಅದರ ನೀರನ್ನು ಕುಡಿದರು. ಅದಲ್ಲದೆ ಆ ನದಿಯ ಉಭಯ ತೀರಗಳಲ್ಲಿ ಸಕಲ ವಿಧವಾದ ಫಲಗಳನ್ನು ಫಲಿಸುವ ಹಸುರಾದ ವೃಕ್ಷಗಳಿದ್ದವು. ಅವುಗಳ ಎಲೆಗಳು ಪ್ರಯಾಣಸ್ಥರಿಗೆ ಆಗುವ ನಾನಾ ವಿಧವಾದ ರೋಗಗಳಿಗೆ ತಕ್ಕ ಔಷಧಕ್ಕೆ ಆಗುತ್ತಿದ್ದವು. ನದಿಯ ಉಭಯ ಪಾರ್ಶ್ವದಲ್ಲಿ ಬಗೆ ಬಗೆ ಹೂವುಗಳಿಂದ ಅಲಂಕರಿಸಲ್ಪಟ್ಟ ಸರ್ವದಾ ಹಸುರಾಗಿರುವ ಬೈಲುಗಳಿದ್ದವು. ಅದು ನಿರ್ಭಯವಾದ ಸ್ಥಳವೆಂದು ತಿಳಿದು ಆ ಬೈಲಿನಲ್ಲಿ ಮಲಗಿ ನಿದ್ರೆ ಮಾಡಿದರು. ಎಚ್ಚರವಾದ ಮೇಲೆ ತಿರಿಗಿ ಮರಗಳ ಹಣ್ಣುಗಳನ್ನು ಕಿತ್ತು ತಿಂದು, ತಿರಿಗಿ ನದಿಯ ನೀರನ್ನು ಕುಡಿದು

ತಿರಿಗಿ ನಿದ್ರೆ ಗೈಯು ಮಲಗಿ, ಈ ಪ್ರಕಾರ ಕೆಲವು ದಿವಸಗಳನ್ನು ಕಳೆದರು. ಆ ಸಮಯದಲ್ಲಿ ಅವರು ಹಾಡಿದ ಪದವೇನಂದರೆ,

ನದಿಯ ನೀರತಿ ಮಧುರವಾಗಿಹು
ದಿದರ ತೀರದಿ ಬೆಳೆದ ಮರಗಳ
ತುದಿಯೊಳಿರುತಿಹ ಕಾಯಿ ಪಣ್ಗಳು ಪುಷ್ಪಪತ್ರಗಳು ||
ಮುದದಿ ಹಬ್ಬಿದಲತೆಯ ಗುಂಪುಗ
ಳೊದಗಿಸುವ ವಿಷ್ವಾರ್ಥವನು ಜನ
ರಿದರ ಭೋಗಕೆ ಇತರವೆಲ್ಲವ ಬಿಟ್ಟು ಬಿಡದಿಹರೆ ||

ಕಡೆಗೆ ತಮ್ಮ ಪ್ರಯಾಣವು ಮುಗಿಯಲಿಲ್ಲವೆಂದು ಜ್ಞಾಪಕ ಮಾಡಿ ತಿಂದು ಕುಡಿದು ಹೊರಟು ಹೋದರು.

ತರುವಾಯ ನಾನು ನನ್ನ ಸ್ವಪ್ನದಲ್ಲಿ ಕಂಡದ್ದೇನಂದರೆ, ಅವರು ಸ್ವಲ್ಪ ದೂರ ಹೋದ ಮೇಲೆ ಮಾರ್ಗವು ನದಿ ಬಿಟ್ಟು ವಾರೆಯಾಗಲು ತಮಗೆ ಬಹಳ ಚಿಂತೆಯಾದಾಗ್ಯೂ, ಮಾರ್ಗ ಬಿಟ್ಟು ಹೋಗುವದಕ್ಕೆ ಧೈರ್ಯ ಪಡಲಿಲ್ಲ. ಆ ನದಿ ಬಿಟ್ಟ ಮಾರ್ಗವು ಕಲ್ಲುಗಳಿಂದ ತುಂಬಿದ ಕಾರಣ ಅವರ ಕಾಲುಗಳಿಗೆ ಬಹಳ ಘಾಯವಾಗಿ ಆತ್ಮಗಳಲ್ಲಿ ಕುಂದಿ ಹೋದರು. ಈ ಪ್ರಕಾರ ಅವರು ತಮಗೆ ಒಳ್ಳೇ ಮಾರ್ಗ ಶಿಕ್ಕ ಬೇಕೆಂದು ಕೋರಿ ನಡೆಯುತ್ತಿರಲಾಗಿ, ಸ್ವಲ್ಪ ಆಚೆ ರಾಜಮಾರ್ಗದ ಎಡಪಾರ್ಶ್ವದಲ್ಲಿ ಒಂದು ಬೈಲನ್ನೂ ಅದಕ್ಕೆ ಹೋಗುವ ಸೇತುವೆಯನ್ನೂ ಕಂಡರು. ಆ ಬೈಲಿನ ಹೆಸರು ಅಡ್ಡ ದಾರಿ ಮೈದಾನು. ಕ್ರಿಸ್ತಿಯನು ತನ್ನ ಜತೆಗಾರನಿಗೆ, ಈ ಬೈಲು ನಮ್ಮ ಮಾರ್ಗದ ಪಾರ್ಶ್ವದಲ್ಲಿ ಇರುವದರಿಂದ ನಾವು ಅಲ್ಲಿಗೆ ಹೋಗುವ ಎಂದು ಹೇಳಿ, ಅದನ್ನು ಪರೀಕ್ಷಿಸುವದಕ್ಕೋಸ್ಕರ ಹತ್ತರ ಹೋಗಿ, ಬೇಲಿಯ ಆಚೆಯಲ್ಲಿ ರಾಜಮಾರ್ಗಕ್ಕೆ ಸಮವಾಗಿ ಹೋಗುವ ಹಾದಿಯನ್ನು ಕಂಡು, ನಾನು ಕೋರಿದ ಹಾಗಿದೆ, ಇದು ಒಳ್ಳೇ ಮಾರ್ಗ, ಉತ್ತಮ ಕೋರಿಕೆಗೌಡರೇ, ಬನ್ನಿರಿ, ದಾಟಿ ಹೋಗುವ ಎಂದು ಹೇಳಿದನು.

ಕೋ. ಆ ಮಾರ್ಗದಲ್ಲಿ ಒಂದು ವೇಳೆ ಮೋಸವಾದರೆ ಏನು ಮಾಡುವದು?

ಕ್ರಿ. ಮೋಸವಾಗುವ ಹಾಗಿಲ್ಲ. ರಾಜಮಾರ್ಗಕ್ಕೆ ಸಮವಾಗಿ ಹೋಗುತ್ತದಲ್ಲವೋ?

ಈ ಪ್ರಕಾರ ಕೋರಿಕೆಗೌಡನು ತನ್ನ ಜತೆಗಾರನ ಬುದ್ಧಿಗೆ ಒಪ್ಪಿ, ಅವನನ್ನು ಹಿಂಬಾಲಿಸಿ, ಆಚೆಗೆ ಹೋದನು. ಆಚೆ ಹಾದಿಯಲ್ಲಿ ಸೇರಿದ ಮೇಲೆ ಅದು ತಮ್ಮ ಕಾಲುಗಳಿಗೆ ಮೆತ್ತಗಿರುವದನ್ನು ಕಂಡು ತಮ್ಮ ಮುಂದೆ ನಡೆಯುವ ವ್ಯರ್ಥನಂಬಿಕೆ ಎಂಬ ಒಬ್ಬನನ್ನು ನೋಡಿ, ಓ ಅಯ್ಯಾ, ಎಂದು ಕೂಗಿ, ಈ ಹಾದಿ ಎಲ್ಲಿಗೆ ಹೋಗುತ್ತದೆಂದು ಕೇಳಲು, ಅವನು ಮುಖ ತಿರುಗಿಸದೆ ಪರಲೋಕ ಪಟ್ಣಕ್ಕೆ ಎಂದು ಉತ್ತರ ಹೇಳಿದಾಗ, ಕ್ರಿಸ್ತಿಯನು— ನಾನು ಹೇಳಲಿಲ್ಲವೋ? ನಾವು ಸಮವಾದ ಹಾದಿಯಲ್ಲಿದ್ದೇವೆಂಬುವದಕ್ಕೆ ಇವನ ಮಾತು ದೃಷ್ಟಾಂತವೆಂದು ಕೋರಿಕೆಗೌಡನಿಗೆ ಹೇಳಿದನು. ವ್ಯರ್ಥನಂಬಿಕೆ ಎಂಬವನು ಮುಂದೆ ಹೋಗಲು ಇವರು ಹಿಂಬಾಲಿಸಿದರು.

ತರುವಾಯ ರಾತ್ರಿಯಾಗಿ ಬಹಳ ಕತ್ತಲೆಯಾದದರಿಂದ ಹಿಂದೆ ಹೋಗುವ ಇವರು ತಮ್ಮ ಮುಂದೆ ನಡೆಯುವವನನ್ನು ಕಾಣಲಿಲ್ಲ.

ಆಗಲು ಮುಂದೆ ಹೋಗುವ ವ್ಯರ್ಥನಂಬಿಕೆಯುಪ್ಪು ದಾರಿ ಕಾಣದೆ ದಾಂಭಿಕರಾದ ಹುಚ್ಚರನ್ನು ಹಿಡಿಯುವ ಭಗ್ಯೆ ಆ ಸ್ಥಳದ ಯಜಮಾನನು ಮಾಡಿಸಿದ ಅಗಾಧವಾದ ಕುಣಿಯೊಳಗೆ ಬಿದ್ದದರಿಂದ ಅವನ ಎಲುವೆಲ್ಲಾ ಜಜ್ಜಿ ಹೋಯಿತು.

ಕ್ರಿಸ್ತಿಯನೂ ಅವನ ಜತೆಗಾರನೂ ಅವನು ಬಿದ್ದ ಶಬ್ದವನ್ನುಕೇಳಿ ಅದೇನಾಯಿತೆಂದು ಕೂಗಲು, ನರಳುವ ಶಬ್ದವೇ ಹೊರ್ತು ಬೇರೆ ಉತ್ತರ ಉಂಟಾಗಲಿಲ್ಲ. ತರುವಾಯ ಕೋರಿಕೆಗೌಡನು, ಈಗ ಎಂಥ ಮಾರ್ಗ? ಅನಲು, ಅವನ ಜತೆಗಾರನು ತಾನೇ ಕೆಟ್ಟ ದಾರಿ ಹಿಡಿಸಿದೆನೆಂದು ಸುಮ್ಮನಿದ್ದನು. ಅದೇ ಸಮಯದಲ್ಲಿ ಮಳೆ ಬಿದ್ದು

ಭಯಂಕರವಾದ ಗುಡುಗು ಮಿಂಚುಗಳು ಉಂಟಾಗಿ ನೀರಿನ ಪ್ರವಾಹಗಳು ಬಂದವು.

ಆಗ ಕೋರಿಕೆಗೌಡನು ಮನಸ್ಸಿನಲ್ಲಿ ವ್ಯಥೆ ಪಟ್ಟು, ಅಯ್ಯೋ, ಮಾರ್ಗ ಬಿಡದಿದ್ದರೆ ಒಳ್ಳೇದಾಗಿತ್ತಲ್ಲ? ಎಂದು ಹೇಳಿದನು.

ಕ್ರಿ. ಈ ಹಾದಿಯಲ್ಲಿ ದಾರಿ ತಪ್ಪೀತೆಂದು ಹ್ಯಾಗೆ ತಿಳಿಯ ಬಹುದಾಗಿತ್ತು?

ಕೋ. ದಾರಿ ತಪ್ಪೀತೆಂದು ಮೊದಲೇ ನಾನು ಭಯ ಪಟ್ಟೆನು. ಅದಕ್ಕೋಸ್ಕರ ಸ್ವಲ್ಪ ಎಚ್ಚರಿಸಿದೆನು. ಆದರೆ ನೀವು ಹಿರಿಯರಾಗಿರುವ ಕಾರಣ ಅಷ್ಟು ಖಂಡಿತವಾಗಿ ಹೇಳಲಿಲ್ಲ.

ಕ್ರಿ. ಪ್ರಿಯ ಸಹೋದರನೇ, ಕೋಪ ಮಾಡ ಬೇಡಿರಿ. ನಿಮ್ಮನ್ನು ಕೆಟ್ಟ ದಾರಿ ಹಿಡಿಸಿ ದೊಡ್ಡ ಗಂಡಾಂತರದಲ್ಲಿ ಸೇರಿಸಿದದರಿಂದ ಬಹು ಚಿಂತೆ ಪಡುತ್ತೇನೆ. ನಾನು ಬೇಕಾಗಿ ಮಾಡಲಿಲ್ಲ. ಮನ್ನಿಸ ಬೇಕು.

ಕೋ. ಸಹೋದರನೇ, ಚಿಂತೆ ಪಡ ಬೇಡಿರಿ. ಸಂತೋಷದಿಂದ ಕ್ಷಮಿಸುತ್ತೇನೆ. ಇದರಿಂದ ಸಹ ನಮಗೆ ಒಳ್ಳೇದಾಗುವದೆಂದು ನಂಬುತ್ತೇನೆ.

ಕ್ರಿ. ನೀವು ಕ್ಷಮೆಯುಳ್ಳ ಸಹೋದರನಾಗಿರುವದರಿಂದ ಸಂತೋಷ ಪಡುತ್ತೇನೆ. ಆದರೆ ಇಲ್ಲಿ ನಿಂತಿರ ಬಾರದು, ಅವಶ್ಯವಾಗಿ ಹಿಂದಕ್ಕೆ ಹೋಗ ಬೇಕು ಹೋಗುವ.

ಕೋ. ಆಗಲಿ, ಪ್ರಿಯ ಸಹೋದರನೇ, ನಾನು ಮುಂದೆ ಹೋಗುತ್ತೇನೆ.

ಕ್ರಿ. ಬೇಡ, ಬೇಡ, ನಾನೇ ಮುಂದೆ ಹೋಗುತ್ತೇನೆ. ದಾರಿ ತಪ್ಪಿಸಿದವನು ನಾನು. ಗಂಡಾಂತರವಿದ್ದರೆ ಮೊದಲು ನನಗೆ ಬರಲಿ.

ಕೋ. ಅಲ್ಲ, ನೀವು ಮೊದಲು ಹೋಗ ಬಾರದು. ನಿಮ್ಮ ಮನಸ್ಸಿಗೆ ಕರಕರೆ ಇರುವದರಿಂದ ಇನ್ನೊಂದು ಸಾರಿ ದಾರಿ ತಪ್ಪೀರಿ.

ತರುವಾಯ ಅವರು — ನಿನ್ನ ಹೃದಯವು ರಾಜಮಾರ್ಗದ ಕಡೆಗಿರಲಿ. ನೀನು ಮುಂಚೆ ಹೋದ ಹಾದಿಗೆ ತಿರುಗು ಎಂದು ಹೇ

ಳುವವನ ಶಬ್ದವನ್ನು ಕೇಳಿ, ಸ್ವಲ್ಪ ಉಪಶಮನ ಪಟ್ಟರು. ಆದರೆ ಅಷ್ಟರೊಳಗೆ ಪ್ರವಾಹಗಳು ಮೇಲಕ್ಕೆ ಏರಿ ಬಂದದರಿಂದ ಹಿಂದಕ್ಕೆ ಹೋಗುವ ಮಾರ್ಗದಲ್ಲಿ ಬಹಳ ಗಂಡಾಂತರವಿತ್ತು. ಇದನ್ನು ನೋಡಿ, ನಾನು ನನ್ನ ಮನಸ್ಸಿನಲ್ಲಿ—ದಾರಿ ತಪ್ಪುವದಕ್ಕಿಂತ ತಪ್ಪಿದ ದಾರಿ ದೊರಕುವದು ಬಹಳ ಕಷ್ಟವಾಗಿದೆಂದು ತಿಳಿದು ಕೊಂಡೆನು. ಅವರು ಹಿಂದಕ್ಕೆ ಹೋಗುವ ಮಾರ್ಗದಲ್ಲಿ ಕತ್ತಲೆಯಿಂದಲೂ ನೀರಿನಿಂದಲೂ ಏಳು ಎಂಟು ಸಾರಿ ಮುಳುಗಿ ಹೋಗಲಿಕ್ಕಾದರು. ಎಷ್ಟು ಪ್ರಯತ್ನ ಮಾಡಿದರೂ ಆ ರಾತ್ರಿಯೊಳಗೆ ರಾಜಮಾರ್ಗ ತಿರಿಗಿ ಶಿಕ್ಕದ ಕಾರಣ ಮಳೆಗೆ ಸ್ವಲ್ಪ ವಾರೆಯಾದ ಸ್ಥಳದಲ್ಲಿ ಬೆಳಗಾಗುವ ಪರ್ಯಂತರ ಕೂತು ಕೊಳ್ಳುವ ಎಂದು ನಿಶ್ಚಯಿಸಿ ಆಯಾಸಕ್ಕೋಸ್ಕರ ನಿದ್ರೆ ಗೈದರು.

ಅವರು ಮಲಗಿರುವ ಸ್ಥಳಕ್ಕೆ ಸ್ವಲ್ಪ ದೂರ ನಿರಾಶಾಸುರನೆಂಬ ರಾಕ್ಷಸನ ಸಂಶಯ ದುರ್ಗವೆಂಬ ಕೋಟೆ ಇತ್ತು. ಅವರು ಮಲಗಿದ ಸ್ಥಳವು ಅವನ ಭೂಮಿಯಾಗಿದ್ದದರಿಂದ ಆ ರಾಕ್ಷಸನಿಗೆ ರಾತ್ರಿ ಎಲ್ಲಾ ನಿದ್ರೆ ಇಲ್ಲದ ಕಾರಣ, ಅವನು ಅರುಣೋದಯಕ್ಕೆ ಮುಂಚೆ ಎದ್ದು, ತನ್ನ ಹಿತ್ತಲೊಳಗೆ ತಿರುಗಾಡುತ್ತಿರುವಾಗ, ನಿದ್ರೆ ಮಾಡುವ ಕ್ರಿಸ್ತಿಯನ್ ಕೋರಿಕೆಗಾರರನ್ನು ಕಂಡು, ನೀವು ಎಲ್ಲಿಯವರು? ನನ್ನ ಭೂಮಿಗೆ ಯಾಕೆ ಬಂದಿರಿ? ಎಂದು ಕ್ರೂರಧ್ವನಿಯಿಂದ ಅವರನ್ನು ಎಚ್ಚರಿಸಿದನು. ಅವರು ನಾವು ಪ್ರಯಾಣಸ್ಥರು, ದಾರಿ ತಪ್ಪಿತು, ಅನಲು, ಆ ರಾಕ್ಷಸನು—ನೀವು ಈ ರಾತ್ರಿಯಲ್ಲಿ ನನ್ನ ಹೊಲವನ್ನು ತುಳಿದು ಅದರಲ್ಲಿ ಮಲಗಿ ಹಾಳು ಮಾಡಿದಿರಿ. ಆದದರಿಂದ ನನ್ನ ಸಂಗಡ ಬರ ಬೇಕು, ಅಂದನು. ಅವರು ತಮ್ಮ ಮೇಲೆ ತಪ್ಪುಂಟೆಂದು ತಿಳಿದು, ವಾಗ್ವಾದ ಮಾಡದೆ ಇದ್ದರು.

ಹೀಗಿರಲಾಗಿ ಆ ರಾಕ್ಷಸನು ಅವರನ್ನು ತನ್ನ ಮುಂದೆ ತಳ್ಳಿಕೊಂಡು ಹೋಗಿ, ತನ್ನ ಕೋಟೆಯೊಳಗೆ ಅವರ ಆತ್ಮಗಳಿಗೆ ಅಸಂಹ್ಯವಾಗಿಯೂ, ಅಗಾಧ ಕತ್ತಲೆಯಾಗಿಯೂ, ಇರುವ ನೆಲಮಾಳಿಗೆಯಲ್ಲಿ ಇಟ್ಟನು. ಅಲ್ಲಿ ಅವರು ಬುಧವಾರದ ಬೆಳಿಗಿನಾರಭ್ಯ ಶನಿ

ವಾರ ಸಾಯಂಕಾಲದವರೆಗೂ ಅನ್ನ ಪಾನವಿಲ್ಲದೆ, ಬೆಳಕು ಕಾಣದೆ, ಮನುಷ್ಯರ ಮುಖವನ್ನು ನೋಡದೆ, ಬಹಳ ಸಂಕಟದಲ್ಲಿ ಬಿದ್ದಿದ್ದರು. ಕ್ರಿಸ್ತಿಯನು ತನ್ನ ದುರ್ಬುದ್ಧಿಗೋಸ್ಕರ ಇಬ್ಬರೂ ಇಂಥ ಕಷ್ಟದಲ್ಲಿ ಬಿದ್ದಿದ್ದೇವೆಂದು ಆಲೋಚನೆ ಮಾಡಿ ಮಹಾ ವ್ಯಸನ ಪಟ್ಟನು.

ನಿರಾಶಾಸುರನು ಹಿಡಿದ ದಿವಸದ ಸಾಯಂಕಾಲದಲ್ಲಿ ದಿಗಿಲಮ್ಮ ಎಂಬ ತನ್ನ ಹೆಂಡತಿಗೆ—ನನ್ನ ಭೂಮಿಯನ್ನು ಹಾಳು ಮಾಡಿದ ಇಬ್ಬರನ್ನು ನಾನು ಹಿಡಿದು ನೆಲಮಾಳಿಗೆಯಲ್ಲಿ ಹಾಕಿದೆನೆಂದು, ಆದ ವೃತ್ತಾಂತವನ್ನೆಲ್ಲಾ ಹೇಳಿ, ಇನ್ನು ಅವರಿಗೆ ಏನು ಮಾಡಲಿ? ಹೇಳು, ಅಂದನು. ಅದಕ್ಕೆ ಅವಳು—ಅವರ್‍ಯಾರು? ಎಲ್ಲಿಯವರು? ಎಲ್ಲಿಗೆ ಹೋಗುವವರು? ಎಂದು ಕೇಳಿದಳು. ಅವನು ಅದನ್ನು ಹೇಳಿದ ಮೇಲೆ, ಅವಳು—ಮುಂಜಾನೆ ಅವರಿಗೆ ಕನಿಕರವಿಲ್ಲದೆ ಹೊಡೆಯ ಬೇಕೆಂದು, ಆಲೋಚನೆ ಹೇಳಿದಳು. ಈ ಪ್ರಕಾರ ಅವನು ಎದ್ದು, ಗಂಟಿರುವ ಕೆಟ್ಟ ದೊಣ್ಣೆಯನ್ನು ತೆಗದು ಕೊಂಡು, ಅವರು ಇದ್ದ ನೆಲಮಾಳಿಗೆಯಲ್ಲಿ ಇಳಿದು, ಸುಮ್ಮನೆ ಕೂತಿದ್ದ ಪ್ರಯಾಣಸ್ಥರನ್ನು ನಾಯಿಗಳೇ ಎಂದು ಬೈದು, ಅವರ ಮೇಲೆ ಬಿದ್ದು, ಘಟ್ಯಾಗಿ ಹೊಡದು, ಹೊರಳಾಡುವದಕ್ಕೆ ಸಹಾ ಕೂಡದ ಹಾಗೆ ಮಾಡಿ ಬಿಟ್ಟನು. ಅವನು ಹೋದ ಮೇಲೆ ಅವರು ನರಳುತ್ತಾ ಅಂಗಲಾಚುತ್ತಾ ಉಳಿದ ಹೊತ್ತನ್ನು ಕಳದರು. ಸಂಜೆಯಾದ ಮೇಲೆ ದಿಗಿಲಮ್ಮ ತನ್ನ ಗಂಡನಾದ ನಿರಾಶಾಸುರನ ಸಂಗಡ ಅವರ ವಿಷಯವಾಗಿ ತಿರಿಗಿ ಮಾತಾಡಿ—ಅವರು ಇನ್ನೂ ಸಾಯಲಿಲ್ಲವೆಂದು ತಿಳಿದ ಮೇಲೆ, ತಮ್ಮನ್ನು ತಾವೇ ಕೊಂದು ಕೊಳ್ಳುವ ಆಲೋಚನೆಯನ್ನು ಅವರಿಗೆ ನೀನು ಹೇಳ ಬೇಕೆಂದು ಗಂಡನಿಗೆ ಹೇಳಿದಳು. ಬೆಳಗಾದ ಮೇಲೆ, ಅವನು ಮುಂಚಿನ ಪ್ರಕಾರ ಕ್ರೂರ ಮುಖದಿಂದ ಅವರ ಹತ್ತರ ಹೋಗಿ, ನಿನ್ನೆ ದಿವಸ ತಾನು ಹೊಡದ ಪೆಟ್ಟುಗಳಿಂದ ಅವರ ಮೈ ಎಲ್ಲಾ ನೋಯುತ್ತದೆಂದು ತಿಳಿದು, ನೀವು ಈ ಸ್ಥಳದಿಂದ ಎಂದಿಗೂ ಹೊರಗೆ ಬರಲಾರಿರಿ. ಇಷ್ಟು ತೊಂದರೆ

ಯಾದ ಜೀವವನ್ನು ಯಾಕೆ ಇಟ್ಟು ಕೊಂಡಿದ್ದೀರಿ? ಕತ್ತಿಯಿಂದಾಗಲಿ ವಿಷದಿಂದಾಗಲಿ ಈಗಲೇ ಜೀವ ಕಳಕೊಂಡರೆ ಒಳ್ಳೇದು, ಅಂದನು. ಅದಕ್ಕೆ ಅವರು—ಸಾಕು ಇಂಥಾ ಮಾತು ಬೇಡ, ಅನಲು, ಅವನು ಕಠೋರ ದೃಷ್ಟಿಯಿಂದ ಅವರ ಮೇಲೆ ಹಾರಿ ಬಿದ್ದು, ಕೈಯಿಂದ ಅವರನ್ನು ಸಂಹರಿಸುವದಕ್ಕೆ ಮನಸ್ಸು ಮಾಡಿದಾಗ, ಬೇಸಿಗೆ ಕಾಲದಲ್ಲಿ ಅವನಿಗೆ ಬಂದಾನೊಂದು ವೇಳೆ ಆಗುವ ಮೂರ್ಛೆವಾಯು ಬಂದು ಅವನ ಕೈ ಜೋಲು ಬಿದ್ದದರಿಂದ ಅವರನ್ನು ಕೊಲ್ಲುವದಕ್ಕೆ ಕೂಡದೆ, ಅವನು ತನ್ನ ಮನೆಗೆ ತಿರಿಗಿ ಹೋದ ಮೇಲೆ, ಸೆರೆಯವರು ಏಕಾಂತವಾಗಿದ್ದು ಅವನು ಹೇಳಿದ ಆಲೋಚನೆಯ ಪ್ರಕಾರ ಮಾಡೋಣೋ? ಬೇಡವೋ? ಎಂಬ ವಿಷಯದಲ್ಲಿ ಸಂಭಾಷಿಸಿದ್ದು ಹ್ಯಾಗಂದರೆ,

ಕ್ರಿ. ಸಹೋದರನೇ, ಏನು ಮಾಡುವ? ಇದು ಮಹಾ ಸಂಕಟವಾದ ಜೀವ. ಈ ಪ್ರಕಾರ ಬದುಕ ಬೇಕೋ? ಜೀವ ತೊರ ಕೊಳ್ಳ ಬೇಕೋ? ಯಾವದು ಒಳ್ಳೇದೋ? ನನಗೆ ತಿಳಿಯುವದಿಲ್ಲ. ನಾನು ಬದುಕುವದಕ್ಕಿಂತ ಉರ್ಲು ಹಾಕಿ ಕೊಳ್ಳುವದು ವಾಸಿ ಎಂದು ನೆನಸುತ್ತೇನೆ. ಈ ನೆಲಮಾಳಿಗೆಗಿಂತ ಸಮಾಧಿಯು ಸುಖವಾಗಿದೆ. ಈ ರಾಕ್ಷಸನ ಕೈಯಲ್ಲಿ ಯಾವಾಗಲೂ ಬಿದ್ದೇ ಇರ ಬೇಕೋ?

ಕೊ. ನಾವು ಈಗ ಇರುವ ಸ್ಥಿತಿ ಭಯಂಕರವಾಗಿದೆ ಹೌದು. ಮತ್ತು ಎಂದೂ ಈ ಪ್ರಕಾರ ಇರುವದಕ್ಕಿಂತ ಮರಣವು ಬಹು ಹಿತವಾಗಿದೆ. ಆದರೂ ನಾವು ಹೋಗುವ ದೇಶದ ಯಜಮಾನನು, ನೀನು ಹತ್ಯ ಮಾಡ ಬಾರದೆಂದು ಕೊಟ್ಟ ಅಪ್ಪಣೆ ಜ್ಞಾಪಕ ಮಾಡಿ ಕೊಳ್ಳ ಬೇಕು. ಯಾರನ್ನು ಕೊಲ್ಲ ಬಾರದು. ಮತ್ತು ರಾಕ್ಷಸನ ಆಲೋಚನೆಗೆ ಸಮ್ಮತಿಸಿ ನಮ್ಮನ್ನು ನಾವೇ ಕೊಂದು ಕೊಳ್ಳುವದು ಬಹು ಅಧಿಕವಾದ ಪಾಪವಾಗಿದೆ. ಮತ್ತೊಬ್ಬನನ್ನು ಕೊಲ್ಲುವವನು ಅವನ ಶರೀರವನ್ನು ಮಾತ್ರ ಕೊಲ್ಲ ಶಕ್ತನಾಗಿದ್ದಾನೆ. ಆದರೆ ತನ್ನನ್ನು ಕೊಂದು ಕೊಳ್ಳುವವನು ಶರೀರವನ್ನೂ ಆತ್ಮವನ್ನೂ ಕೂಡಾ ನಾಶನ ಮಾಡುತ್ತಾನೆ. ಅದಲ್ಲದೆ ಸಮಾಧಿಯು ಸುಖವೆಂದು ಹೇಳುವ

ನೀವು, ಹತ್ಯೆ ಮಾಡಿದವರಿಗೆ ನಿಶ್ಚಯವಾಗಿ ಪ್ರಾಪ್ತಿಸುವ ನರಕ ವನ್ನು ಮರೆತಿರೋ? ಯಾಕಂದರೆ, ನರಹಿಂಸಕನು ನಿತ್ಯಜೀವವನ್ನು ಹೊಂದುವದಿಲ್ಲ. ಅದಲ್ಲದೆ ನಿರಾಶಾಸುರನೆಂಬ ರಾಕ್ಷಸನ ಬಂಧ ಕವು ಶಾಶ್ವತವಲ್ಲವೆಂದು ತಿಳುಕೊಂಡಿರುವ ಬೇರೊಬ್ಬರು ನಮ್ಮ ಹಾಗೆಯೇ ಅವನ ಕೈಗೆ ಶಿಕ್ಕಿದ ಮೇಲೆ ತಪ್ಪಿದ್ದಾರೆಂದು ವರ್ತ ಮಾನ ಕೇಳಿದ್ದೇನೆ. ಒಂದು ವೇಳೆ ಸೃಷ್ಟಿ ಕರ್ತನಾದ ದೇವರು ಈ ರಾಕ್ಷಸನು ಸಾಯುವ ಹಾಗೆ ಅಪ್ಪಣೆ ಕೊಡ ಬಹುದು; ಅಥ ವಾ, ಒಂದು ದಿವಸ ಶೆರೆಮನೆಯ ಬೀಗ ಹಾಕುವದಕ್ಕೆ ಅವನಿಗೆ ಮರತು ಹೋಗ ಬಹುದು. ಇಲ್ಲವೆ ನಮ್ಮ ಹತ್ತರ ಬಂದಾಗ ಇನ್ನೊಂದು ಸಾರಿ ಮೂರ್ಛೆವಾಯು ಬಂದು ಕೈ ಕಾಲು ಬಿದ್ದು ಹೋಗ ಬಹುದು. ಅವನಿಗೆ ತಿರಿಗಿ ಮೂರ್ಛೆ ಬಂದರೆ ನಾನು ಪೌ ರುಷವಾಗೆದ್ದು ಅವನಿಂದ ತಪ್ಪಿ ಕೊಳ್ಳುವದಕ್ಕೆ ನನ್ನ ಕೈಲಾಗುವ ಮಟ್ಟಿಗೂ ಪ್ರಯತ್ನ ಮಾಡುವೆನು. ಆಗಲೇ ಪ್ರಯತ್ನ ಮಾಡ ಬೇಕಾಗಿತ್ತು. ಸಹೋದರನೇ, ಹ್ಯಾಗಾದರೂ ನಾವು ತಾಳ್ಮೆಯಿಂ ದಿದ್ದು ಸ್ವಲ್ಪ ಸಹಿಸುವ. ಸುಖವಾಗಿ ಬಿಡುಗಡೆಯಾಗುವ ಸಮ ಯವು ಬಂದೀತು. ಆದದರಿಂದ ನಾವು ನಮ್ಮನ್ನು ಕೊಂದು ಕೊಳ್ಳ ದೆ ಇರುವ. ಈ ಮೊದಲಾದ ಬುದ್ಧಿಗಳಿಂದ ಕೋರಿಕೆಗೌಡನು ತನ್ನ ಸಹೋದರನ ಮನಸ್ಸನ್ನು ಸಂತೈಸಲು, ಅವರು ಕತ್ತಲೆ ಯಾದ ನೆಲಮಾಳಿಗೆಯೊಳಗೆ ದುಃಖದಿಂದಲೂ ವ್ಯಾಕುಲದಿಂದಲೂ ಆ ದಿನವನ್ನು ಕಳೆದರು.

ಸಂಜೆ ಹೊತ್ತಿನಲ್ಲಿ ಶೆರೆಯವರು ತಾನು ಹೇಳಿದ ಆಲೋಚ ನೆಯ ಪ್ರಕಾರ ಮಾಡಿದರೋ ಎಂದು ನೋಡುವದಕ್ಕೆ ಆ ರಾಕ್ಷಸನು ತಿರಿಗಿ ನೆಲಮಾಳಿಗೆಯಲ್ಲಿ ಇಳಿದು ಬಂದಾಗ, ಅವರು ಅನ್ನಪಾನ ವಿಲ್ಲದದರಿಂದಲೂ ಹೊಡದ ಪೆಟ್ಟುಗಳ ನೋವಿನಿಂದಲೂ ಉಸುರು ಬಿಡುವದೇ ಕಷ್ಟವಾಗಿ ಜೀವ ಮಾತ್ರದಲ್ಲಿ ಇದ್ದರು. ಅವರು ಜೀವ ದಿಂದಿರುವದನ್ನು ನೋಡಿ, ಅವನು ಮಹಾ ರೌದ್ರ ಪಟ್ಟು ನಾನು ಹೇಳಿದ ಆಲೋಚನೆಯನ್ನು ನೀವು ಅನುಸರಿಸದ ಕಾರಣ ನೀವು

ಹುಟ್ಟದೆ ಇದ್ದರೆ ವಾಸಿ. ನಿಮ್ಮ ಗತಿ ಶಾನೆ ಕಷ್ಟವಾಗಿರುವದು, ಅಂ
ದನು. ಇದಕ್ಕೆ ಅವರು ಬಹಳವಾಗಿ ನಡುಗಿದರು. ಕ್ರಿಸ್ತಿಯನು
ಮೂರ್ಛೆ ಹೋದನೆಂದು ಕಾಣುತ್ತದೆ. ಹಾಗೇ ಅವನು ಸ್ವಲ್ಪ
ಎಚ್ಚತ್ತ ಮೇಲೆ ರಾಕ್ಷಸನು ಹೇಳಿದ ಮಾತು ಅನುಸರಿಸ ಬೇ
ಕೋ? ಬೇಡವೋ? ಎಂಬ ಸಂಭಾಷಣೆ ತಿರಿಗಿ ಮಾಡಿ, ಅದನ್ನು
ಮಾಡಿದರೆ ಒಳ್ಳೇದೆಂದು ಕ್ರಿಸ್ತಿಯನು ಹೇಳಿದ್ದಕ್ಕೆ, ಕೋರಿಕೆಗಾ
ಡನು ಹೇಳಿದ ಎರಡನೇ ಉತ್ತರವೇನಂದರೆ,

ಕೋ. ಸಹೋದರನೇ, ನಿಮ್ಮ ಮುಂಚಿನ ಶೂರಕೃತ್ಯ
ಗಳು ನೆನಪಾಗುವದಿಲ್ಲವೋ? ಸಂಹಾರಕನೂ, ಮರಣದ ನೆರಳಿನ
ತಗ್ಗಿನಲ್ಲಿ ನೀವು ನೋಡಿ ಕೇಳಿ ಅನುಭವಿಸಿದವುಗಳೆಲ್ಲವೂ, ನಿಮ್ಮ
ನ್ನು ಅಣಗಿಸಲಾರದೆ ಹೋದವು. ಪೂರ್ವದಲ್ಲಿ ನೀವು ತಾಳಿದ ಕ
ಷ್ಟ ಭಯಗಳು ಎಂಥಾವು. ಈಗ ಮಾತ್ರ ಇಷ್ಟು ಯಾಕೆ ಭಯ
ಪಡುತ್ತೀರಿ? ನಿಮಗಿಂತ ಬುದ್ಧಿಯೂ ಜ್ಞಾನವೂ ಕಡಿಮೆಯಾದ
ವಿದ್ಯಾಹೀನನಾದ ನಾನು ನಿಮ್ಮ ಸಂಗಡ ಈ ನೆಲಮಾಳಿಗೆಯ ಶೆರೆ
ಯಲ್ಲಿದ್ದೇನೆ ನೋಡಿರಿ. ಈ ರಾಕ್ಷಸನು ನಿಮಗೆ ಮಾತ್ರವಲ್ಲ, ನನ
ಗೂ ಅನ್ನಪಾನ ಕೊಡದೆ ಶರೀರಕ್ಕೆ ಘಾಯ ಮಾಡಿದ್ದಾನೆ.
ಬೆಳಕು ಕಾಣದ ಕಷ್ಟ ನನಗೂ ಬಂತು. ಆದರೆ ಇನ್ನೂ ಸ್ವಲ್ಪ
ತಾಳ್ಮೆಯಿಂದಿರುವ. ಮಾಯಾಪುರದ ಸಂತೆಯಲ್ಲಿ ನೀವು ಸಂಕೋ
ಲೆ ಪಂಜರ ದುರ್ಮರಣಗಳಿಗೆ ಭಯ ಪಡದೆ ಮಾಡಿದ ಪೌರುಷ
ವನ್ನು ಜ್ಞಾಪಕ ಮಾಡಿ ಕೊಳ್ಳಿರಿ. ನಾವು ಆದ ಮಟ್ಟಿಗೂ ತಾಳಿ
ಕ್ರಿಸ್ತಿಯರಿಗೆ ಅಯೋಗ್ಯವಾದ ನಾಚಿಕೆಗೆ ದೂರವಾಗಿರುವ.

ತರುವಾಯ ತಿರಿಗಿ ರಾತ್ರಿಯಾಗಲು ರಾಕ್ಷಸನೂ ಅವನ ಹೆಂ
ಡತಿಯೂ ಮಲಗಿದಾಗ ಅವಳು ಶೆರೆಯವರ ಸಮಾಚಾರವೇನು?
ನೀನು ಹೇಳಿದ ಮಾತಿನ ಪ್ರಕಾರ ಅವರು ಮಾಡಿದರೋ? ಎಂದು
ಕೇಳಿದ್ದಕ್ಕೆ, ಅವನು—ಅವರು ಮೊಂಡಕಳ್ಳರೇ ಸರಿ. ತಮ್ಮನ್ನು
ಕೊಂದು ಕೊಳ್ಳುವದಿಲ್ಲವೆಂದು ಎಲ್ಲಾ ಕಷ್ಟವನ್ನು ತಾಳುತ್ತಾರೆ,
ಅಂದನು. ಅದಕ್ಕೆ ಅವಳು—ನಾಳೆ ಅವರನ್ನು ಕೋಟೆಯೊಳಗಿ

ರುವ ಅಂಗಳಕ್ಕೆ ಕರಕೊಂಡು ಬಂದು, ನೀನು ಮುಂಚೆ ಕೊಂದವರ ಎಲುವುಗಳನ್ನೂ ತಲೆಬುರಡೆಗಳನ್ನೂ ಅವರಿಗೆ ತೋರಿಸಿ, ಮುಂಚೆ ನಿಮ್ಮ ಜತೆಗಾರರನ್ನು ಸೀಳಿದ ಪ್ರಕಾರ ವಾರ ಮುಗಿಯುವ ಮೊದಲು ನಿಮ್ಮನ್ನು ಸೀಳುವೆನೆಂದು ಅವರನ್ನು ಬೆದರಿಸು, ಅಂದಳು.

ಬೆಳಗಾದ ಮೇಲೆ ರಾಕ್ಷಸನು ಅವರ ಹತ್ತರ ಬಂದು ಅವರನ್ನು ಕೋಟೆಯೊಳಗಿರುವ ಅಂಗಳಕ್ಕೆ ವೈದು, ಹೆಂಡತಿ ಹೇಳಿದ ಪ್ರಕಾರ ಅವರಿಗೆ ತೋರಿಸಿ, ಇವರು ಮುಂಚೆ ನಿಮ್ಮ ಹಾಗೆ ಪ್ರಯಾಣಸ್ಥರಾಗಿದ್ದು ನೀವು ಮಾಡಿದ ಹಾಗೆ ನನ್ನ ಭೂಮಿಯನ್ನು ಹಾಳು ಮಾಡಿದರು. ನಾನು ನನ್ನ ಮನಸ್ಸಿಗೆ ಬಂದಾಗ ಅವರನ್ನು ಸೀಳಿ ಬಿಟ್ಟೆನು. ಇದೇ ಪ್ರಕಾರ ಹತ್ತು ದಿನಗಳೊಳಗೆ ನಿಮ್ಮನ್ನು ಸೀಳಿ ಬಿಡುವೆನು. ಈಗ ಹೋಗಿರಿ. ನಿಮ್ಮ ನೆಲಮಾಳಿಗೆಗೆ ತಿರಿಗಿ ಇಳಿದು ಹೋಗಿರಿ, ಅಂದನು. ಈ ಪ್ರಕಾರ ಹೇಳಿ ಮಾರ್ಗದಲ್ಲೆಲ್ಲಾ ಅವರನ್ನು ಹೊಡೆಯುತ್ತಾ ಸೆರೆಗೆ ಕರಕೊಂಡು ಹೋದನು. ಆದದರಿಂದ ಅವರು ಶನಿವಾರವೆಲ್ಲಾ ಮುಂಚಿನ ಹಾಗೆಯೇ ದಿಕ್ಕಿಲ್ಲದವರಾಗಿ ಬಿದ್ದಿದ್ದರು. ರಾತ್ರಿಯಾದಾಗ ದಿಗಿಲಮ್ಮನೂ ಅವಳ ಗಂಡನಾದ ನಿರಾಶಾಸುರನೂ ಮಲಗಿದ ಮೇಲೆ ತಿರಿಗಿ ಸೆರೆಯವರ ವಿಷಯದಲ್ಲಿ ಮಾತಾಡಲಾಗಿ, ಮುದುಕನಾದ ರಾಕ್ಷಸನು, ತಾನು ಹೊಡೆಯುವದರಿಂದಲಾದರೂ ಆಲೋಚನೆ ಹೇಳುವದರಿಂದಲಾದರೂ ನಾನು ಅವರನ್ನು ಸಂಹರಿಸಲಾರೆನು. ಇದಕ್ಕೆ ಆಶ್ಚರ್ಯ ಪಡುತ್ತೇನೆಂದು ಹೇಳುವಾಗ, ಅವನ ಹೆಂಡತಿಯು—ಯಾರಾದರೂ ಬಂದು ತಮ್ಮನ್ನು ಬಿಡುಗಡೆ ಮಾಡುವರೆಂದು ಅವರು ಕೋರುತ್ತಾರೆ. ಇಲ್ಲವೆ ತಮ್ಮ ಹತ್ತರ ಇರುವ ಕಳ್ಳಬೀಗದ ಕೈಗಳಿಂದ ತಪ್ಪಿ ಹೋಗ ಬಹುದೆಂದು ನೆನಸುತ್ತಾರೆ. ಹೀಗೆ ನನಗೆ ತೋಚುತ್ತದೆ ಎಂದು ಪ್ರತ್ಯುತ್ತರ ಕೊಡಲಾಗಿ, ರಾಕ್ಷಸನು ಓಹೋ, ಹಾಗೋ? ಬೆಳಗಾದ ಮೇಲೆ ಅವರ ವಸ್ತ್ರ ಶೋಧನೆ ಮಾಡುತ್ತೇನೆ, ಅಂದನು.

ಅಷ್ಟರೊಳಗೆ ನೆಲಮಾಳಿಗೆಯಲ್ಲಿರುವ ಪ್ರಯಾಣಸ್ಥರು ಶನಿವಾರ ಮಧ್ಯರಾತ್ರಿ ಆರಂಭಿಸಿ ಆದಿತ್ಯವಾರ ಅರುಣೋದಯದ ಪ

ರ್ಯಂತರ ಪ್ರಾರ್ಥಿಸಿದರು. ಸೂರ್ಯೋದಯಕ್ಕೆ ಸ್ವಲ್ಪ ಮುಂಚೆ ಕ್ರಿಸ್ತಿಯನು ಬಹು ಆಶ್ಚರ್ಯದಿಂದಲೂ ಸಂತೋಷದಿಂದಲೂ ಕೂಗಿ—ಓ ಇದು ಎಂಥಾ ಹುಚ್ಚ ಕೆಲಸ! ಬಿಡುಗಡೆಯಾಗ ಸಾಮರ್ಥ್ಯವಿದ್ದು ಈ ಹೇಸಿಗೆಯಾದ ಸೆರೆಯಲ್ಲಿ ಇರ ಬೇಕೋ? ನನಗೆ ವಾಗ್ದತ್ತವೆಂಬ ಬೀಗದ ಕೈ ಉಂಟಲ್ಲ? ಅದರಿಂದ ಸಂಶಯ ದುರ್ಗದಲ್ಲಿರುವ ಬೀಗಗಳನ್ನೆಲ್ಲಾ ತೆರೆಯ ಬಲ್ಲೆನು, ಅನಲಾಗಿ, ಕೋರಿಕೆಗೌಡನು—ಪ್ರಿಯ ಸಹೋದರನೇ, ಇದು ಒಳ್ಳೇ ಸಮಾಚಾರ, ಬೀಗದ ಕೈಯನ್ನು ಉಡಿಯೊಳಗಿಂದ ಬೇಗ ತೆಗೆದು ನೋಡಿರಿ, ಅಂದನು.

ಕ್ರಿಸ್ತಿಯನು ಅದನ್ನು ಉಡಿಯೊಳಗಿಂದ ತೆಗೆದು ನೆಲಮಾಳಿಗೆಯ ಬಾಗಲಿನ ಬೀಗಕ್ಕೆ ಹಾಕಿ ನೋಡಿದಾಗ, ಬೀಗದ ಕೈಯನ್ನು ತಿರುಗಿಸಿದಾಗಲೇ ಬಾಗಲು ತೆರದದರಿಂದ ಕ್ರಿಸ್ತಿಯನೂ ಕೋರಿಕೆಗೌಡನೂ ಇಬ್ಬರು ಹೊರಗೆ ಬಂದರು. ತರುವಾಯ ಅಂಗಳಕ್ಕೆ ಹೋಗುವ ಬಾಗಲಿನ ಹತ್ತರ ಬಂದು ಅದನ್ನು ಸಹ ತನ್ನ ಬೀಗದ ಕೈಯಿಂದ ತೆರೆದನು. ಇನ್ನು ತಲೆ ಬಾಗಲು ತೆರಿಯ ಬೇಕಾಯಿತು. ಅದರ ಬೀಗವನ್ನು ತಿರುಗಿಸುವದಕ್ಕೆ ಕಷ್ಟವಿದ್ದಾಗ್ಯೂ ಅದನ್ನು ಸಹ ಆ ಬೀಗದ ಕೈ ತೆರೆಯಿತು. ತರುವಾಯ ಅವರು ತ್ವರೆಯಾಗಿ ಓಡಿ ಹೋಗುವದಕ್ಕೆ ಬಾಗಲನ್ನು ನೂಕಿದಾಗ ಅದು ಗಿರುಗುಟ್ಟಿದದರಿಂದ ರಾಕ್ಷಸನು ಎಚ್ಚತ್ತು ಅತಿವೇಗದಿಂದ ಸೆರೆಯವರ ಹಿಂದೆ ಹತ್ತುವದಕ್ಕೆ ಎದ್ದನು. ಆಗ ತಿರಿಗಿ ಮೂರ್ಛೆವಾಯು ಬಂದದರಿಂದ ಸ್ವಲ್ಪವಾದರೂ ಹಿಂಬಾಲಿಸಲಾರದಿದ್ದನು. ತರುವಾಯ ಅವರು ಮುಂದೆ ಹೋಗಿ ಅವನ ಪ್ರಾಂತ್ಯವನ್ನು ದಾಟಿ, ಸುರಕ್ಷಿತವಾಗಿ ರಾಜಮಾರ್ಗಕ್ಕೆ ಸೇರಿದರು.

ಬೇಲಿಯನ್ನು ದಾಟಿದ ಮೇಲೆ, ಅವರು ಹಿಂದೆ ಬರುವವರು ಇನ್ನು ನಿರಾಶಾಸುರನೆಂಬ ರಾಕ್ಷಸನ ಕೈಯಲ್ಲಿ ಬೀಳದ ಹಾಗೆ ಏನು ಮಾಡುವ? ಎಂದು ಆಲೋಚನೆ ಮಾಡಿ, ಸಮ್ಮತಿಸಿದ ಮೇಲೆ, ಅಲ್ಲಿ ಒಂದು ಸ್ತಂಭವನ್ನು ನಿಲ್ಲಿಸಿ, ಅದರ ಮೇಲೆ—ಈ ಬೇಲಿಯಿಂದ

ಆಚೆಗೆ ಹೋಗುವ ದಾರಿ, ಪರಲೋಕರಾಜ್ಯದ ಅರಸನನ್ನು ಉದಾಸೀನ ಮಾಡಿ, ಅವನ ಪರಿಶುದ್ಧ ಪ್ರಯಾಣಸ್ಥರನ್ನು ಕೆಡಿಸುವದಕ್ಕೆ ನೋಡುವ ನಿರಾಶಾಸುರನೆಂಬ ರಾಕ್ಷಸನ ಸಂಶಯದುರ್ಗವೆಂಬ ಕೋಟೆಗೆ ಹೋಗುತ್ತದೆಂದು, ಶಾಸನ ಬರೆದರು. ಈ ಶಾಸನವನ್ನು ನೋಡಿ ಕೊಂಡು ಹಿಂದೆ ಬರುವವರಲ್ಲಿ ಅನೇಕರು ಗಂಡಾಂತರಕ್ಕೆ ತಪ್ಪಿದರು. ಸ್ತಂಭವನ್ನು ನಿಲ್ಲಿಸಿದ ಮೇಲೆ ಕ್ರಿಸ್ತಿಯನೂ ಕೋರಿಕೆಗೌಡನೂ ಹಾಡಿದ ಪದವೇನಂದರೆ,

ದಾರಿದಪ್ಪಲು ಮೋಸವಾಯಿತು
ಶೇರಿದೆವು ಬಹು ಕಷ್ಟದಲಿ ಮತ್ತೆ
ನೀರಿನಲಿ ಮುಳುಗಿದೆವು ಮಿಂಚುಗಳೊಡನೆ ಗುಡುಗುಗಳು ||
ಘೋರ ಭಯವನು ಮಾಡೆ ದುಷ್ಟನ
ಕ್ರೂರ ಶೆರೆಯಲಿ ಸಿಕ್ಕಿ ನೊಂದೆವು
ವಿಾರಿದಿಂನೀ ರಾಜಮಾರ್ಗವ ಹಿಡಿವುದುತ್ತಮವು ||

---

## 16. The Delectable Mountains.

## ೧೬. ರಮ್ಯ ಪರ್ವತಗಳು.

---

ತರುವಾಯ ಅವರು ಮುಂದೆ ನಡೆದು ರಮ್ಯ ಪರ್ವತಗಳಿಗೆ ಶೇರಿದರು. ಅವು ಚಿಯೋನ್ ಪರ್ವತದ ಯಜಮಾನನ ಭೂಮಿಯಾಗಿದ್ದದರಿಂದ ಅವರು ಹೊಲ ತೋಟ ವನಾದಿಗಳನ್ನು ನೋಡುವದಕ್ಕೆ ಮೇಲೆ ಏರಿ, ನೀರು ಕುಡಿದು, ಹಣ್ಣುಗಳನ್ನು ಕಿತ್ತು ತಿಂದರು. ಆ ಪರ್ವತಗಳ ಮೇಲೆ ಮಂದೆಗಳನ್ನು ಮೇಯಿಸುವ ಕುರುಬರು ಮಾರ್ಗದ ಅಂಚಿನಲ್ಲಿ ನಿಂತಿರುವದನ್ನು ನೋಡಿ, ಪ್ರಯಾಣಸ್ಥರು ಅವರ ಹತ್ತಿರ ಹೋಗಿ, ಕೋಲೂರಿ ಕೊಂಡು—

ಈ ರಮ್ಯ ಪರ್ವತಗಳು ಯಾರ ಭೂಮಿ? ಇವುಗಳ ಮೇಲೆ ಮೇ ಯುವ ಕುರಿಗಳು ಯಾರವು? ಎಂದು ಕೇಳಿದರು.

ಕುರುಬರು. ಈ ಪರ್ವತಗಳು ಇಮ್ಮಾನುವೇಲೆಂಬ ಅರಸನ ದೇಶವು. ಅವನ ರಾಜಪಟ್ಣವು ಇಲ್ಲಿಂದ ಕಾಣುತ್ತದೆ. ಕುರಿಗಳು ಸಹ ಅವನವುಗಳಾಗಿವೆ. ಅವನು ತನ್ನ ಜೀವವನ್ನು ಅವುಗಳಿಗೋಸ್ಕರ ಕೊಟ್ಟಿದ್ದಾನೆ.

ಕ್ರಿ. ಪರಲೋಕಪಟ್ಣಕ್ಕೆ ಹೋಗುವ ಮಾರ್ಗವಿದೇಯೋ?

ಕುರು. ಇದು ಹೌದು.

ಕ್ರಿ. ಆ ಪಟ್ಣಕ್ಕೆ ಇಲ್ಲಿಂದ ಎಷ್ಟು ದೂರವದೆ?

ಕುರು. ಅದರಲ್ಲಿ ಶೇರಲಿಕ್ಕೆ ಅಪ್ಪಣೆ ಹೊಂದಿದವರಿಗೆ ಮಾರ್ಗ ಹತ್ತರ. ಮಿಕ್ಕಾದವರಿಗೆ ಅತಿ ದೂರ.

ಕ್ರಿ. ಮಾರ್ಗವು ಭದ್ರವೋ? ಗಂಡಾಂತರ ಉಳ್ಳದ್ದೋ?

ಕುರು. ಶಕ್ಕಂಥವರಿಗೆ ಭದ್ರವೇ. ಆದರೆ ಅಕ್ರಮಕಾರರು ಅದರಲ್ಲಿ ಬೀಳುವರು.

ಕ್ರಿ. ಮಾರ್ಗದಲ್ಲಿ ಬಳಲಿ ದಣಿದವರಿಗೆ ಇಲ್ಲಿ ಏನಾದರೂ ಆಶ್ರಯ ಉಂಟೋ?

ಕುರು. ಪರೋಪಕಾರವನ್ನು ಮರೆಯದಿರ ಬೇಕೆಂದು ಈ ಪರ್ವತಗಳ ಯಜಮಾನನು ನಮಗೆ ಆಜ್ಞಾಪಿಸಿದದರಿಂದ ನಮ್ಮಲ್ಲಿರುವ ಪದಾರ್ಥವೆಲ್ಲಾ ನಿಮ್ಮದಾಗಿದೆ.

ತರುವಾಯ ನನ್ನ ಸ್ವಪ್ನದಲ್ಲಿ ಕಂಡದ್ದೇನಂದರೆ, ಇವರು ಪ್ರಯಾಣಸ್ಥರೆಂದು ಕುರುಬರು ತಿಳಿದ ಮೇಲೆ, ನೀವು ಎಲ್ಲಿಂದ ಬಂದಿರಿ? ಈ ಮಾರ್ಗದಲ್ಲಿ ಹ್ಯಾಗೆ ಶೇರಿದಿರಿ? ಶೇರಿದವರಲ್ಲಿ ಕೆಲವರು ಮಾತ್ರ ಇಲ್ಲಿ ಬರುತ್ತಾರೆ. ನೀವು ಈ ಮಾರ್ಗವನ್ನು ಸ್ಥಿರವಾಗಿ ಹಿಡಿದದ್ದು ಹ್ಯಾಗೆ? ಎಂಬ ಈ ಮೊದಲಾದ ಪ್ರಶ್ನೆಗಳನ್ನು ಕೇಳಿದ್ದಕ್ಕೆ ಅವರು ಬೇರೆ ಸ್ಥಳಗಳಲ್ಲಿ ಹೇಳಿದ ಪ್ರಕಾರ ಉತ್ತರ ಕೊಟ್ಟಾಗ, ಕುರುಬರು ಅವರ ಉತ್ತರಗಳನ್ನು ಕೇಳಿ, ಸಂತೋಷ ಪಟ್ಟು,

ಬಹಳ ಪ್ರೀತಿಯಿಂದ ಅವರನ್ನು ನೋಡಿ, ರಮ್ಯ ಪರ್ವತಗಳಿಗೆ ಬಂದದ್ದು ಒಳ್ಳೇದಾಯಿತು, ಎಂದು ಹೇಳಿದರು.

ತರುವಾಯ ಜ್ಞಾನಯ್ಯ ಅನುಭವಯ್ಯ ಜಾಗರಯ್ಯ ನಿಷ್ಕಪಟಯ್ಯ ಎಂಬ ಕುರುಬರು ಅವರ ಕೈಗಳನ್ನು ಹಿಡಿದು, ಅವರನ್ನು ಗುಡಾರಗಳ ಹತ್ತರ ವೈದು, ಸಿದ್ಧವಾದ ಊಟಗಳನ್ನು ಬಡಿಸಿ, ನೀವು ಸ್ವಲ್ಪ ಹೊತ್ತು ಇಲ್ಲಿ ಇಳು ಕೊಂಡು ಚನ್ನಾಗಿ ನಮ್ಮ ಪರಿಚಿತಿ ಮಾಡಿ ರಮ್ಯ ಪರ್ವತಗಳಲ್ಲಿರುವ ಒಳ್ಳೇ ವಸ್ತುಗಳಿಂದ ಇನ್ನೂ ಅಧಿಕವಾಗಿ ವಿಶ್ರಮಿಸಿ ಕೊಂಡು ಹೊರಡ ಬೇಕೆಂದರು. ಅದಕ್ಕೆ ಇವರು ಸಮ್ಮತಿಸಿದ ಮೇಲೆ ಬಹಳ ಹೊತ್ತು ಹೋದದರಿಂದ ಆ ರಾತ್ರಿ ಅಲ್ಲಿ ಇಳು ಕೊಂಡರು.

ತರುವಾಯ ನನ್ನ ಸ್ವಪ್ನದಲ್ಲಿ ಕಂಡದ್ದೇನಂದರೆ, ಉದಯವಾದ ಮೇಲೆ ಕುರುಬರು ಕ್ರಿಸ್ತಿಯನನ್ನೂ ಕೋರಿಕೆಗೌಡನನ್ನೂ ಪರ್ವತಗಳ ಮೇಲೆ ತಿರುಗಾಡುವದಕ್ಕೆ ಕರದಾಗ, ಅವರು ಹೊರಟು ಸುತ್ತಲೂ ಇರುವ ಒಳ್ಳೇ ಪ್ರದೇಶವನ್ನು ನೋಡುತ್ತಾ, ಸ್ವಲ್ಪ ದೂರ ಸಂಚರಿಸಿದರು. ತರುವಾಯ ಕುರುಬರು ಈ ಪ್ರಯಾಣಸ್ಥರಿಗೆ ಕೆಲವು ಅಪರೂಪಗಳನ್ನು ತೋರಿಸೋಣೋ ಎಂದು ಒಬ್ಬರನ್ನೊಬ್ಬರು ಕೇಳಿ ಸಮ್ಮತಿಸಿದ ಮೇಲೆ, ಬಹಳ ಉನ್ನತವಾಗಿ ನೆಟ್ಟಿರುವ ಆಚೆ ಕಡೆಯ ಮೋಸಗಿರಿ ಎಂಬ ಪರ್ವತದ ತುದಿಗೆ ಮೊದಲು ಕರಕೊಂಡು ಹೋದರು. ಕ್ರಿಸ್ತಿಯನೂ ಕೋರಿಕೆಗೌಡನೂ ಅಲ್ಲಿಂದ ಕೆಳಗೆ ನೋಡಿದಾಗ, ತುದಿಯಿಂದ ಬಿದ್ದು ತುಂಡು ತುಂಡಾದ ಕೆಲವು ಮನುಷ್ಯರ ಹೆಣಗಳನ್ನು ಆ ಪರ್ವತದ ಬುಡದಲ್ಲಿ ಕಂಡರು. ಕ್ರಿಸ್ತಿಯನು ಇದೇನೆಂದು ಕೇಳಿದ್ದಕ್ಕೆ, ಕುರುಬರು, ನೀವು ಶರೀರದ ಪುನರುತ್ಥಾನದ ಬೋಧನೆಯನ್ನು ಕುರಿತು ತಪ್ಪಿ ಮೋಸ ಹೋದ ಹುಮೆನಾಯನೂ ಪಿಲೇತನು ಎಂಬವರ ಸಮಾಚಾರವನ್ನು ಕೇಳಲಿಲ್ಲವೋ? (೨ ತಿಮೊಥೆ. ೨—೧೭. ೧೮.) ಅನ್ನಲು, ಅವರು ಹೌದು, ಕೇಳಿದ್ಧೇವಂದರು. ಆಗ ಕುರುಬರು ಅವರೇ ಈ ಪರ್ವತದ ಅಡಿಯಲ್ಲಿ ತುಂಡು ತುಂಡಾದವರು. ಮತ್ತೊಬ್ಬರು ಅತ್ಯುನ್ನತವಾದ ಸ್ಥಳಗಳನ್ನು

ಏರುವದಕ್ಕೂ, ಈ ಪರ್ವತದ ಅಂಚಿಗೆ ಸಮೀಪವಾಗುವದಕ್ಕೂ, ಭಯ ಪಡುವ ಹಾಗೆ, ಇಂದಿನ ಪರಿಯಂತರ ಇವರು ಹೊಳಿಡಲ್ಪಡದೇಇದ್ದಾರೆ.

ತರುವಾಯ ಅವರು ಜಾಗರಗಿರಿ ಎಂಬ ಬೇರೊಂದು ಪರ್ವತದ ತುದಿಗೆ ಇವರನ್ನು ಕರ ಕೊಂಡು ಹೋಗಿ, ದೂರಕ್ಕೆ ನೋಡ ಬೇಕೆಂದು ಹೇಳಿದರು. ಇವರು ನೋಡಿದಾಗ ಕೆಲವು ಮನುಷ್ಯರು ಅಲ್ಲಿರುವ ಸಮಾಧಿಗಳ ಸುತ್ತಲು ತಿರುಗಾಡಿ ಒಂದೊಂದು ವೇಳೆ ಸಮಾಧಿಗಳ ಮೇಲೆ ಎಡವಿ ಬೀಳುವದನ್ನೂ, ಆ ಸ್ಥಳವನ್ನು ಬಿಟ್ಟು ಹೋಗಲಾರದೆ ಇರುವದನ್ನೂ, ಕಂಡು, ಅವರು ಕುರುಡರೆಂದು ತಿಳು ಕೊಂಡರು.

ಕ್ರಿಸ್ತಿಯನು ಇದೇನೆಂದು ಕೇಳಿದಾಗ, ಕುರುಬರು ಪ್ರತ್ಯುತ್ತರವಾಗಿ—ಈ ಪರ್ವತಗಳಿಗೆ ಸ್ವಲ್ಪ ದೂರ ಮಾರ್ಗದ ಎಡಕಡೆಯಲ್ಲಿರುವ ಮೈದಾನಿಗೆ ಹೋಗುವ ಶೇತುವೆಯನ್ನು ನೀವು ಕಾಣಲಿಲ್ಲವೋ? ಅಂದರು. ಅವರು ಹೌದು ಕಾಣುತ್ತದೆ, ಅಂದಾಗ, ಕುರುಬರು, ಆ ಶೇತುವೆಯಿಂದ ಒಂದು ಹಾದಿಯು ಸರಿಯಾಗಿ ನಿರಾಶಾಸುರನೆಂಬ ರಾಕ್ಷಸನ ಸಂಶಯದುರ್ಗಕ್ಕೆ ಹೋಗುತ್ತದೆ. ಆ ಸಮಾಧಿಗಳ ಹತ್ತರ ಇರುವ ಮನುಷ್ಯರು ಯಾತ್ರೆಯ ಮಾರ್ಗವಾಗಿ ಆ ಶೇತುವೆಯ ಪರಿಯಂತರ ಬಂದು, ರಾಜಮಾರ್ಗವು ಕರಕು ಹಾದಿಯಾದ ಕಾರಣ ಆ ಮೈದಾನ್ ಶೇರಿ ದಾಟಿ ಹೋಗ ಬೇಕೆಂದು ನಿಶ್ಚಯಿಸಿ, ರಾಕ್ಷಸನ ಕೈಯಲ್ಲಿ ಶಿಕ್ಕಿ, ಸಂಶಯ ದುರ್ಗದಲ್ಲಿ ಇರಿಸಲ್ಪಟ್ಟರು. ಅಲ್ಲಿ ಆ ರಾಕ್ಷಸನು ಅವರನ್ನು ಸ್ವಲ್ಪ ಕಾಲ ಇಟ್ಟ ಮೇಲೆ ಕಡೆಯಲ್ಲಿ ಅವರ ಕಣ್ಣುಗುಡ್ಡೆಗಳನ್ನು ಕಿತ್ತು, ಈ ಸಮಾಧಿಗಳ ಮಧ್ಯಕ್ಕೆ ಕರ ಕೊಂಡು ಹೋದನು. ಅಲ್ಲಿ ಅವರು ಇಂದಿನವರೆಗೂ ತಿರುಗಾಡುವದರಿಂದ, ವಿವೇಕದ ಮಾರ್ಗವನ್ನು ಮೀರಿ ನಡೆಯುವವನು ಸತ್ತವರ ಕೂಟದಲ್ಲಿ ಇರುವನೆಂಬ ಜ್ಞಾನಿಯ ಮಾತು ಈಡೇರಿತು (ಸಾಮತಿ. ೨೧. ೧೬). ಕ್ರಿಸ್ತಿಯನೂ ಕೋರಿಕೆಗೌಡನೂ ಇದನ್ನು ಕೇಳಿ, ಕಣ್ಣೀರು ಬಂದು, ಒಬ್ಬರನ್ನೊಬ್ಬರು ನೋಡಿದರೇ ಹೊರ್ತು ಏನೂ ಹೇಳಲಿಲ್ಲ.

ತರುವಾಯ ನಾನು ಕಂಡದ್ದೇನಂದರೆ, ಕುರುಬರು ಅವರನ್ನು ತಗ್ಗಾದ ಬೇರೊಂದು ಸ್ಥಳಕ್ಕೆ ಕರಕೊಂಡು ಹೋಗಿ, ಪರ್ವತದ ಪಾರ್ಶ್ವದಲ್ಲಿರುವ ಬಾಗಲನ್ನು ತೆರದು ಒಳಗೆ ನೋಡ ಬೇಕಂದರು. ಅವರು ಒಳಗೆ ನೋಡಿದಾಗ, ಹೊಗೆಯೂ ಕತ್ತಲೆಯೂ ಇರುವದನ್ನು ಕಂಡು, ಧಗಧಗಿಸುವ ಉರಿಯ ಶಬ್ದವನ್ನೂ ಪೀಡೆಯಲ್ಲಿರುವ ಕೆಲವರ ಕೂಗನ್ನೂ ಕೇಳಿ, ಗಂಧಕದ ವಾಸನೆಯನ್ನು ಮೂಸಿ ನೋಡಿದರು. ಕ್ರಿಸ್ತಿಯನು ಇದೇನೆಂದು ಕೇಳಿದಾಗ, ಕುರುಬರು—ಇದು ನರಕಕ್ಕೆ ಹೋಗುವ ಅಡ್ಡ ದಾರಿಯಾಗಿದೆ. ಏಸಾವನ ಪ್ರಕಾರ ತಮ್ಮ ಚೊಚ್ಚಲತನದ ಸ್ವತಂತ್ರಿಕೆಯನ್ನು ಮಾರುವವರೂ, ಯೂದನ ಪ್ರಕಾರ ಸ್ವಾಮಿದ್ರೋಹ ಮಾಡುವವರೂ, ಅಲೆಕ್ಸಂದ್ರನ ಪ್ರಕಾರ ಸುವಾರ್ತೆಗೆ ದೂಷಿಸುವವರೂ, ಅನನೀಯನೂ ಅವನ ಹೆಂಡತಿಯಾದ ಸಫೀರಳೂ ಇವರ ಪ್ರಕಾರ ಸುಳ್ಳಾಡುವವರೂ, ಮೊದಲಾದ ವಂಚಕರು, ಈ ಮಾರ್ಗದಲ್ಲಿ ಹೋಗುತ್ತಾರೆಂದು ಹೇಳಿದರು. ಆಗ ಕೋರಿಕೆಗೌಡನು ಕುರುಬರಿಗೆ ಇವರೆಲ್ಲರು ನಮ್ಮ ಪ್ರಕಾರ ಯಾತ್ರೆಗೆ ಹೋಗುವವರ ಹಾಗೆ ಇದ್ದರಲ್ಲವೋ? ಅಂದನು.

ಕು ರು. ಹೌದು, ಬಹುಕಾಲ ಯಾತ್ರಿಕರ ಪ್ರಕಾರವಿದ್ದರು.

ಕೋ. ಇಂಥ ಕಠಿಣ ಶಿಕ್ಷೆಯಲ್ಲಿ ಬಿದ್ದವರು ಯಾತ್ರೆ ದಾರಿಯಲ್ಲಿ ಎಲ್ಲಿ ಪರಿಯಂತರ ಬಂದರು?

ಕು ರು. ಕೆಲವರು ಈ ಪರ್ವತಗಳ ಪರಿಯಂತರ ಬರಲಿಲ್ಲ. ಕೆಲವರು ಇನ್ನೂ ಮುಂದೆ ಹೋದರು.

ಅದನ್ನು ಕೇಳಿ, ಯಾತ್ರಿಕರು ತಮ್ಮೊಳಗೆ—ಹಾಗಾದರೆ ಬಲವಂತನಿಂದ ಬಲ ಬೇಡಿ ಕೊಳ್ಳುವದು ಅವಶ್ಯವಾಗಿದೆ, ಅನಲಾಗಿ, ಕುರುಬರು— ಹೌದು, ಆ ಬಲವು ಶಿಕ್ಕಿದರೆ ಅದನ್ನು ಪ್ರಯೋಗಿಸ ಬೇಕಾಗುವದು, ಎಂದು ಹೇಳಿದರು.

ಅಷ್ಟರೊಳಗೆ ಪ್ರಯಾಣಸ್ಥರು ಮುಂದೆ ಹೋಗ ಬೇಕೆಂದು ಅಪೇಕ್ಷಿಸಿದ್ದಕ್ಕೆ ಕುರುಬರು ಸಮ್ಮತಿಸಿದರು. ಹಾಗೆಯೇ ಅವರೆಲ್ಲರು ಪರ್ವತಗಳ ಅಂಚಿನ ಪರಿಯಂತರ ಕೂಡಾ ಬಂದರು. ಕಡೆಗೆ

ಕುರುಬರಲ್ಲಿ ಒಬ್ಬನು ಮತ್ತೊಬ್ಬನಿಗೆ—ಈ ಪ್ರಯಾಣಸ್ಥರಿಗೆ ದುರ್ಬೀನಿಯಿಂದ ನೋಡುವ ಅಭ್ಯಾಸವಿದ್ದರೆ ಇಲ್ಲಿಂದ ಪರಲೋಕ ಪಟ್ಟಣದ ಬಾಗಲನ್ನು ತೋರಿಸ ಬಹುದು ಎಂದು ಹೇಳಿದನು. ಈ ಮಾತಿಗೆ ಪ್ರಯಾಣಸ್ಥರು ಅತಿ ಸಂತೋಷ ಪಟ್ಟು ಸಮ್ಮತಿಸಿದ ಮೇಲೆ, ಅವರು ನಿರ್ಮಲಗಿರಿ ಎಂಬ ಹೆಸರುಳ್ಳ ಉನ್ನತವಾದ ಪರ್ವತದ ತುದಿಗೆ ಇವರನ್ನು ಕರಕೊಂಡು ಹೋಗಿ, ನೋಡುವದಕ್ಕೆ ದುರ್ಬೀನಿಯನ್ನು ಕೊಟ್ಟರು. ಅವರು ನೋಡುವದಕ್ಕೆ ಪ್ರಯತ್ನ ಮಾಡಿದಾಗ್ಯೂ ಕುರುಬರು ತೋರಿಸಿದ ನರಕದ ನೆನಪಿನಿಂದ ಅವರ ಕೈಗಳು ನಡುಗಿದ ಕಾರಣ ಚನ್ನಾಗಿ ನೋಡ ಕೂಡದಿದ್ದರು. ಆ ಬಾಗಲನ್ನೂ ಪಟ್ಟಣದೊಳಗಿನ ಮಹಿಮೆಯನ್ನೂ ಸ್ವಲ್ಪ ಕಂಡ ಹಾಗಾಯಿತು. ತರುವಾಯ ಅವರು ಹೊರಟು ಹಾಡಿದ್ದೇನಂದರೆ,

ಯಾರಿಗು ತಿಳಿಯದ ಮರ್ಮವ ಕುರುಬರು
ಸಾರುವರೆಲ್ಲರಿಗುಚಿತದಲಿ ||
ತೋರದೆ ಅಡಗಿದ ಮರ್ಮವ ತಿಳಿವರೆ
ಸೇರಲು ಬೇಕೀ ಕುರುಬರನು ||

ಅವರು ಹೊರಡುವಾಗ ಕುರುಬರಲ್ಲಿ ಒಬ್ಬನು, ಅವರಿಗೆ ರಹದಾರಿಯನ್ನು ಕೊಟ್ಟನು. ಮತ್ತೊಬ್ಬನು, ಇಚ್ಛಕ ಪಿಶಾಚಿಗೆ ಜಾಗ್ರತೆಯಾಗಿರ ಬೇಕಂದನು. ಮೂರನೆಯವನು, ಮಾಟದ ಭೂಮಿಯಲ್ಲಿ ಮಲಗದ ಹಾಗೆ ನೋಡ ಬೇಕಂದನು. ನಾಲ್ಕನೆಯವನು, ದೇವರು ನಿಮ್ಮನ್ನು ಆಶೀರ್ವದಿಸಲಿ, ಅಂದನು. ತರುವಾಯ ನಾನು ಎಚ್ಚರವಾದೆನು.

---

## 17. Ignorance, Little Faith, and Flatterer.

## ೧೭. ಮೂಢಪ್ಪನೂ ಅಲ್ಪವಿಶ್ವಾಸ್ಯೆಯ್ಯನೂ ಘಾತಕ ಪಿಶಾಚಿಯೂ.

---

ಮತ್ತು ನಾನು ನಿದ್ರೆ ಗೈದು ಸ್ವಪ್ನದಲ್ಲಿ ಪರ್ವತಗಳಿಂದಿಳಿದು ಪಟ್ಣಕ್ಕೆ ಹೋಗುವ ರಾಜಮಾರ್ಗದಲ್ಲಿ ಆ ಇಬ್ಬರು ಪ್ರಯಾಣಸ್ಥರು ನಡೆಯುವದನ್ನು ಕಂಡೆನು. ಆ ಪರ್ವತಗಳ ಕೆಳಗೆ ಸ್ವಲ್ಪ ಎಡಕಡೆಯಲ್ಲಿ ಅಹಂಕಾರ ದೇಶವು ಇರುವದು. ಆ ದೇಶದಿಂದ ಬರುವ ಡೊಂಕಾದ ಶೀಳು ಹಾದಿಯು ಪ್ರಯಾಣಸ್ಥರು ಹೋಗುವ ರಾಜಮಾರ್ಗಕ್ಕೆ ಕೂಡುವದರಿಂದ, ಆ ಹಾದಿಯಿಂದ ಬಂದ ಮೂಢಪ್ಪ ಎಂಬ ಒಳ್ಳೇ ಚುರುಕಾದ ಯೌವನಸ್ಥನನ್ನು ಅವರು ಕಂಡು—ನೀವು ಯಾವ ಶೀಮೆಯಿಂದ ಬಂದಿರಿ? ಎಲ್ಲಿಗೆ ಹೋಗುತ್ತೀರಿ? ಎಂದು ಕ್ರಿಸ್ತಿಯನು ಕೇಳಿದಾಗ, ಅವನು ಹೇಳಿದ್ದೇನಂದರೆ,

ಮೂಢಪ್ಪ. ಐಯ್ಯಾ, ಅಗೋ ಅಲ್ಲಿ ಸ್ವಲ್ಪ ಎಡಕಡೆಗಿರುವ ಶೀಮೆಯಲ್ಲಿ ಹುಟ್ಟಿದೆನು. ಪರಲೋಕಪಟ್ಣಕ್ಕೆ ಹೋಗುತ್ತೇನೆ.

ಕ್ರಿ. ಆದರೆ ಬಾಗಲಲ್ಲಿ ನಿಮ್ಮನ್ನು ಹ್ಯಾಗೆ ಬಿಡುವರು? ಅಲ್ಲಿ ಸ್ವಲ್ಪ ಅಡ್ಡಿಯಾಗುವದು.

ಮೂಢ. ಬೇರೆ ಭಕ್ತರು ಶೇರುವ ಪ್ರಕಾರ ನಾನೂ ಶೇರುವೆನು.

ಕ್ರಿ. ಆದರೆ ಅವರು ಬಾಗಲು ತೆರೆಯುವ ಹಾಗೆ ನಿಮಗೆ ಏನು ಅದೆ?

ಮೂಢ. ನಾನು ಕರ್ತನಲ್ಲಿ ವಿಶ್ವಾಸಿಸುತ್ತೇನೆ. ದೇವರ ಚಿತ್ತವನ್ನು ಅನುಸರಿಸುತ್ತೇನೆ. ಮತ್ತು ಪ್ರತಿ ಮನುಷ್ಯನಿಗೆ ತಕ್ಕದ್ದನ್ನು ಸಲ್ಲಿಸುತ್ತೇನೆ. ಪ್ರಾರ್ಥನೆ ಉಪವಾಸ ಧರ್ಮಗಳನ್ನು

ಮಾಡುತ್ತೇನೆ. ನನ್ನ ಜಾತಿಯನ್ನೂ ಅಜ್ಞಾನ ಮಾರ್ಗವನ್ನೂ ಸ್ವದೇಶವನ್ನೂ ಬಿಟ್ಟು ಬಂದು ಪರಲೋಕಪಟ್ಣಕ್ಕೆ ಹೋಗುತ್ತೇನೆ.

ಕ್ರಿ. ಆದರೆ ನೀವು ಈ ಮಾರ್ಗದ ಆರಂಭದಲ್ಲಿರುವ ಇಕ್ಕಟ್ಟಿನ ಬಾಗಲಿಂದ ಪ್ರವೇಶಿಸದೆ ಡೊಂಕು ಹಾದಿಯಿಂದ ಒಳಗೆ ಬಂದ ಕಾರಣ ನಿಮ್ಮ ವಿಷಯದಲ್ಲಿ ನೀವು ಏನು ನೆನಸಿದಾಗ್ಯೂ ಲೆಕ್ಕದ ದಿವಸದಲ್ಲಿ ಪಟ್ಣದೊಳಗೆ ಪ್ರವೇಶವನ್ನು ಹೊಂದದೆ, ಕಳ್ಳನೂ ಮನೆ ಮುರಕನೂ ಎಂದು ಎಣಿಸಲ್ಪಡುವಿರಿ ಎಂದು ಭಯ ಪಡುತ್ತೇನೆ.

ಮೂಢ. ಸಾಹೇಬರೇ, ನಾನು ನಿಮ್ಮ ಗುರುತು ಏನೂ ಅರಿಯೆ. ನೀವೂ ನಾನೂ ಬಂದೇ ಮಾರ್ಗದಲ್ಲಿ ಇದ್ದೇವಷ್ಟೆ. ನೀವು ನಿಮ್ಮ ಮತದ ಪ್ರಕಾರ ನಡೆದು ಕೊಳ್ಳಿರಿ. ನಾನು ನನ್ನ ಮತದ ಪ್ರಕಾರ ನಡೆದು ಕೊಳ್ಳುವೆನು. ಇನ್ನು ನನಗೆ ಎಲ್ಲಾ ಒಳ್ಳೇದಾಗುವದೆಂದು ತೋರುತ್ತದೆ. ನೀವು ಹೇಳುವ ಬಾಗಲು ನಮ್ಮ ದೇಶಕ್ಕೆ ಬಹು ದೂರವಾಗಿದೆ ಎಂದು ಸರ್ವರು ಬಲ್ಲರು. ಅದಕ್ಕೆ ಹೋಗುವ ಮಾರ್ಗವು ಸಹ ನಮ್ಮ ದೇಶದವರಲ್ಲಿ ಯಾರಿಗೂ ತಿಳಿಯುವದಿಲ್ಲವೆಂದು ನೆನಸುತ್ತೇನೆ. ತಿಳಿದರೂ ತಿಳಿಯದೆ ಇದ್ದರೂ ಚಿಂತೆ ಇಲ್ಲ. ನಮ್ಮ ದೇಶದಿಂದ ಪರಲೋಕಪಟ್ಣಕ್ಕೆ ಹೋಗುವ ಒಳ್ಳೇ ರಮ್ಯವಾದ ಮಾರ್ಗಗಳು ಪ್ರಯಾಣಸ್ಥರಿಗೋಸ್ಕರ ಸಿದ್ಧವಾಗಿವೆ. ನಾನು ಬಹು ರಮ್ಯವಾದ ಹಾದಿಯಿಂದ ಇಲ್ಲಿಗೆ ಬಂದೆನು.

ಸತ್ಯವಾಗಿ ಆ ಮನುಷ್ಯನಲ್ಲಿ ಅಹಂಕಾರದೇಶಸ್ಥರ ಗುಣ ಉಂಟೆಂದು ಕ್ರಿಸ್ತಿಯನು ತಿಳಿದ ಮೇಲೆ, ಕೋರಿಕೆಗೌಡನಿಗೆ ಮೆಲ್ಲಗೆ ಹೇಳಿದ್ದೇನಂದರೆ, ಇವನಿಗಿಂತ ಹುಚ್ಚನು ವಾಸಿ (ಸಾಮತಿ. ೨೬—೧೨). ಏನು ಮಾಡುವ? ಇವನ ಸಂಗಡ ಹೋಗೋಣೋ? ಅಥವ ಇವನನ್ನು ಸ್ವಲ್ಪ ಬಿಟ್ಟು, ಮುಂದೆ ಹೋಗಿ, ಇವನು ಕೇಳಿದವುಗಳನ್ನು ಆಲೋಚಿಸುವದಕ್ಕೆ ಇವನಿಗೆ ಸಮಯ ಕೊಟ್ಟು, ತರುವಾಯ ಇವನಿಗೋಸ್ಕರ ಕಾದಿರೋಣೋ? ಒಂದು ವೇಳೆ ಸಮಯ ನೋಡಿ ಇವನಿಗೆ ಬುದ್ಧಿ ಹೇಳ ಬಹುದು, ಅಂದನು. ಈ ಮಾತಿಗೆ ಕೋರಿಕೆಗೌಡನು,

ತಡತಡದೊಯ್ಯನೆ ಮಕ್ಕಳಿಗ್ಹಾಲನು
ಕುಡಿಸುವ ತೆರದಲಿ ಪಡದವರು ||
ನುಡಿಯಲು ಬೇಕೀ ಮೂಢಗೆ ಒಳ್ಳೆಯ
ನಡತೆಯು ಬೇಸರ ಗೊಳ್ಳದಂತೆ ||

ಎಂಬ ಪದವನ್ನು ಹಾಡಿ, ಅವನಿಗೆ ಎಲ್ಲಾ ಒಂದೇ ಸಾರಿ ಹೇಳುವದು ಒಳ್ಳೇದಲ್ಲ, ಈಗ ಅವನನ್ನು ಬಿಟ್ಟು, ಮುಂದೆ ಹೋಗಿ, ಮತ್ತೆ ಅವನು ಗ್ರಹಿಸುವ ಪ್ರಕಾರ ಬುದ್ಧಿ ಹೇಳುವ.

ಈ ಪ್ರಕಾರ ಆಲೋಚಿಸಿ ಅವರಿಬ್ಬರು ಮುಂದೆ ಹೋದರು. ಮೂಢಪ್ಪನು ಹಿಂದಿನಿಂದ ಬಂದನು. ಅವರು ಸ್ವಲ್ಪ ದೂರ ಹೋದ ಮೇಲೆ ಗುಹೆಯು ಹಾಗೆ ಕತ್ತಲೆಯಾಗಿರುವ ಹಾದಿಯಲ್ಲಿ ಸೇರಿ, ಘಟ್ಟಿಯಾದ ಏಳು ಹಗ್ಗಗಳಿಂದ ಕಟ್ಟಲ್ಪಟ್ಟ ಮನುಷ್ಯನನ್ನು ಏಳು ಪಿಶಾಚಿಗಳು ಆ ಪರ್ವತದ ಪಾರ್ಶ್ವದಲ್ಲಿರುವ ಬಾಗಲಿನ ಹತ್ತರ ವೈಯ್ಯುವದನ್ನು ಕಂಡರು (ಮತ್ತಾ. ೧೨—೪೫. ಸಾಮತಿ. ೫—೨೨). ಆ ನೋಟಕ್ಕೆ ಅವರಿಬ್ಬರು ಭಯ ಪಟ್ಟರು. ಆ ಮೇಲೆ ಕ್ರಿಸ್ತಿಯನು ಆ ಮನುಷ್ಯನ ಗುರುತು ನೋಡಿ, ಇವನು ದ್ರೋಹಪುರದ ಹಿಂತಿರುಗುವಪ್ಪನೆಂಬವನಾಗಿರ ಬಹುದೆಂದು ನೆನಸಿದನು. ಆದರೆ ಅವನು ಶಿಕ್ಕಿ ಬಿದ್ದ ಕಳ್ಳನ ಹಾಗೆ ತಲೆ ಬೊಗ್ಗಿಸುವದರಿಂದ ಅವನ ಮುಖವನ್ನು ಪೂರ್ಣವಾಗಿ ನೋಡಲಿಲ್ಲ. ಅವನು ದಾಟಿ ಹೋದ ಮೇಲೆ ಕೋರಿಕೆಗೌಡನು ಅವನ ಬೆನ್ನು ನೋಡಿ, ಅದಕ್ಕೆ ಹಚ್ಚಿದ ಚೀಟು ಕಂಡು, ಕ್ರಿಸ್ತಿಯನಿಗೆ—ಈ ಚೀಟಿಯಲ್ಲಿ ಏನು ಬರದದೆ? ಎಂದು ಕೇಳಲು, ಕ್ರಿಸ್ತಿಯನು ಅದನ್ನು ಓದಿ, ಇವನು ಸದ್ವಿಶ್ವಾಸದ ಆಕಾರವನ್ನು ತೋರಿಸಿ ಹಿಂದಿರುಗಿದದರಿಂದ ನರಕಕ್ಕೆ ಪಾತ್ರನಾಗಿದ್ದಾನೆಂದು ಬರದದೆ, ಎಂದು ಹೇಳಿದನು.

ತರುವಾಯ ಕ್ರಿಸ್ತಿಯನು ತನ್ನ ಜತೆಗಾರನಿಗೆ—ಈ ಸ್ಥಳದಲ್ಲಿ ಒಬ್ಬ ಒಳ್ಳೇ ಮನುಷ್ಯನಿಗೆ ಸಂಭವಿಸಿದ್ದು ನೆನಪಾಗುತ್ತದೆ. ಅದೇನಂದರೆ, ಆ ಮನುಷ್ಯನ ಹೆಸರು ಅಲ್ಪವಿಶ್ವಾಸೈಯ್ಯ. ಅವನು ಭಕ್ತನು ಸರಿ. ಸತ್ಯಪುರವೆಂಬ ತಾಲೂಕಿನ ಯಥಾರ್ಥ ಗ್ರಾಮದಲ್ಲಿ

ಅವನ ಮನೆ. ಈ ಹಾದಿಯ ಪ್ರವೇಶದಲ್ಲಿ ಅದರೊಳಗುಂಟಾದ ನರಹತ್ಯಗಳಿಗೋಸ್ಕರ ಕೊಲೆ ಸಂದು ಎಂಬ ಹೆಸರು ಹೊಂದಿದ ಒಂದು ಕಾಲುದಾರಿಯು ವಿಶಾಲ ಮಾರ್ಗ ದ್ವಾರದಿಂದ ಇಳಿದು ಬರುತ್ತದೆ. ಈ ಅಲ್ಪವಿಶ್ವಾಸೈಯ್ಯನು ನಮ್ಮ ಹಾಗೆ ಯಾತ್ರೆಗೆ ಹೋಗುತ್ತಿರಲಾಗಿ, ಆ ಕೊಲೆ ಸಂದಿನಲ್ಲಿ ಕೂತು ಮಲಗಿರುವ ವೇಳೆಯಲ್ಲಿ, ಅಣ್ಣ ತಮ್ಮಂದಿರಾದ ಅರೆಗುಂಡಿಗೆನಾಯಕ, ಭರವಸಹೀನನಾಯಕ, ದುಷ್ಕರ್ಮನಾಯಕ, ಎಂಬ ಮಹಾ ಕಳ್ಳರು ಕೊಲೆ ಸಂದಿನಲ್ಲಿ ಹೊಂಚು ಹಾಕುತ್ತಾ ಇದ್ದು, ಅಲ್ಪವಿಶ್ವಾಸೈಯ್ಯನನ್ನು ಕಂಡು ತ್ವರೆಯಾಗಿ ಓಡಿ ಬಂದರು. ಈ ಸಾಧು ಮನುಷ್ಯನು ನಿದ್ರೆ ತಿಳಿದೆದ್ದು ಹೊರಡುವಾಗ ಅವರೆಲ್ಲರು ಅವನ ಮೇಲೆ ಬಿದ್ದು, ನಿಲ್ಲು, ನಿಲ್ಲು, ಎಂದು ಹೆದರಿಸಲು, ಅಲ್ಪವಿಶ್ವಾಸೈಯ್ಯನು ಕಳೆಗುಂದಿ ಯುದ್ಧ ಮಾಡಲಾರದೆಯೂ ಓಡಲಾರದೆಯೂ ಇದ್ದನು. ಅರೆಗುಂಡಿಗೆನಾಯಕನು— ನಿನ್ನ ಗಂಟು ಕೊಡು, ಅನಲು, ಅವನು ಹಣವನ್ನು ಕಳಕೊಳ್ಳ ಮನಸ್ಸಿಲ್ಲದೆ ತಡೆ ಮಾಡುವಾಗ ಭರವಸಹೀನನಾಯಕನು ಸಮೀಪಕ್ಕೆ ಬಂದು, ಅವನ ಜೇಬಿನಲ್ಲಿ ಕೈ ಹಾಕಿ ಚಿಲ್ಲರೆ ಹಣದ ಚೀಲವನ್ನು ಕಸಕೊಂಡನು. ಅದಕ್ಕೆ ಅವನು— ಕಳ್ಳರು, ಕಳ್ಳರು, ಎಂದು ಕೂಗುವಾಗ, ದುಷ್ಕರ್ಮನಾಯಕನು ತನ್ನ ಕೈಯಲ್ಲಿರುವ ದೊಂಣೆಯಿಂದ ಅಲ್ಪವಿಶ್ವಾಸೈಯ್ಯನ ತಲೆಯನ್ನು ಹೊಡದು ನೆಲಕ್ಕೆ ಕೆಡವಿದನು. ಅಲ್ಲಿ ಅವನು ಸಾಯುವಷ್ಟು ರಕ್ತ ಸುರಿಯಿತು. ಸುತ್ತಲೂ ನಿಂತ ಕಳ್ಳರು ರಾಜಮಾರ್ಗದಲ್ಲಿ ಯಾರೋ ಬರುವ ಶಬ್ದವನ್ನು ಕೇಳಿ ಸದ್ಭರವಸಪುರದ ದಯಾಸಾಗರ ರಾಜನು ಆಗಿದ್ದಾನೆಂಬ ಭಯದಿಂದ ಓಡಿ ಹೋದರು. ಸ್ವಲ್ಪ ಹೊತ್ತಾದ ಮೇಲೆ ಅಲ್ಪವಿಶ್ವಾಸೈಯ್ಯನು ಮೂರ್ಛೆ ತಿಳಿದೆದ್ದು ತಟ್ಟಾಡುತ್ತಾ ಹೊರಡುವದಕ್ಕೆ ಉಪಾಯ ಮಾಡಿದನು. ಆದ ವೃತ್ತಾಂತವು ಇಷ್ಟು.

ಕೊ. ಆದರೆ ಅವನಿಗಿದ್ದದ್ದೆಲ್ಲಾ ಅವರು ತಕ್ಕೊಂಡು ಹೋದರೋ?

ಕ್ರಿ. ಇಲ್ಲ. ಅವನ ರತ್ನಗಳಿರುವ ಸ್ಥಳವನ್ನು ಅವರು ನೋಡಲಿಲ್ಲ. ಅವು ಮಾತ್ರ ಅವನಿಗೆ ಉಳಿದವು. ಆದಾಗ್ಯೂ ಅವನ ಚಿಲ್ಲರೆ ಹಣಗಳೆಲ್ಲಾ ಕಳ್ಳರಿಗೆ ಶಿಕ್ಕಿದದರಿಂದ ಆ ಸಾಧು ಮನುಷ್ಯನು ತನಗಾದ ನಷ್ಟಕ್ಕೋಸ್ಕರ ಬಹಳ ದುಖ್ಖ ಪಟ್ಟನು. ಅವನು ಮಾರ ಕೂಡದ ರತ್ನಗಳ ಹೊರ್ತು ಕಳ್ಳರಿಗೆ ಶಿಕ್ಕದೆ ಉಳಿದ ಹಣವು ಪ್ರಯಾಣಕ್ಕೆ ಸಾಲದ ಕಾರಣ ಅವನು ಭಿಕ್ಷೆ ಬೇಡುತ್ತಾ ಹೋದನು. ಭಿಕ್ಷೆ ಮೊದಲಾದ ಉಪಾಯಗಳನ್ನು ಮಾಡಿದಾಗ್ಯೂ ಉಳಿದ ಮಾರ್ಗದಲ್ಲಿ ಅನೇಕ ಸಾರಿ ಹೊಟ್ಟೆ ಹಸಿಯಿತು.

ಕೋ. ಆದಾಗ್ಯೂ ಪರಲೋಕಪಟ್ಣದ ದ್ವಾರಪಾಲಕರಿಗೆ ತೋರಿಸ ಬೇಕಾದ ರಹದಾರಿ ಕಳ್ಳರಿಗೆ ಶಿಕ್ಕದೆ ಇದ್ದದ್ದು ಆಶ್ಚರ್ಯವಲ್ಲವೋ?

ಕ್ರಿ. ಆಶ್ಚರ್ಯವೇ ಸರಿ. ಆದಾಗ್ಯೂ ಅದು ಶಿಕ್ಕಲಿಲ್ಲ. ಹ್ಯಾಗಾದರೂ ಅವನ ಬುದ್ಧಿಯಿಂದಲ್ಲ ದೇವರ ದಯದಿಂದಲೇ ಈ ಒಳ್ಳೇ ವಸ್ತು ಅವರಿಗೆ ಶಿಕ್ಕದೆ ಉಳಿಯಿತು. ಯಾಕಂದರೆ ಅವರು ತನ್ನ ಮೇಲೆ ಬೀಳುತ್ತಾರೆಂಬ ಭಯದಲ್ಲಿ ಏನಾದರೂ ಅಡಗಿಸುವದಕ್ಕೆ ಬುದ್ಧಿಯೂ ಸಮಯವೂ ಅವನಿಗೆ ಸಾಲದೆ ಹೋಯಿತು.

ಕೋ. ಅವನ ರತ್ನಗಳು ಮಾತ್ರ ಕಳ್ಳರಿಗೆ ಶಿಕ್ಕದೆ ಇದ್ದದಕ್ಕೆ ಅವನು ಸಂತೋಷ ಪಟ್ಟನೆಂದು ನೆನಸುತ್ತೇನೆ.

ಕ್ರಿ. ಈ ಸಂತೋಷದಿಂದ ಅವನಿಗೆ ಆದರಣೆಯು ಬರಬಹುದಾಗಿತ್ತು. ಆದರೆ ತನಗಾದ ನಷ್ಟಕ್ಕೋಸ್ಕರ ಉಳಿದ ಮಾರ್ಗದಲ್ಲಿ ಅವನಿಗೆ ಹೆಚ್ಚು ಸಂತೋಷವಿರಲಿಲ್ಲ. ಆದರಣೆಯು ಸಹ ಉಂಟಾಗಲಿಲ್ಲವೆಂದು ನನಗೆ ಆ ಕಥೆಯನ್ನು ತಿಳಿದವರು ಹೇಳಿದ್ದಾರೆ.

ಕೋ. ಅಯ್ಯೋ, ಆ ಪರದೇಶಿಗೆ ಬಹಳ ದುಖ್ಖವಿತ್ತೆಂದು ಕಾಣುತ್ತದೆ.

ಕ್ರಿ. ದುಖ್ಖವಲ್ಲದೆ ಮತ್ತೇನು? ನಾವೂ ಅವನ ಹಾಗೆ ಪರಸ್ಥಳದಲ್ಲಿ ಕಳ್ಳರ ಕೈಯಲ್ಲಿ ಶಿಕ್ಕಿ ಘಾಯ ಪಟ್ಟರೆ ದುಖ್ಖ ಬಾರದೆ

ಇದ್ಧೀತೆ? ಅವನು ಆ ದುಃಖದಿಂದ ಸಾಯದೆ ಇದ್ದದ್ದು ಆಶ್ಚರ್ಯ. ಮಾರ್ಗದಲ್ಲಿ ತಾನು ಕಂಡವರೆಲ್ಲರಿಗೆ ಆ ಕಳ್ಳತನವಾದ ಸ್ಥಳವನ್ನೂ, ಅದರ ವೃತ್ತಾಂತವನ್ನೂ, ಕಳ್ಳರ ಹೆಸರುಗಳನ್ನೂ, ತಾನು ಕಳ ಕೊಂಡ ಆಸ್ತಿಯನ್ನೂ, ತನಗೆ ಆದ ಘಾಯವನ್ನೂ, ತಾನು ಜೀವ ಮಾತ್ರ ಉಳಿದದ್ದನ್ನೂ, ವಿವರಿಸುತ್ತಾ, ಕಠಿಣವಾದ ದುಃಖದಿಂದಲೂ ಅಂಗಲಾಚುವಿಕೆಯಿಂದಲೂ ಉಳಿದ ಮಾರ್ಗವನ್ನು ಕಳದನೆಂಬ ವ ರ್ತಮಾನ ಕೇಳಿದ್ಧೇನೆ.

ಕೋ. ಆದಾಗ್ಯೂ ಅವನು ಪ್ರಯಾಣದಲ್ಲಿ ವೆಚ್ಚಕ್ಕಿಲ್ಲದ ಕಷ್ಟವನ್ನು ಪರಿಹರಿಸುವದಕ್ಕೋಸ್ಕರ ತನ್ನ ರತ್ನಗಳಲ್ಲಿ ಕೆಲವು ಮಾರದೆಯೂ ಅಡವು ಇಡದೆಯೂ ಇದ್ದದ್ದು ಆಶ್ಚರ್ಯವಾಗಿ ಕಾಣುತ್ತದೆ.

ಕ್ರಿ. ಇದೇನು? ನಿನಗೆ ಏನೂ ವಿವೇಕವಿಲ್ಲವೋ? ಎಷ್ಟಕ್ಕೆ ಅಡವು ಇಡುವನು? ಇಲ್ಲವೆ, ಯಾರಿಗೆ ಮಾರುವನು? ಆ ಕಳ್ಳತನ ವಾದ ದೇಶದಲ್ಲಿ ಅವನ ರತ್ನಗಳ ಬೆಲೆ ಜನರಿಗೆ ತಿಳಿಯಲಿಲ್ಲ. ಆ ಜನರ ಕೈಯಿಂದ ಸಿಕ್ಕ ಬಹುದಾದ ಸಹಾಯವು ಅವನಿಗೆ ಅವಶ್ಯವಿ ದ್ದಿಲ್ಲ. ಇದಲ್ಲದೆ ಅವನು ರತ್ನಗಳನ್ನು ಕಳಕೊಂಡರೆ ಪರಲೋಕ ಪಟ್ಟಣದ ದ್ವಾರಕ್ಕೆ ಶೇರ ಕೂಡದಾಗಿತ್ತು. ಪಟ್ಟಣದಲ್ಲಿ ಶೇರಲಾರದ ದುರ್ಗತಿಗೆ ಸಾವಿರಾರು ಕಳ್ಳರಿಂದ ಉಂಟಾಗುವ ಉಪದ್ರಕ್ಕಿಂತ ಅ ವನು ಹೆಚ್ಚು ಭಯ ಪಟ್ಟನು.

ಕೋ. ಸಹೋದರನೇ, ಅವಿವೇಕಿ ಎಂದು ನನಗೆ ಹೆದರಿ ಸುವದು ಯಾಕೆ? ಏಸಾವನು ತನ್ನ ಶ್ರೇಷ್ಟ ರತ್ನವಾಗಿರುವ ಚೊ ಚ್ಚಲತನವನ್ನು ಮಾರಲಿಲ್ಲವೋ? ಏಸಾವನು ಚೊಚ್ಚಲತನವನ್ನು ಮಾರಿದ್ದಾದರೆ ಅಲ್ಪವಿಶ್ವಾಸ್ಯೈಯ್ಯನು ತನ್ನ ರತ್ನಗಳನ್ನು ಮಾರಿ ದನೆಂದು ನೆನಸುವದು ತಪ್ಪೋ?

ಕ್ರಿ. ಏಸಾವನು ತನ್ನ ಚೊಚ್ಚಲತನವನ್ನು ಮಾರಿದ್ದು ಹೌ ದು. ಇನ್ನೂ ಬಹಳ ಮಂದಿ ಹಾಗೆಯೇ ಮಾಡಿ, ಅವನ ಹಾಗೆ ಶ್ರೇಷ್ಟ ವರಗಳನ್ನು ಕಳಕೊಳ್ಳುತ್ತಾರೆ. ಆದಾಗ್ಯೂ ಏಸಾವನಿಗೂ

ಅಲ್ಪವಿಶ್ವಾಸ್ಸೈಯ್ಯಗೂ ಹೆಚ್ಚು ಕಡಮೆ ಉಂಟು. ಏಸಾವನಿಗೆ ಹೊಟ್ಟೆಯೇ ದೇವರು. ಅಲ್ಪವಿಶ್ವಾಸ್ಸೈಯ್ಯಗೆ ಹಾಗಲ್ಲ. ಏಸಾವನಿಗೆ ಎಷ್ಟು ಮಾತ್ರವು ವಿಶ್ವಾಸವಿದ್ದ ಹಾಗೆ ಕಾಣುವದಿಲ್ಲ. ಅಲ್ಪವಿಶ್ವಾಸ್ಸೈಯ್ಯನಲ್ಲಿ ವಿಶ್ವಾಸವಿದ್ದು ದಿವ್ಯಕಾರ್ಯಗಳ ಮೇಲೆ ಆಶೆ ಇತ್ತು. ಆತ್ಮಭಾವವಾದ ಮೇಲಿನ ಕಾರ್ಯಗಳೇ ಅವನಿಗೆ ಅವಶ್ಯವಾಗಿದ್ದವು. ಅಂಥವನು ವ್ಯರ್ಥ ಕಾರ್ಯಗಳಿಂದ ಸಂತೃಪ್ತಿಯಾಗುವದಕ್ಕೋಸ್ಕರ ತನ್ನ ರತ್ನಗಳನ್ನು ಮಾರ್ಯಾನೆ? ಹುಲ್ಲು ತಕ್ಕೊಂಡು ಹೊಟ್ಟೆ ತುಂಬಿಸಿ ಕೊಳ್ಳುವ ಮನುಷ್ಯನು ಇದ್ದಾನೋ? ಇಲ್ಲವೆ, ಪಾರಿವಾಳವು ಕಾಗೆಯ ಹಾಗೆ ಹೆಣ ತಿಂದೀತೋ? ವಿಶ್ವಾಸವಿಲ್ಲದವರು ಮಾಂಸದ ಆಶೆಗಳಿಗೋಸ್ಕರ ತಮಗಿದ್ದದ್ದೆಲ್ಲನ್ನು ತಮ್ಮ ಆತ್ಮವನ್ನು ಸಹ ಮಾರುವರು. ಆದರೆ ಸ್ವಲ್ಪ ಮಾತ್ರ ಸತ್ಯ ವಿಶ್ವಾಸ ಉಂಟಾದವರು ಹಾಗೆ ಮಾಡರು. ಇದೇ ಹೆಚ್ಚು ಕಡಮೆ; ಇದರಲ್ಲಿ ನಿಮ್ಮ ಮಾತು ತಪ್ಪಾಯಿತು.

ಕೋ. ತಪ್ಪಾಯಿತು, ಹೌದು. ಆದಾಗ್ಯೂ ನೀವು ಹೆದರಿಸಿದದರಿಂದ ಸ್ವಲ್ಪ ಕೋಪ ಬರಲಿಕ್ಕಿತ್ತು.

ಕ್ರಿ. ಚಿಂತೆ ಪಡ ಬೇಡಿರಿ. ಆ ಕಾರ್ಯ ಇದ್ದ ಹಾಗೆ ವಿಚಾರಿಸಿದರೆ ನಿಮಗೂ ನನಗೂ ಸಮ್ಮತಿಯಾಗುವದು.

ಕೋ. ಆ ಮೂರು ಕಳ್ಳರು ಹೇಡಿಗಳಾಗಿದ್ದಾರೆಂದು ನಿಶ್ಚಯವಾಗಿ ಬಲ್ಲೆನು. ಇಲ್ಲದಿದ್ದರೆ ದಾರಿಯಲ್ಲಿ ಬರುವ ಒಬ್ಬನ ಶಬ್ದಕ್ಕೆ ಓಡಿ ಹೋಗುವರೋ? ಇಂಥಾ ಹೇಡಿಗಳಿಗೆ ಅಲ್ಪವಿಶ್ವಾಸ್ಸೈಯ್ಯನು ಯಾಕೆ ಭಯ ಪಟ್ಟನು? ಅವರ ಸಂಗಡ ಮೊದಲು ಹೋರಾಡಿ ಜಯವಾಗುವದಿಲ್ಲವೆಂದು ತಿಳುಕೊಂಡ ಮೇಲೆ ಅವರಿಗೆ ಬಳಗಾಗ ಬಹುದಾಗಿತ್ತು.

ಕ್ರಿ. ಅವರು ಹೇಡಿಗಳೆಂದು ಬಹಳ ಮಂದಿ ಹೇಳುತ್ತಾರೆ. ಆದರೆ ಕೆಲವರು ಮಾತ್ರ ಅವರ ಸಂಗಡ ಹೋರಾಡಿ ಜೈಸಿದವರು. ಅಲ್ಪವಿಶ್ವಾಸಿಗೆ ಧೈರ್ಯವು ಇರಲಿಲ್ಲ. ಅವರು ನಿಮಗೆ ಶಿಕ್ಕಿದರೆ ಮೊದಲು ಹೋರಾಡಿ ಆ ಮೇಲೆ ಅವರಿಗೆ ಬಳಗಾಗ ಬೇಕೆಂದು ಹೇ

ಳುತ್ತೀರೋ? ಈಗ ಅವರು ದೂರ ಇರುವ ಸಮಯದಲ್ಲಿ ನಿಮ್ಮ ಧೈರ್ಯವು ಇಷ್ಟು ಘಟ್ಟಿಯಾಗಿದ್ದರೂ ಅವರು ನಿಮ್ಮ ಮೇಲೆ ಬೀಳುವಾಗ ನಿಮಗೆ ಬೇರೆ ಆಲೋಚನೆ ಹುಟ್ಟೀತೆಂದು ನೆನಸುತ್ತೇನೆ.

ಮತ್ತು ಅವರು ಕೂಲಿಕಳ್ಳರಾಗಿದ್ದಾರೆ. ನೆಲವಿಲ್ಲದ ಡೊಂಗರದ ಅರಸನ ಚಾಕರಿ ಮಾಡುತ್ತಾರೆ. ಬೇಕಾದಾಗ ಅವನು ಇವರ ಸಹಾಯಕ್ಕೆ ಬರುವನು, ಅವನ ಶಬ್ದವು ಸಿಂಹದ ಗರ್ಜನೆಯ ಹಾಗಿದೆ. ಅಲ್ಪವಿಶ್ವಾಸ್ಯೈಯ್ಯನ ಹಾಗೆ ನಾನು ಹೋರಾಡುವಾಗ ಅದು ಭಯಂಕರ ಕೆಲಸವೆಂದು ತಿಳು ಕೊಂಡೆನು. ಈ ಮೂವರು ನನ್ನ ಮೇಲೆ ಬಿದ್ದಾಗ ನಾನು ಕ್ರಿಸ್ತಿಯನಿಗೆ ತಕ್ಕ ಹಾಗೆ ಎದುರಿಸಲಾರಂಭಿಸಿದದರಿಂದ ಅವರು ಕೂಗಿದ ಕೂಡಲೇ ಅವರ ಯಜಮಾನನು ಅವರ ಸಹಾಯಕ್ಕೆ ಬಂದನು. ನನ್ನ ಪ್ರಾಣವು ಒಂದು ಘಳಿಗೆಯಾದರೂ ನಿಲ್ಲಲಾರದ ಹಾಗಾಯಿತು. ಆದರೆ ದೇವರ ದಯದಿಂದ ಬಲವಾದ ಕವಚ ನನಗಿತ್ತು. ಅದಿದ್ದರೂ ಪೌರುಷವಾಗಿ ಹೋರಾಡುವದು ಬಹು ಕಷ್ಟವೆಂದು ತಿಳು ಕೊಂಡೆನು. ಅಂಥ ಹೋರಾಟದಲ್ಲಿ ಏನಾಗುವದೆಂದು ಅದನ್ನು ಮಾಡಿದವರೇ ಹೊರ್ತು ಮತ್ತ್ಯಾರೂ ತಿಳಿಯಲಾರರು.

ಕೋ. ಒಳ್ಳೇದು, ಆ ದಯಾಸಾಗರ ರಾಜನು ಬರುತ್ತಾನೆಂದು ನೆನಸಿದಾಗಲೇ ಅವರು ಓಡಿ ಹೋದರಲ್ಲವೋ?

ಕ್ರಿ. ಅದು ಹೌದು. ದಯಾಸಾಗರ ರಾಜನು ಬಂದಾಗಲೇ ಅವರೂ ಅವರ ಯಜಮಾನನೂ ಓಡಿ ಹೋಗುವದು ಆಶ್ಚರ್ಯವಲ್ಲ. ಯಾಕಂದರೆ ಅವನು ಅರಸನ ಸೈನ್ಯಾಧಿಪತಿಯಾಗಿದ್ದಾನೆ. ಆದರೆ ಅರಸನ ಸೈನ್ಯಾಧಿಪತಿಗೂ ಅಲ್ಪವಿಶ್ವಾಸ್ಯೈಯ್ಯನಿಗೂ ಹೆಚ್ಚು ಕಡಮೆ ಇಲ್ಲವೋ? ಅರಸನ ಪ್ರಜೆಗಳೆಲ್ಲರು ಸೈನ್ಯಾಧಿಪತಿಗಳಲ್ಲ. ಪರೀಕ್ಷೆಯಾಗುವಾಗ ಅವನ ಹಾಗೆ ಚಮತ್ಕಾರಗಳನ್ನು ನಡಿಸುವದಕ್ಕೂ ಕೂಡುವದಿಲ್ಲ. ದಾವೀದನ ಹಾಗೆ ಗೊಲಿಯಾತನನ್ನು ಜಯಿಸುವದು ಕೂಸಿನಿಂದ ಕೂಡೀತೋ? ಎತ್ತಿನ ಬಲವು ಊರು

ಗುಬ್ಬಿಯಲ್ಲಿ ಇದ್ಧೀತೋ? ಕೆಲವರು ಬಲಿಷ್ಟರು, ಕೆಲವರು ಬಲಹೀನರು. ಕೆಲವರಿಗೆ ಬಹಳ ವಿಶ್ವಾಸ ಉಂಟು. ಕೆಲವರಿಗೆ ಸ್ವಲ್ಪ ಉಂಟು. ಇವನು ಬಲಹೀನರಲ್ಲಿ ಒಬ್ಬನಾಗಿರುವದರಿಂದ ಅಪಜಯವಾದನು.

ನಾನು ಮುಂಚೆ ಹೋರಾಟದಲ್ಲಿದ್ದೆನು. ಪರಮೋತ್ತಮ ದೇವರ ದಯದಿಂದ ನಾನು ಜೀವದಿಂದಿದ್ಧೇನೆ. ಆದಾಗ್ಯೂ ನನ್ನ ಪೌರುಷಕ್ಕೋಸ್ಕರ ಹೆಚ್ಚಳ ಪಡಲಾರೆನು. ಇನ್ನು ಮೇಲೆ ಅಂಥ ಜಗಳವು ಬಾರದಿದ್ದರೆ ಸಂತೋಷವೇ ಸರಿ. ಆದರೆ ಎಲ್ಲಾ ಗಂಡಾಂತರ ಇನ್ನು ದಾಟಿ ಹೋಗಲಿಲ್ಲವೆಂದು ಕಾಣುತ್ತದೆ. ಆದಾಗ್ಯೂ ಸಿಂಹ ಕರಡಿಗಳು ಈಗಿನ ಪರ್ಯಂತರ ನನ್ನನ್ನು ತಿಂದು ಬಿಡದದರಿಂದ ಇನ್ನು ಮೇಲೆಯೂ ದೇವರೇ ಸಂರಕ್ಷಿಸುವನೆಂದು ನಂಬುತ್ತೇನೆ. ತರುವಾಯ ಕ್ರಿಸ್ತಿಯನು ಹಾಡಿದ್ದೇನಂದರೆ,

ಕಳ್ಳರ ಕೈಯಲಿ ಬಿದ್ದಿಯೊ ಹಣವನು
ಕೊಳ್ಳೆಯ ಕೊಟ್ಟಿಯೊ ಪರದೇಶಿ ||
ಒಳ್ಳೆಯ ನಂಬಿಗೆ ಇದ್ದರೆ ಸಾವಿರ
ಕಳ್ಳರನಾದರು ಗೆಲ ಬಹುದು || ೧ ||

ಈ ಪ್ರಕಾರ ಅವರು ಮುಂದೆ ಹೋಗುವಾಗ ಮೂಢಪ್ಪನು ಹಿಂಬಾಲಿಸುತ್ತಾ ಇರುವ ವೇಳೆಯಲ್ಲಿ ಮತ್ತೊಂದು ಮಾರ್ಗವು ತಮ್ಮ ಮಾರ್ಗಕ್ಕೆ ಕೂಡುವ ಸಂದಿನ ಸ್ಥಳಕ್ಕೆ ಬಂದರು. ಆ ಮಾರ್ಗವು ತಮ್ಮದರ ಹಾಗೆ ನೆಟ್ಟಗಾಗಿದೆ ಎಂದು ಕಾಣುವದರಿಂದ ನೆಟ್ಟಗಾದ ಆ ಎರಡು ಮಾರ್ಗಗಳಲ್ಲಿ ಯಾವದರಲ್ಲಿ ಸೇರ ಬೇಕೆಂದು ಅರಿಯದೆ ಆಲೋಚನೆ ಮಾಡುತ್ತಾ ನಿಂತರು. ಅವರು ಆಲೋಚಿಸುತ್ತಿರುವಾಗ ಅಗೋ ಕಪ್ಪಾದ ಮೈಯುಳ್ಳ ಬಹು ಶುಭ್ರವಾದ ವಸ್ತ್ರವೂ ಉಳ್ಳ ಒಬ್ಬ ಮನುಷ್ಯನು ಅವರ ಹತ್ತರ ಬಂದು—ನೀವು ಇಲ್ಲಿ ನಿಂತದ್ದು ಯಾಕೆಂದು ಕೇಳಿದನು. ಅವರು ಪರಲೋಕಪಟ್ಣಕ್ಕೆ ಹೋಗುತ್ತೇವೆ. ಯಾವ ಮಾರ್ಗದಿಂದ ಹೋಗ ಬೇಕೆಂದು ತಿಳಿಯುವದಿಲ್ಲವಂದರು. ಆ ಮನುಷ್ಯನು—ನಾನು ಸಹ ಅಲ್ಲಿಗೆ ಹೋಗುತ್ತೇನೆ. ನನ್ನನ್ನು ಹಿಂಬಾಲಿಸಿರಿ, ಅನಲಾಗಿ, ಅವರು ಹೊ

ಸದಾಗಿ ಶೇರಿದ ಮಾರ್ಗದಿಂದ ಅವನ ಹಿಂದೆ ಹತ್ತಿದರು. ಆ ಮಾರ್ಗವು ಮೆಲ್ಲ ಮೆಲ್ಲಗೆ ವಾರೆಯಾಗಿದ್ದು ಅವರು ಕೋರಿದ ಪಟ್ಣಕ್ಕೆ ದೂರವಾಗಿ, ಪಟ್ಣವು ಅವರ ಹಿಂಗಡೆಗೆ ಬಿದ್ದಾಗ್ಯೂ ಅವನನ್ನು ಇನ್ನು ಹಿಂಬಾಲಿಸಿದರು. ಅವರು ತಮಗೆ ಮಾರ್ಗ ತಪ್ಪಿತೆಂದು ತಿಳುಕೊಳ್ಳುವದಕ್ಕಿಂತ ಮುಂಚೆ ಅವನು ಮೆಲ್ಲ ಮೆಲ್ಲಗೆ ಅವರಿಬ್ಬರನ್ನು ಒಂದು ಬಲೆಯೊಳಗೆ ಶೇರಿಸಿದನು. ಆದದರಿಂದ ಅವರು ಅದರಲ್ಲಿ ಶಿಕ್ಕಿ ದಿಕ್ಕು ತಿಳಿಯದೆ ಇದ್ದರು. ಅಗ ಆ ಕಪ್ಪಾದವನ ಮೈಮೇಲಿಂದ ಶುಭ್ರವಾದ ವಸ್ತ್ರವು ಬಿದ್ದು ಹೋಯಿತು. ಅವರು ತಮಗೆ ಆದ ಮೋಸವನ್ನು ತಿಳು ಕೊಂಡು ತಪ್ಪಿಸಿ ಕೊಳ್ಳಲಾರದೆ ಕೆಲವು ಹೊತ್ತು ಬಿದ್ದು ಅತ್ತರು.

ತರುವಾಯ ಕ್ರಿಸ್ತಿಯನು ತನ್ನ ಜತೆಗಾರನಿಗೆ—ನಾನು ಮಾಡಿದ ತಪ್ಪು ಈಗ ತಿಳು ಕೊಳ್ಳುತ್ತೇನೆ. ಇಚ್ಛಕಪಿಶಾಚಿಗೆ ಭಯ ಪಡಬೇಕೆಂದು ಕುರುಬರು ಹೇಳಿದರಷ್ಟೆ?

ಕೋ. ಹೌದು, ಮತ್ತು ನಮಗೆ ಮಾರ್ಗ ತಪ್ಪದ ಹಾಗೆ ಅದರ ವಿವರವನ್ನು ಬರದು ಕೊಟ್ಟರು. ಅದನ್ನು ಓದುವದಕ್ಕೆ ಮರತದರಿಂದ ನಾವು ನಾಶದ ಮಾರ್ಗಗಳಲ್ಲಿ ಶೇರಿದ್ದೇವೆ.

ಈ ಪ್ರಕಾರ ಅವರು ಅಂಗಲಾಚುತ್ತಾ ಬಲೆಯಲ್ಲಿರುವಾಗ ತೇಜಸ್ಸುಳ್ಳ ಒಬ್ಬನು ಸಣ್ಣ ಹಗ್ಗಗಳುಳ್ಳ ಚಬಕನ್ನು ಕೈಯಲ್ಲಿ ಹಿಡಿದು ತಮ್ಮ ಹತ್ತರ ಬರುವದನ್ನು ಕಂಡರು. ಅವನು ಇವರು ಇದ್ದ ಸ್ಥಳಕ್ಕೆ ಬಂದು—ನೀವು ಎಲ್ಲಿಂದ ಬಂದಿರಿ? ಇಲ್ಲಿ ಏನು ಮಾಡುತ್ತೀರಿ? ಎಂದು ಕೇಳಿದ್ದಕ್ಕೆ, ಇವರು—ಚಿಯೋನಿಗೆ ಹೋಗುವ ಪ್ರಯಾಣಸ್ಥರಾಗಿದ್ದೇವೆ; ಶುಭ್ರವಸ್ತ್ರವನ್ನು ಧರಿಸಿದ ಕಪ್ಪಾದ ಒಬ್ಬನು ತಾನು ಸಹ ಅಲ್ಲಿಗೆ ಹೋಗುತ್ತೇನೆ. ನನ್ನನ್ನು ಹಿಂಬಾಲಿಸಿರೆಂದು ನಮ್ಮನ್ನು ಮೋಸಗೊಳ್ಳಿಸಿ, ಮಾರ್ಗ ತಪ್ಪುವ ಹಾಗೆ ಮಾಡಿದ್ದಾನೆ, ಅಂದರು. ಆಗ ಆ ಚಬಕು ಹಿಡಿದವನು—ಅವನು ಬೆಳಕಿನ ದೂತನ ವೇಷವನ್ನು ಧರಿಸಿದ ಇಚ್ಛಕಪಿಶಾಚಿ ಎಂಬ ಸುಳ್ಳುಗಾರನಾಗಿದ್ದಾನೆಂದು ಹೇಳಿದನು. ತರುವಾಯ ಅವನು ಆ ಬಲೆ

ಯನ್ನು ಹರಿದು ಅವರನ್ನು ಬಿಡಿಸಿ, ನನ್ನನ್ನು ಹಿಂಬಾಲಿಸಿರಿ, ನಾನು ನಿಮ್ಮ ಮಾರ್ಗವನ್ನು ತೋರಿಸಿ ಕೊಡುತ್ತೇನೆಂದು ಹೇಳಿ, ಇಚ್ಛಕ ಪಿಶಾಚಿಯ ಮೋಸದಿಂದ ಅವರು ತಪ್ಪಿದ ಮಾರ್ಗದಲ್ಲಿ ತಿರಿಗಿ ಅವರನ್ನು ಸೇರಿಸಿದನು. ತರುವಾಯ ಹೋದ ರಾತ್ರಿ ಎಲ್ಲಿ ಇಳುಕೊಂಡಿರಿ? ಎಂದು ಕೇಳಿದ್ದಕ್ಕೆ, ರಮ್ಯ ಪರ್ವತಗಳಲ್ಲಿ ಕುರುಬರ ಸಂಗಡ ಇದ್ದೆವು ಎಂದು ಅವರು ಹೇಳಲು, ಅವರು ನಿಮಗೆ ಮಾರ್ಗದ ವಿವರವನ್ನು ಬರದು ಕೊಡಲಿಲ್ಲವೋ? ಎಂದು ಕೇಳಿದನು. ಇವರು ಹೌದಂದರು. ಹಾಗಾದರೆ ನಿಮಗೆ ದಾರಿ ತಿಳಿಯದೆ ಹೋದಾಗ ಆ ಬರಹವನ್ನು ತೆಗೆದು ಓದಲಿಲ್ಲವೋ? ಅನ್ನಲಾಗಿ, ಇವರು — ಇಲ್ಲವೆಂದರು. ಅವನು — ಅದು ಯಾಕೆ? ಅಂದಾಗ, ಮರತು ಹೋಯಿತೆಂದರು. ಇಚ್ಛಕಪಿಶಾಚಿಗೆ ಭಯ ಪಡ ಬೇಕೆಂದು ಕುರುಬರು ಹೇಳಲಿಲ್ಲವೋ? ಎಂದು ಕೇಳಿದಾಗ, ಇವರು ಹೌದು, ಆದರೆ ಈ ಮರ್ಯಾದಸ್ಥನಾದವನು ಅವನೇ ಎಂದು ನಾವು ನೆನಸಲಿಲ್ಲ, ಅಂದರು.

ತರುವಾಯ ನಾನು ಸ್ವಪ್ನದಲ್ಲಿ ಕಂಡದ್ದೇನಂದರೆ, ಅವನು ಇವರಿಗೆ ಮಲಗ ಬೇಕೆಂದು ಆಜ್ಞಾಪಿಸಿ, ನಡೆಯ ತಕ್ಕ ಸುಮಾರ್ಗವನ್ನು ಬೋಧಿಸುವದಕ್ಕೋಸ್ಕರ ಕಠಿಣವಾಗಿ ಶಿಕ್ಷಿಸಿ — ನಾನು ಪ್ರೀತಿ ಮಾಡುವವರನ್ನಷ್ಟು ಗದರಿಸಿ ದಂಡಿಸುತ್ತೇನೆ, ಆದದರಿಂದ ಆಸಕ್ತಿಯಿಂದಿದ್ದು ಮಾನಸಾಂತರ ಪಡಿರಿ ಎಂದು ಹೇಳಿದನು. ತರುವಾಯ ಪ್ರಯಾಣವಾಗ ಬೇಕೆಂದೂ, ಕುರುಬರು ಕೊಟ್ಟ ಬೇರೆ ಅಪ್ಪಣೆಗಳಿಗೋಸ್ಕರ ಜಾಗ್ರತೆ ಪಡ ಬೇಕೆಂದೂ, ಆಜ್ಞಾಪಿಸಿದನು. ಪ್ರಯಾಣಸ್ಥರು ಅವನು ಮಾಡಿದ ದಯವನ್ನು ನೆನಸಿ ಕೊಂಡು ನೆಟ್ಟಾನ ಮಾರ್ಗದಲ್ಲಿ ಮುಂದೆ ಹೋಗುತ್ತಾ ಹಾಡಿದ ಪದವೇನಂದರೆ,

ಸಾರಿದ ಬುದ್ಧಿಯ ಮರತೀ ಮಾರ್ಗವ
ಮೀರಲು ಬಳೆಯನು ಸೇರಿದೆವು ||
ದಾರಿಗರೆಲ್ಲರೆ ಭದ್ರವು ಪಯಣದಿ
ಜಾರದೆ ಜಾಗ್ರತೆಯಾಗಿಹುದು || ೧ ||

---

## 18. Atheist, and the Enchanted Ground.

## ೧೮. ನಾಸ್ತಿಕ ಉಪಾಧ್ಯನು, ಮಾಟದ ಭೂಮಿಯು.

---

ತರುವಾಯ ಅವರು ರಾಜಮಾರ್ಗದಲ್ಲಿ ಒಂಟಿಗನಾಗಿ ತಮ್ಮೆದುರಿಗೆ ಮೆಲ್ಲಗೆ ಬರುವ ಒಬ್ಬನನ್ನು ದೂರದಲ್ಲಿ ಕಂಡರು.

ಕ್ರಿಸ್ತಿಯನು. ಸಹೋದರನೆ, ಅಗೋ ಅಲ್ಲಿ ಒಬ್ಬನು ಚಿಯೋನಿಗೆ ಬೆನ್ನು ಹಾಕಿ ನಮ್ಮೆದುರಿಗೆ ಬರುತ್ತಾನೆ.

ಕೋರಿಕೆಗೌಡ. ಅವನನ್ನು ಕಂಡೆನು. ಅವನು ಸಹ ಇಚ್ಛಕಪಿಶಾಚಿಯೋ ಏನೋ ಜಾಗ್ರತೆಯಾಗಿರುವ.

ಹೀಗಿರಲಾಗಿ ಅವನು ಹತ್ತರ ಹತ್ತರ ಬಂದು ಅವರನ್ನು ಕಲತು—ಎಲ್ಲಿಗೆ ಹೋಗುತ್ತೀರೆಂದು ಕೇಳಿದನು. ಅವನ ಹೆಸರು ನಾಸ್ತಿಕ ಉಪಾಧ್ಯನು. ಕ್ರಿಸ್ತಿಯನು—ಚಿಯೋನ ಪರ್ವತಕ್ಕೆ ಹೋಗುತ್ತೇವೆಂದಾಗ, ನಾಸ್ತಿಕ ಉಪಾಧ್ಯನು ಬಹಳವಾಗಿ ನಕ್ಕನು.

ಕ್ರಿ. ನೀವು ನಗುವದು ಯಾಕೆ?

ನಾಸ್ತಿಕ ಉಪಾಧ್ಯ. ನೀವು ಜ್ಞಾನವಿಲ್ಲದ ಜನರಾಗಿ ತಿರುಗಾಡುವದೇ ಹೊರ್ತು ಮತ್ತೇನೂ ಫಲವಿಲ್ಲದ ಕಷ್ಟವಾದ ಪ್ರಯಾಣ ಮಾಡುವದನ್ನು ನೋಡಿ ನಗುತ್ತೇನೆ.

ಕ್ರಿ. ಅದು ಯಾಕೆ? ನಾವು ಅಲ್ಲಿ ಶೇರ ಕೂಡದೆಂದು ನೆನಸುತ್ತೀರೋ?

ನಾ. ಶೇರುವದು ಹ್ಯಾಗೆ? ನೀವು ಹುಡುಕುವ ಸ್ಥಳವು ಸ್ವಪ್ನಗಳಲ್ಲಿ ಹೊರ್ತು ಈ ಲೋಕದಲ್ಲಿ ಎಲ್ಲಿಯೂ ಕಾಣುವದಿಲ್ಲ.

ಕ್ರಿ. ಅದು ಇಹದಲ್ಲಿ ಅಲ್ಲ. ಪರದಲ್ಲಿ ಉಂಟು.

ನಾ. ನಾನು ಸ್ವದೇಶದಲ್ಲಿರುವಾಗ ಈ ಸಮಾಚಾರವನ್ನು ಕೇಳಿ ಹೊರಟು ಆ ಪಟ್ಟಣವನ್ನು ಹುಡುಕುತ್ತಾ ಇಪ್ಪತ್ತು ವರುಷ ತಿರುಗಿದೆನು. ಆದರೆ ಅದು ಹೊರಟ ದಿನದಿಂದ ಇಂದಿನವರೆಗೂ ಸಮೀಪವಾಗಲಿಲ್ಲ.

ಕ್ರಿ. ಅಂಥ ಸ್ಥಳ ಉಂಟೆಂಬುವದನ್ನು ನಾವು ಕೇಳಿ ನಂಬುತ್ತೇವೆ.

ನಾ. ನಾನು ಮನೆಯಲ್ಲಿರುವಾಗ ಅದು ನಂಬದೆ ಇದ್ದರೆ ಹುಡುಕುವದಕ್ಕೋಸ್ಕರ ಇಷ್ಟು ದೂರ ಪರ್ಯಂತರ ಬರುತ್ತಿದ್ದಿಲ್ಲ. ಅಂಥ ಸ್ಥಳವಿದ್ದರೆ ನಿಮ್ಮಗಿಂತ ದೂರ ಹೋದ ನನಗೆ ಶಿಕ್ಕ ಬೇಕಾಗಿತ್ತು. ಅದು ಶಿಕ್ಕದ ಕಾರಣ ನಾನು ಹಿಂದಕ್ಕೆ ಹೋಗಿ ಇಲ್ಲದ ಕಾರ್ಯಗಳ ನಿರೀಕ್ಷೆಗೋಸ್ಕರ ಆಗ ಬಿಟ್ಟು ಬಿಟ್ಟ ಕಾರ್ಯಗಳಿಂದ ಸಂತೃಪ್ತಿಯಾಗುವೆನು.

ಕ್ರಿ. ಓ ಕೋರಿಕೆಗಾಡನೇ, ಇವನು ಹೇಳುವದು ಸತ್ಯವೋ?

ಕೋ. ಜಾಗ್ರತೆಯಾಗಿರಿ. ಇವನು ಇಚ್ಛಕಪಿಶಾಚಿಗಳಲ್ಲಿ ಒಬ್ಬನಾಗಿದ್ದಾನೆ. ಇವನಂಥವರನ್ನು ಆಲೈಸಿ ಎಷ್ಟು ಕಷ್ಟ ಪಟ್ಟೆವೆಂಬುವದನ್ನು ನೆನಸಿರಿ. ಏನು! ಚಿಯೋನ ಪರ್ವತವು ಇಲ್ಲವೋ? ನಾವು ರಮ್ಯ ಪರ್ವತಗಳಲ್ಲಿ ಪಟ್ಣದ ಬಾಗಲನ್ನು ನೋಡಲಿಲ್ಲವೋ? ಮತ್ತು ವಿಶ್ವಾಸದಿಂದ ನಡದು ಕೊಳ್ಳ ಬೇಕಲ್ಲವೋ? ಇನ್ನೂ ಆ ಚಬಕಿನವನ ಕೈಯಲ್ಲಿ ಬೀಳದ ಹಾಗೆ ನೋಡಿ ಕೊಳ್ಳುವ. ಜ್ಞಾನದ ವಾಕ್ಯಗಳಿಗೆ ತಪ್ಪುವ ಹಾಗೆ ಪ್ರೇರೇಪಿಸುವ ಬೋಧನೆಯನ್ನು ಕೇಳ ಬಾರದು, ಎಂಬ ಮಾತು ಉಂಟಲ್ಲವೋ? (ಸಾಮತಿ. ೧೯—೨೭). ನೀವು ನನಗೆ ಬುದ್ಧಿ ಹೇಳ ತಕ್ಕವರಾದಾಗ್ಯೂ ಈಗ ನಾನು ಹೇಳುವ ಮಾತು ಕೇಳಿ ನಮ್ಮ ಆತ್ಮಗಳ ರಕ್ಷಣೆಗಾಗಿ ವಿಶ್ವಾಸಿಸುವ.

ಕ್ರಿ. ಸಹೋದರನೇ, ನಮ್ಮ ವಿಶ್ವಾಸದ ನಿಶ್ಚಯದಲ್ಲಿ ನನಗೇನಾದರೂ ಸಂದೇಹ ಹುಟ್ಟಿದದರಿಂದಲ್ಲ, ನಿಮ್ಮನ್ನು ಪರೀಕ್ಷಿಸಿ ನಿಮ್ಮ ಯಥಾರ್ಥತ್ವದ ಉದಾಹರಣೆಯನ್ನು ಹೊಂದುವದಕ್ಕೆ ಕೇಳಿದೆನು. ಈ ಪ್ರಪಂಚದ ದೇವರು ಇವನ ಕಣ್ಣು ಕಟ್ಟಿದ್ದಾನೆಂದು ಬಲ್ಲೆನು. ಆದದರಿಂದ ಸತ್ಯದ ವಿಶ್ವಾಸವು ನಮ್ಮಲ್ಲಿ ಉಂಟೆಂದೂ, ಸತ್ಯದಲ್ಲಿ ಅಬದ್ಧವಿಲ್ಲವೆಂದೂ, ನಾವು ತಿಳಿದು ಕೊಂಡು ಮುಂದೆ ಹೋಗುವ.

ಕೋ. ಆಗಲಿ. ದೇವರ ಮಹಿಮೆಯನ್ನು ಕೋರಿ ಈಗ ಸಂತೋಷ ಪಡುತ್ತೇನೆ.

ಇಷ್ಟು ಸಂಭಾಷಿಸಿದ ಮೇಲೆ ಅವರು ಅವನನ್ನು ಬಿಟ್ಟು ಮುಂದೆ ಹೋದರು. ಅವನು ಅವರನ್ನು ಹಾಸ್ಯ ಮಾಡಿ ತನ್ನ ಮಾರ್ಗಕ್ಕೆ ಹೋದನು.

ತರುವಾಯ ಅವರು ದೇಶಾಂತರಿಗಳಿಗೆ ತೂಗಡಿಕೆಯನ್ನು ಹುಟ್ಟಿಸುವ ಘಾಳಿ ಬೀಸುವ ಸ್ಥಳಕ್ಕೆ ಶೇರಿದ್ದನ್ನು ಸ್ವಪ್ನದಲ್ಲಿ ಕಂಡೆನು. ಅಲ್ಲಿ ಕೋರಿಕೆಗೌಡನಿಗೆ ಬಹಳ ಮಂದವಾಗಿ ನಿದ್ರೆಗೆ ಸಮಾಪಿಸಿ—ನನಗೆ ಬಹಳ ತೂಗಡಿಕೆ ಬಂತು, ಕಣ್ಣು ಬಿಗಿದು ಕೊಂಡು ಬರುತ್ತದೆ, ಇಲ್ಲಿ ಮಲಗಿ ಸ್ವಲ್ಪ ನಿದ್ರೆ ಮಾಡುವ, ಅಂದನು.

ಕ್ರಿ. ಆಗದು, ಆಗದು. ನಿದ್ರೆ ಮಾಡಿದರೆ ಎಂದಿಗೂ ಎಚ್ಚರವಾಗದು.

ಕೋ. ಯಾಕೆ ಅಣ್ಣಾ? ಪ್ರಯಾಸ ಪಡುವವರಿಗೆ ನಿದ್ರೆಯು ಸುಖವಲ್ಲವೋ? ಸ್ವಲ್ಪ ನಿದ್ರೆ ಮಾಡಿದರೆ ವಿಶ್ರಮವಾದೀತಲ್ಲವೋ?

ಕ್ರಿ. ಆ ಕುರುಬರಲ್ಲಿ ಒಬ್ಬನು ಮಾಟದ ಭೂಮಿಗೆ ಜಾಗ್ರತೆ ಪಡ ಬೇಕೆಂದು ನಮಗೆ ಹೇಳಿದ್ದು ನೆನಪಿಲ್ಲವೋ? ಎಲ್ಲಿಯೂ ನಿದ್ರೆ ಮಾಡದ ಹಾಗೆ ಜಾಗ್ರತೆ ಪಡ ಬೇಕೆಂದು ಅವನ ಅಭಿಪ್ರಾಯವಷ್ಟೆ? ಆದದರಿಂದ ಮಿಕ್ಕಾದವರ ಹಾಗೆ ನಿದ್ರೆ ಗೈಯದೆ ಎಚ್ಚತ್ತು ಮಿತಿಯಾಗಿರುವ.

ಕೋ. ತಪ್ಪಾಯಿತು. ನಾನು ಇಲ್ಲಿ ಒಂಟಿಗನಾಗಿದ್ದರೆ ನಿದ್ರೆ ಮಾಡಿ ಮರಣದ ಗಂಡಾಂತರದಲ್ಲಿ ಬೀಳುತ್ತಿದ್ದೆನು. ಆದದರಿಂದ ಒಬ್ಬನಿಗಿಂತ ಇಬ್ಬರು ಲೇಸು ಎಂಬ ಗಾದೆ ಸತ್ಯವೆಂದು ತಿಳುಕೊಳ್ಳುತ್ತೇನೆ. ಈ ವರೆಗೆ ನಿಮ್ಮ ಸಹವಾಸದಿಂದಲೇ ನನಗೆ ಉಪಕಾರವಾಯಿತು. ನೀವು ಪಟ್ಟ ಕಷ್ಟಕ್ಕೆ ಒಳ್ಳೇ ಫಲ ಶಿಕ್ಕುವದು.

ಕ್ರಿ. ಅದಿರಲಿ. ಈ ಸ್ಥಳದಲ್ಲಿ ನಮಗೆ ತೂಗಡಿಕೆ ಬಾರದ ಹಾಗೆ ಏನಾದರೂ ಒಳ್ಳೇ ಸಂಭಾಷಣೆ ಮಾಡುವ.

ಕೋ. ಮಾಡಿದರೆ ಬಹು ಒಳ್ಳೇದು.

ಕ್ರಿ. ಎಲ್ಲಿಂದ ಆರಂಭಿಸುವ?

ಕೋ. ದೇವರು ನಮಗೆ ಮೊದಲು ಕೃಪೆ ಮಾಡಿದ್ದಲ್ಲಿಂದ

ನಮ್ಮ ಸಂಭಾಷಣೆಯಾರಂಭಿಸುವ. ಆದರೆ ನೀವೇ ಆರಂಭಿಸಿರಿ.
ತರುವಾಯ ಕ್ರಿಸ್ತಿಯನು—

ಮಲಗಲು ಮಾಟದ ಸ್ಥಳದೊಳಗೆಂದಿಗು
ತೊಲಗದ ನಿದ್ರೆಯು ಬರುತಿಹುದು ||
ಕಳೆಯುವ ಒಳ್ಳೆಯ ಮಾತುಗಳಿಂದಲಿ
ಕೊಲೆಯನು ಮಾಡುವ ನಿದ್ರೆಯನು ||

ಎಂದು ಹೇಳಿ, ನಿಮ್ಮನ್ನು ಒಂದು ಪ್ರಶ್ನೆ ಕೇಳುತ್ತೇನೆ. ಯಾವದಂದರೆ, ನೀವು ಈ ಮಾರ್ಗದಲ್ಲಿ ಸೇರಲಿಕ್ಕೆ ಹ್ಯಾಗೆ ಆರಂಭಿಸಿದಿರಿ?

ಕೋ. ನನ್ನ ಆತ್ಮದ ರಕ್ಷಣ್ಯೆಯನ್ನು ಹುಡುಕುವದಕ್ಕೆ ಮನಸ್ಸು ಹ್ಯಾಗೆ ಬಂತೆಂದು ಹೇಳ ಬೇಕೋ?

ಕ್ರಿ. ಹೌದು, ಹೌದು.

ಕೋ. ಮಾಯಾಪಟ್ಣದ ಸಂತೆಯಲ್ಲಿ ಕೊಟ್ಟು ಕೊಂಬುವ ಕಾರ್ಯಗಳನ್ನು ಮೆಚ್ಚಿ ಕೊಳ್ಳುತ್ತಾ ಬಹು ಕಾಲ ಆನಂದ ಪಟ್ಟೆನು. ಆ ಭೋಗಗಳಲ್ಲಿ ನಾನು ನೆಲೆಯಾಗಿದ್ದರೆ ಇಷ್ಟರ ಒಳಗೆ ಅವು ನನ್ನನ್ನು ನಾಶ ಮಾಡುತ್ತಿದ್ದವೆಂದು ನೆನಸುತ್ತೇನೆ.

ಕ್ರಿ. ಅವು ಎಂಥಾವು?

ಕೋ. ಅವು ಪ್ರಪಂಚದ ಹಣ ಕಾಸುಗಳು. ಮತ್ತು ಆತ್ಮಕ್ಕೆ ನಾಶನವನ್ನುಂಟು ಮಾಡುವ ತುಂಟತನ, ಹೊಟ್ಟೆಬಾಕತನ, ಮದ್ಯಪಾನ, ದೂಷಣೆ, ಸುಳ್ಳು, ಅಶುದ್ಧತ್ವ, ಮೊದಲಾದ ವಿಗ್ರಹಾರಾಧನೆಗೆ ಸಮ್ಮಂಧವಾದ ಅಕ್ರಮಗಳು. ಅವುಗಳಲ್ಲಿ ಅತ್ಯಾನಂದ ಪಟ್ಟೆನು. ತರುವಾಯ ನಿಮ್ಮ ಬುದ್ಧಿಯನ್ನೂ, ಮತ್ತು ವಿಶ್ವಾಸಕ್ಕೋಸ್ಕರ ನಮ್ಮ ಪಟ್ಣದಲ್ಲಿ ಸತ್ತು ಹೋದ ಪ್ರಿಯ ವಿಶ್ವಾಸ್ಯೆಯ್ಯನ ಸುದ್ದಿಯನ್ನೂ, ಕೇಳಿ, ನಿತ್ಯಜೀವದ ಕಾರ್ಯಗಳನ್ನು ಧ್ಯಾನಿಸಲಾರಂಭಿಸಿದೆನು. ಆಗಲು ಪ್ರಪಂಚದಲ್ಲಿ ನಡವಡಿಕೆಯಾದ ಪಾಪಗಳ ಫಲವು ಮರಣವೆಂದೂ, ಅವುಗಳಿಗೋಸ್ಕರ ದೇವರ ಕೋಪವು ಅವಿಧೇಯತ್ವದ ಮಕ್ಕಳ ಮೇಲೆ ಬರುತ್ತದೆಂದೂ, ತಿಳು ಕೊಂಡೆನು.

ಕ್ರಿ. ಅದೆಲ್ಲಾ ತಿಳಿದ ಕೂಡಲೇ ನಿಮಗೆ ಮಾನಸಾಂತರ ಉಂಟಾಯಿತೋ?

ಕೋ. ಇಲ್ಲ. ಪಾಪವು ಕೆಟ್ಟದ್ದೆಂದೂ, ಅದನ್ನು ಮಾಡುವವರು ನಾಶವಾಗುತ್ತಾರೆಂದೂ, ಚನ್ನಾಗಿ ತಿಳಿದು ಕೊಳ್ಳುವದು ಆಗ ನನಗೆ ಹಿತವಾಗಿರಲಿಲ್ಲ. ಯಾಕಂದರೆ, ಹಿರಿಯರಿಂದ ಶಿಕ್ಕಿದ ಆಸ್ತಿಯನ್ನೂ ನಾನು ವರ್ತಕತನದಿಂದ ಸಂಪಾದಿಸಿದ ದ್ರವ್ಯವನ್ನೂ ನೋಡಿ ಪ್ರಪಂಚವನ್ನು ಮೋಹಿಸಿ, ಲೋಭಿಯೂ, ಗರ್ವಿಯೂ, ಹೊಟ್ಟೆಬಾಕನೂ, ಆಗಿದ್ದೆನು. ಆದ ಕಾರಣ ಸತ್ಯದ ತಿಳುವಿಕೆಯಿಂದ ನನ್ನ ಮನಸ್ಸಿಗೆ ಹೆದರಿಕೆ ಹುಟ್ಟುವಾಗ ಬೆಳಕು ಕಾಣ ಬಾರದೆಂದು ಕಣ್ಣು ಮುಚ್ಚಿದವನ ಹಾಗೆ ಮಾಡುತ್ತಿದ್ದೆನು.

ಕ್ರಿ. ಆದರೆ ದೇವರ ಆತ್ಮವು ನಿಮ್ಮನ್ನು ಎಚ್ಚರಿಸಿದ ಮೇಲೆ ನೀವು ಅದನ್ನು ಯಾವ ಕಾರಣದಿಂದ ಎದುರಿಸಿದಿರಿ?

ಕೋ. ನನ್ನ ಮನಸ್ಸಿನಲ್ಲಿ ಹುಟ್ಟಿದ ಬ್ಯಾಸರಿಕೆ ದೇವರ ಆತ್ಮದಿಂದ ಉಂಟಾಯಿತೆಂದು ಮೊದಲು ತಿಳಿಯಲಿಲ್ಲ.

ಪಾಪದ ವಿನೋದವು ನನ್ನ ಮನಸ್ಸಿಗೆ ಬಹು ಹಿತವಾಗಿದ್ದದರಿಂದ ಅದನ್ನು ಬಿಡಲೊಲ್ಲದೇ ಇದ್ದೆನು.

ಮಾಯಾಪಟ್ಣದಲ್ಲಿರುವ ನನ್ನ ಜಾತಿಯವರು ಪೂಜೆ ಮಾಡುವ ದೇವತೆಗಳನ್ನು ಆರಾಧಿಸುವದು ವ್ಯರ್ಥವೂ ಕೆಟ್ಟದ್ದೂ ಆಗಿದೆ ಎಂದು ತಿಳು ಕೊಂಡರೂ, ಆ ದೇವತೆಗಳಿಗೆ ಹೆದರಿ ಪೂಜೆಯನ್ನು ಬಿಡಲಾರದೆ ಇದ್ದೆನು.

ಹಿರಿಯರ ಮಾರ್ಗವನ್ನು ಬಿಟ್ಟರೆ ನನ್ನ ಜಾತಿಯವರಿಂದಲೂ ಬೇರೆ ಜಾತಿಯವರಿಂದಲೂ ನನಗೆ ಶಿಕ್ಕುವ ಬಹುಮಾನವೆಲ್ಲಾ ಹೋಗುವದೆಂದೂ, ಜಾತಿಭ್ರಷ್ಟನಾದರೆ ನನ್ನ ಆಸ್ತಿಯು ಸಹಾ ಕಳಕೊಂಡು ಬಡವನಾಗುವೆನೆಂದೂ, ಭಯ ಪಟ್ಟೆನು.

ಪಾಪಕ್ಕೋಸ್ಕರ ನಾನು ಹೆದರಿದ ಕಾಲಗಳಲ್ಲಿ ಬಹಳ ಕರಕರೆಯೂ ಮನೋವ್ಯಾಕುಲವೂ ಹುಟ್ಟಿದದರಿಂದ ಅಂಥಾ ಕಾಲಗಳನ್ನು ನೆನಪು ಮಾಡುವದಕ್ಕಾದರೂ ನನಗೆ ಮನಸ್ಸು ಇರಲಿಲ್ಲ.

ಕ್ರಿ. ಆದಾಗ್ಯೂ ನಿಮ್ಮ ವ್ಯಾಕುಲವು ಒಂದೊಂದು ವೇಳೆ ನಿಮ್ಮನ್ನು ಬಿಡುತ್ತಾ ಇತ್ತೆಂದು ಕಾಣುತ್ತದೆ.

ಕೋ. ಬಿಡುತಿತ್ತು, ಹೌದು. ಆದರೆ ತಿರಿಗಿ ತಿರಿಗಿ ಬಂತು. ಅದು ಬಂದರೆ ಮುಂಚೆಗಿಂತ ಹೆಚ್ಚಾಗುತ್ತಿತ್ತು.

ಕ್ರಿ. ನಿಮ್ಮ ಪಾಪಗಳಿಗೋಸ್ಕರ ತಿರಿಗಿ ತಿರಿಗಿ ವ್ಯಸನ ಹುಟ್ಟಲಿಕ್ಕೆ ಕಾರಣವೇನು?

ಕೋ. ನೀವೂ ವಿಶ್ವಾಸ್ಯೈಯ್ಯನೂ ಪ್ರಪಂಚವನ್ನು ಬಿಟ್ಟು ಯಾತ್ರೆಗೆ ಹೊರಟು ಹೋದಿರಿ ಎಂಬ ಸುದ್ದಿಯನ್ನು ಕೇಳಿ, ಅದು ನೆನಪು ಮಾಡಿ ಕೊಂಡಾಗ, ತಲೆ ನೋವು ಮೊದಲಾದ ಶರೀರದ ಉಪದ್ರಗಳು ಒಂದೊಂದು ವೇಳೆ ಬಂದರೆ, ಇಲ್ಲವೇ ಮಾಯಾಪಟ್ಣದಲ್ಲಿ ನನ್ನ ನೆರೆಯವರಲ್ಲಿ ಯಾವನಾದರೂ ಸತ್ತು ಹೋದನೆಂಬ ವರ್ತಮಾನ ಕೇಳಿದರೆ, ನಾನೂ ಬೇಗ ಸಾಯುವೆನೆಂಬ ಆಲೋಚನೆ ಹುಟ್ಟಿ, ಸತ್ತ ಮೇಲೆ ಯಮದೂತರು ನನ್ನನ್ನು ನ್ಯಾಯ ತೀರ್ವಿಕೆಗೆ ವೈಯ್ಯುವರೆಂಬ ಯೋಚನೆ ಉಂಟಾಗಿ ಬಹು ವ್ಯಸನ ಪಡುತ್ತಿದ್ದೆನು.

ಕ್ರಿ. ಈ ಮೊದಲಾದ ಕಾರಣಗಳಿಂದ ನಿಮ್ಮಲ್ಲಿ ಹುಟ್ಟುವ ಚಿಂತೆಗಳನ್ನು ಮರತು ಬಿಡುವದು ಸುಲಭವಾಗಿತ್ತೋ?

ಕೋ. ಇಲ್ಲ, ಇಲ್ಲ. ಅವು ನನ್ನ ಮನೋಭಾವನೆಯಲ್ಲಿ ಹೆಚ್ಚು ಹೆಚ್ಚಾಗಿ ನೆಟ್ಟಿದವು. ಮತ್ತು ನಾನು ಪಾಪವೆಂದು ತಿಳಿದು ಕೊಂಡ ನಡತೆಗಳಲ್ಲಿ ತಿರಿಗಿ ಶೇರುವ ಆಲೋಚನೆ ನನ್ನ ಮನಸ್ಸಿನಲ್ಲಿ ಹುಟ್ಟಿದರೆ ಎರಡಷ್ಟಾಗಿ ಉಪದ್ರ ನನ್ನ ಹೃದಯದಲ್ಲಿ ಉಂಟಾಗುತ್ತಾ ಇತ್ತು.

ಕ್ರಿ. ಅಂಥಾ ಸಮಯದಲ್ಲಿ ನೀವು ಏನು ಮಾಡುತ್ತಿದ್ದಿರಿ?

ಕೋ. ಹಳೆ ಮಾರ್ಗವನ್ನು ಬಿಡದಿದ್ದರೆ ನಾಶವು ತಪ್ಪದೆಂದು ನಿಶ್ಚೈಯಿಸಿ ಕೊಂಡು ಹೊಸ ಮಾರ್ಗದಲ್ಲಿ ಶೇರ ಬೇಕೆಂದು ನೆನಸುತ್ತಿದ್ದೆನು.

ಕ್ರಿ. ಹಾಗಾದರೆ ಹೊಸ ಮಾರ್ಗದಲ್ಲಿ ಶೇರುವ ಪ್ರಯತ್ನ ಮಾಡಿದಿರೋ?

ಕೋ. ಆಗ ತಿಳಿದಷ್ಟು ಮಾಡಿದೆನು. ಏನಂದರೆ, ಪೂಜೆ ಮಾಡುವದನ್ನೂ ಬೇರೆ ದುರ್ನಡತೆಗಳನ್ನೂ ವ್ಯಾಪಾರದ ಮೋಸಗಳನ್ನೂ ಬಿಟ್ಟು, ಪಶ್ಚಾತ್ತಾಪ ಪಟ್ಟು, ಉಪವಾಸ ಮಾಡಿ, ಧರ್ಮ ಕೊಟ್ಟು, ಸತ್ಯವನ್ನು ಮಾತಾಡಲಾರಂಭಿಸಿದೆನು.

ಕ್ರಿ. ಆಗ ನಿಮಗೆ ಗುಣ ಕಂಡಿತೋ?

ಕೋ. ಸ್ವಲ್ಪ ಹೊತ್ತು ಕಂಡಿತು. ಆದರೆ ಕಡೆಯಲ್ಲಿ ಮುಂಚಿನ ವ್ಯಾಕುಲವು ನಾನು ಮಾಡಲಾರಂಭಿಸಿದ ಪುಣ್ಯಗಳಿಂದ ಕಡಮೆಯಾಗದೆ ತಿರಿಗಿ ಬಹಳ ಹೆಚ್ಚಿತು.

ಕ್ರಿ. ಹ್ಯಾಗೆ ಹೆಚ್ಚು ಆಯಿತು?

ಕೋ. ನೀವು ವಿಶ್ವಾಸೈಯ್ಯನ ಸಂಗಡ ಮಾಯಾಪಟ್ಣಕ್ಕೆ ಬಂದ ದಿವಸದಲ್ಲಿ ವೆಂಕಟರಮಣ ದೇವಸ್ಥಾನಕ್ಕೆ ಎದುರಾಗಿರುವ ಚಾವಡಿಯಲ್ಲಿ ಬಂದು ಕೂತದ್ದು ನೆನಪಿಲ್ಲವೋ?

ಕ್ರಿ. ಚನ್ನಾಗಿ ನೆನಪು ಸಾಲದು.

ಕೋ. ಆ ಚಾವಡಿಯ ಗೋಡೆ ನನ್ನ ಮನೆಗೆ ತಗಲಿ ಇತ್ತು. ನಿಮ್ಮ ಸುದ್ದಿ ಮುಂಚೆ ಕೇಳಿದದರಿಂದ ನಿಮ್ಮನ್ನು ನೋಡ ಬೇಕೆಂದು ಬಹಳ ಅಪೇಕ್ಷಿಸಿದ್ದೆ. ಆದರೆ ಯಾರೂ ನನ್ನನ್ನು ಕಾಣ ಬಾರದೆಂದು, ಚಾವಡಿಗೆ ತಗಲಿರುವ ಕೊತಡಿಯಲ್ಲಿ ಕಿಟಕಿಯ ಹತ್ತರ ನಿಂತು, ಕ್ಷಣೇಕ್ಷಣೇ ನಿಮ್ಮನ್ನು ನೋಡಿ, ನೀವು ಮಾಡಿದ ಸಂಭಾಷಣೆಯನ್ನು ಕೇಳಿದೆನು. ಆದರೆ ಎಲ್ಲಾ ಜ್ಞಾಪಕವಿಲ್ಲ. ಕೆಲವು ಮಾತುಗಳು ನನ್ನ ಮನಸ್ಸಿಗೆ ಹತ್ತಿದದರಿಂದ ನಾನು ಈಗ ಸಹ ಚನ್ನಾಗಿ ಜ್ಞಪ್ತಿ ಮಾಡಿ ಕೊಳ್ಳುತ್ತೇನೆ. ಯಾವದಂದರೆ, ಎಲ್ಲಾ ಕೆಲಸಗಳನ್ನು ಮಾಡಿದ ಮೇಲೆ ನಾವು ನಿಷ್ಪ್ರಯೋಜಕರಾದ ಸೇವಕರೆಂದು ಅರಿಕೆ ಮಾಡ ಬೇಕೆಂದು ನೀವು ಹೇಳಿದಿರಿ. ಮತ್ತು ವಿಶ್ವಾಸೈಯ್ಯನು ನಮ್ಮ ನೀತಿ ಎಲ್ಲಾ ಮೈಲಿಗೆಯಾದ ಹರಕು ಬಟ್ಟೆಗಳ ಹಾಗೆ ಅದೆ. ನ್ಯಾಯಪ್ರಮಾಣದ ಕ್ರಿಯೆಗಳಿಂದ ಯಾವನಾದರೂ ನೀತಿವಂತನಾಗುವದಿಲ್ಲವೆಂದು ಹೇಳಿದನು. ಈ ಮಾತುಗಳು ಕಠಾರಿಯ ಹಾಗೆ ನನ್ನ ಹೃದಯವನ್ನು ತಿವಿದವು. ಮೊದಲು

ನಿಮ್ಮಿಬ್ಬರ ಮೇಲೆ ಬಹಳ ಸಿಟ್ಟು ಮಾಡಿ, ಇವರು ಬುದ್ಧಿ ಭ್ರಷ್ಟರೇ ಎಂದು ಹೇಳಿ ಕೊಂಡೆನು. ಇದನ್ನು ಹೇಳಿದ ಕೂಡಲೆ ಮುಂಚೆ ಇದ್ದ ಭಯ ಚಿಂತೆ ವ್ಯಥೆ ಎಲ್ಲಾ ತಿರಿಗಿ ನನ್ನ ಮೇಲೆ ಬಿದ್ದದರಿಂದ ದುಃಖಾಕ್ರಾಂತನಾಗಿ ನೆಲದಲ್ಲಿ ಕೂತು, ಸಣ್ಣ ಹುಡುಗನ ಹಾಗೆ ಅತ್ತು, ಏನು ಮಾಡಲಿ? ಏನು ಮಾಡಲಿ? ಎಂದು ನಿಟ್ಟುಸುರು ಬಿಡುತ್ತಿದ್ದೆನು. ಆದರೆ ನಾನು ಬಾಗಲು ಮುಚ್ಚಿ ಕೊಂಡದರಿಂದ ಯಾರೂ ನನ್ನನ್ನು ನೋಡಲಿಲ್ಲ.

ಕ್ರಿ. ಯಾಕೆ ಅಷ್ಟು ದುಃಖ ಪಟ್ಟಿರಿ?

ಕೋ. ನೀವು ಕೇಳುವದು ಯಾಕೆ? ನಾನು ಪ್ರಪಂಚದ ಮೋಹದಲ್ಲಿ ಮುಳುಗಿದ್ದಾಗ ಮಾಡಿದ ಕ್ರಿಯೆಗಳು ಮಾತ್ರವಲ್ಲ, ನಾನು ನೆನಸಿದ ಸನ್ಮಾರ್ಗದಲ್ಲಿ ಸೇರಿದ ಮೇಲೆ ಮಾಡಿದ ಎಲ್ಲಾ ಕ್ರಿಯೆಗಳು ಸಹ ಪಾಪವಾಗಿವೆ ಎಂದೂ, ನನ್ನಲ್ಲಿ ನೀತಿ ಎಷ್ಟು ಮಾತ್ರವು ಇಲ್ಲವೆಂದೂ, ಹೀಗೆ ಸತ್ತರೆ ನರಕಕ್ಕೆ ಹೋಗುವೆನೆಂದೂ, ತಿಳಿದು ಕೊಂಡದರಿಂದಲೇ ದುಃಖ ಪಟ್ಟೆನು.

ಕ್ರಿ. ಹೀಗಿದ್ದರೆ ನೀವು ಸಮಾಧಾನವನ್ನು ಹೊಂದಿದ್ದು ಹ್ಯಾಗೆ?

ಕೋ. ಕೆಲವು ದಿವಸದ ಪರಿಯಂತರ ನನಗೆ ಏನೂ ಸಮಾಧಾನವಿಲ್ಲದೆ ಇತ್ತು. ಆದದರಿಂದ ಕೆಲಸ ಮಾಡಲೊಲ್ಲದೆ ಹಸಿವೆ ಇಲ್ಲದೆ ಪೈತ್ಯಗಾರನ ಹಾಗೆ ತಿರುಗಾಡಿದೆನು. ಆ ಮೇಲೆ ನಿಮ್ಮಿಬ್ಬರನ್ನು ಸೆರೆಯಲ್ಲಿ ಹಾಕಿದರೆಂದು ಕೇಳಿದೆನು. ಕೆಲವು ದಿವಸದ ತರುವಾಯ ಅಧಿಕಾರಿಗಳು ನಿಮಗೆ ನ್ಯಾಯ ತೀರಿಸುವಾಗ ನಾನು ಸಹ ನ್ಯಾಯಸ್ಥಾನಕ್ಕೆ ಹೋಗಿ, ವಿಶ್ವಾಸ್ಯಯ್ಯನು ಅಲ್ಲಿ ಹೇಳಿದ್ದನ್ನೆಲ್ಲಾ ಕೇಳಿ, ಅವನ ಮುಖದಲ್ಲಿ ದೇವದೂತನ ಮುಖದ ಕಳೆಯನ್ನು ಕಂಡು, ಬಹಳ ಕಳವಳಗೊಂಡು, ಅವನ ಸಂಗಡ ಮಾತಾಡ ಬೇಕೆಂದು ನಿಶ್ಚೈಸಿ, ನ್ಯಾಯದ ತೀರ್ಪು ಆದ ಮೇಲೆ ಬಿಲ್ಲೆಯವರು ಆತನನ್ನು ಸೆರೆಯಲ್ಲಿ ಮುಚ್ಚಿ ಇಡುವದನ್ನು ನೋಡಿ, ದಫೇದಾರನಿಗೆ ಲಂಚ ಕೊಟ್ಟು, ನಾನು ಆತನು ಇದ್ದ ಸ್ಥಳದೊಳಗೆ ಸೇರಿದೆನು. ಅವನು

ನನ್ನ ಸಂಗಡ ಮರ್ಯಾದೆಯಿಂದಲೂ ಪ್ರೀತಿಯಿಂದಲೂ ಮಾತಾಡುವದರಿಂದ ನಾನು ಧೈರ್ಯ ಪಟ್ಟು ನನ್ನ ಮನಸ್ಸಿನಲ್ಲಿರುವ ಸ್ಥಿತಿಯನ್ನೆಲ್ಲಾ ಆತನಿಗೆ ಹೇಳಿದೆನು. ಆಗಲವನು ಎಂದಿಗೂ ಪಾಪ ಮಾಡದವನ ನೀತಿಯನ್ನು ನೀವು ಹೊಂದಿದರೇ ಹೊರ್ತು ನಿಮ್ಮ ನೀತಿಯಿಂದಲೂ ಸಮಸ್ತ ಲೋಕದ ನೀತಿಯಿಂದಲೂ ರಕ್ಷಣೆ ಶಿಕ್ಕದೆಂದು ಹೇಳಿದನು.

ಕ್ರಿ. ಆತನ ಮಾತು ಸತ್ಯವೆಂದು ನೆನಸಿದಿರೋ?

ಕೊ. ನಾನು ಶೇರಿದ ಹೊಸ ಮಾರ್ಗವನ್ನು ಮೆಚ್ಚಿ, ನನ್ನ ಪುಣ್ಯವು ಸಾಕೆಂದೆಣಿಸಿದ ವೇಳೆಯಲ್ಲಿ ನನಗೆ ಈ ಮಾತು ಹೇಳಿದ್ದಾದರೆ ಕೋಪಿಸಿ ಕೊಳ್ಳುತ್ತಿದ್ದೆನು ಹೌದು. ಆದರೆ ನನ್ನ ಬಲಹೀನತ್ವವನ್ನೂ ನನ್ನ ಉತ್ತಮವಾದ ಕ್ರಿಯೆಗಳಲ್ಲಿ ಶೇರುವ ಪಾಪವನ್ನೂ ಆಗ ತಿಳಿದು ಕೊಂಡದರಿಂದ ಅವನ ಮಾತಿಗೆ ಸಮ್ಮತಿಸಬೇಕಾಯಿತು.

ಕ್ರಿ. ಆದರೆ ಮೊದಲು ಅವನು ಆ ಮಾತು ಹೇಳಿದಾಗ ಎಂದಾದರೂ ಪಾಪ ಮಾಡದ ಮನುಷ್ಯನು ಇದ್ದಾನೆಂದು ನೆನಸಿದಿರೋ?

ಕೊ. ಅವನ ಮಾತಿಗೆ ಆಶ್ಚರ್ಯ ಪಟ್ಟೆನು ಹೌದು. ಆದರೆ ಸ್ವಲ್ಪ ಹೆಚ್ಚಾಗಿ ಸಂಭಾಷಣೆ ಮಾಡಿದ ಮೇಲೆ ಪೂರ್ಣವಾಗಿ ನಿಶ್ಚಯವಾಯಿತು.

ಕ್ರಿ. ಆ ಮನುಷ್ಯನು ಯಾವನು, ಅವನಿಂದ ಹ್ಯಾಗೆ ನೀತಿಯುಂಟಾಗುವದು, ಎಂದು ವಿಶ್ವಾಸ್ಯೈಯ್ಯನನ್ನು ಕೇಳಿದಿರೋ?

ಕೊ. ಕೇಳಿದೆನು. ಆಗಲವನು—ಸರ್ವೋನ್ನತನ ಬಲ ಪಾರ್ಶ್ವದಲ್ಲಿ ನಿವಾಸಿಸುವ ಯೇಸುವು ಎಂದು ಹೇಳಿದನು. ಅವನು ತನ್ನ ಮಾಂಸದ ದಿವಸಗಳಲ್ಲಿ ಮಾಡಿದವುಗಳ ಮೇಲೆಯೂ ಮರದಲ್ಲಿ ತೂಗುವಾಗ ಪಟ್ಟ ಶ್ರಮೆಗಳ ಮೇಲೆಯೂ ವಿಶ್ವಾಸವಿಟ್ಟು ನೀತಿಯನ್ನು ಹೊಂದ ಬೇಕು, ಅಂದನು. ಮತ್ತು ಈ ಮನುಷ್ಯನ ನೀತಿಯು ದೇವರ ಸನ್ನಿಧಿಯಲ್ಲಿ ಬೇರೊಬ್ಬನಿಗೆ ನೀತಿಯುಂಟು

ಮಾಡುವ ಬಲವನ್ನು ಹ್ಯಾಗೆ ಹೊಂದಿತೆಂದು ಕೇಳಿದಾಗ, ಅವನು ಹೇಳಿದ ಉತ್ತರವೇನಂದರೆ, ಆ ಯೇಸುವು ಪರಾಕ್ರಮ ಉಳ್ಳ ದೇವರ ಮಗನಾಗಿರುವದರಿಂದ ಅವನು ತನ್ನ ರಕ್ಷಣೆಗೋಸ್ಕರವಲ್ಲ, ನಮ್ಮಗೋಸ್ಕರವೇ ಪೂರ್ಣವಾದ ನೀತಿಯ ಕೃತ್ಯಗಳನ್ನು ನಡಿಸಿ, ಮರಣವನ್ನು ಅನುಭವಿಸಿದ್ಧಾನೆ. ಆದದರಿಂದ ಅವನಲ್ಲಿ ನಾನು ವಿಶ್ವಾಸಿಸಿದರೆ ಅವನು ಮಾಡಿದ ಕೃತ್ಯಗಳೂ ಅವುಗಳಿಂದುಂಟಾದ ಪುಣ್ಯವೂ ನನ್ನದೆಂದು ಎಣಿಸಲ್ಪಡುವವು, ಅಂದನು.

ಕ್ರಿ. ಅದಕ್ಕೆ ನೀವು ಏನು ಹೇಳಿದಿರಿ?

ಕೋ. ಇದು ನಂಬಲಾರೆನು. ನನ್ನನ್ನು ರಕ್ಷಿಸುವದಕ್ಕೆ ಅವನಿಗೆ ಮನಸ್ಸಿಲ್ಲವೆಂದು ಹೇಳಿದೆನು.

ಕ್ರಿ. ಅದಕ್ಕೆ ವಿಶ್ವಾಸೈಯ್ಯ ಏನು ಹೇಳಿದನು?

ಕೋ. ಸ್ನೇಹಿತನೇ, ಹೋಗಿ ನೋಡು, ಅಂದನು. ನನಗೆ ಧೈರ್ಯ ಸಾಲದು, ಅಂದೆನು. ಅವನು—ಯಾಕೆ? ಯೇಸು ತಾನೇ ನಿನ್ನನ್ನು ಕರದಿದ್ಧಾನೆಂದು ಹೇಳಿ, ಬರುವದಕ್ಕೆ ನನಗೆ ಧೈರ್ಯ ಹುಟ್ಟಿಸ ಬೇಕಾಗಿ, ನಾನು ಇಂದಿನ ವರೆಗೂ ಉಡಲಲ್ಲಿ ಇಟ್ಟುಕೊಂಡಿರುವಂಥ ಯೇಸು ಬರಸಿದ ಪುಸ್ತಕವನ್ನು ಕೊಟ್ಟು, ಆ ಪುಸ್ತಕದ ಒಂದೊಂದು ಗುಡುಸೂ ಸೊನ್ನೆಯೂ ಪರಲೋಕ ಭೂಲೋಕಗಳಿಗಿಂತಲೂ ದೃಢವಾಗಿವೆ, ಅಂದನು. ಮತ್ತು ಆತನು—ನಾನು ಈಗ ಈ ಲೋಕವನ್ನು ಬಿಡಲಿಕ್ಕೆ ಸಿದ್ಧವಾಗಿರುವದರಿಂದ ಈ ಪುಸ್ತಕವು ನನಗೆ ಅವಶ್ಯವಿಲ್ಲ, ನೀವು ಭದ್ರವಾಗಿ ಇಟ್ಟು ಕೊಂಡಿರ ಬೇಕೆಂದು ಹೇಳಿ ಕೊಟ್ಟನು. ನನಗೆ ಬರಹ ಚನ್ನಾಗಿ ಬಾರದಿದ್ದರೂ ನಿಕ್ಷೇಪ ಶಿಕ್ಕಿದ ಹಾಗೆ ನಾನು ಸಂತೋಷ ಪಟ್ಟು, ಪುಸ್ತಕವನ್ನು ತೆಗದು ಕೊಂಡು, ಯೇಸುವಿನ ಹತ್ತರ ಬರುವದು ಹ್ಯಾಗೆಂದು ಕೇಳಿದಾಗ, ತಂದೆಯು ಅವನನ್ನು ನಿನಗೆ ಪ್ರಕಟ ಮಾಡುವ ಹಾಗೆ ಮೊಣಕಾಲೂರಿ ಮನಃಪೂರ್ವಕವಾಗಿ ಬೇಡಿ ಕೊಳ್ಳ ಬೇಕು, ಅಂದನು. ಅವನಿಗೆ ಬಿನ್ನೈಸುವದು ಹ್ಯಾಗೆಂದು ನಾನು ಕೇಳಿದಾಗ, ಬರುವವರೆಲ್ಲರಿಗೆ ಕ್ಷಮೆಯನ್ನೂ ಕರುಣೆಯನ್ನೂ ಕೊಡುವವನಾಗಿ

ಕೃಪಾಸನದಲ್ಲಿ ಎಂದೂ ಆಸೀನನಾಗಿದ್ದಾನೆ. ಅಲ್ಲಿಗೆ ಹೋಗಿ ಬಿನ್ನಹ ಮಾಡು, ಅಂದನು. ನಾನು ಅವನ ಸನ್ನಿಧಿಯನ್ನು ಶೇರಿದ ಮೇಲೆ ಏನು ಹೇಳ ಬೇಕೆಂದು ಅರಿಯೆನು, ಅನ್ನಲಾಗಿ, ಅವನು ಪ್ರೀತಿಯಿಂದ ನನ್ನನ್ನು ನೋಡಿ—ದೇವರೇ ಪಾಪಿಷ್ಟನಾದ ನನ್ನನ್ನು ಕನಿಕರಿಸಿ, ಯೇಸು ಕ್ರಿಸ್ತನನ್ನರಿತು ವಿಶ್ವಾಸಿಸುವದಕ್ಕೆ ನನಗೆ ಸಹಾಯ ಮಾಡು; ಯಾಕಂದರೆ, ಅವನ ನೀತಿಯು ಇಲ್ಲವಾದರೆ ಇಲ್ಲವೆ ಆ ನೀತಿಯಲ್ಲಿ ನಾನು ವಿಶ್ವಾಸಿಸದೆ ಹೋದರೆ, ಪೂರ್ಣ ಭ್ರಷ್ಟನಾಗುವೆನೆಂದು ಬಲ್ಲೆನು. ಕರ್ತನೇ, ನೀನು ಕನಿಕರ ಉಳ್ಳ ದೇವರಾಗಿ, ನಿನ್ನ ಮಗನಾದ ಯೇಸು ಕ್ರಿಸ್ತನನ್ನು ಲೋಕರಕ್ಷನಾಗ ನೇಮಿಸಿದಿ ಎಂದೂ, ನನ್ನಂಥ ಬಡ ಪಾಪಿಷ್ಟರಿಗೆ ಕನಿಕರ ತೋರಿಸ ಮನಸ್ಸಾಗಿದ್ದಿ ಎಂದೂ, ಕೇಳಿದ್ದೇನೆ. ಕರ್ತನೇ, ಕೇವಲ ಪಾಪಿಯಾದ ನನ್ನನ್ನು ಕಟಾಕ್ಷದಿಂದ ನೋಡಿ, ನಿನ್ನ ಮಗನಾದ ಯೇಸು ಕ್ರಿಸ್ತನಮೂಲವಾಗಿ ನನ್ನ ಆತ್ಮವನ್ನು ರಕ್ಷಿಸಿ, ನಿನ್ನ ಕೃಪೆಗೆ ಹೆಚ್ಚಾದ ಮಹಿಮೆಯನ್ನುಂಟು ಮಾಡು. ಆಮೆನ್, ಎಂದು ಪ್ರಾರ್ಥನೆ ಮಾಡಿರಿ, ಎಂದು ಹೇಳಿದನು.

ಕ್ರಿ. ಆತನು ಹೇಳಿದ ಹಾಗೆ ಮಾಡಿದಿರೋ?

ಕೋ. ಆ ದುಷ್ಟ ಜನರು ಪ್ರಿಯ ವಿಶ್ವಾಸ್ಯೈಯ್ಯನನ್ನು ಹೊರಗೆ ವೈದು ಕೊಂದು ಹಾಕಿದಾಗ ನಾನು ದುಃಖದಿಂದ ಕಳವಳಗೊಳ್ಳುತ್ತಾ ಮನೆಗೆ ಬಂದು, ಅವನು ನನಗೆ ಕೊಟ್ಟ ಆಜ್ಞೆಯನ್ನು ನೆನಪು ಮಾಡಿ ಕೊಂಡು ತಿರಿಗಿ ತಿರಿಗಿ ಬಹಳ ಸಾರಿ ಹಾಗೇ ಪ್ರಾರ್ಥನೆ ಮಾಡಿದೆನು.

ಕ್ರಿ. ಆಗ ತಂದೆಯು ಮಗನನ್ನು ನಿಮಗೆ ಪ್ರಕಟ ಮಾಡಿದನೋ?

ಕೋ. ಒಂದು, ಎರಡು, ಮೂರು, ನಾಲ್ಕು, ಐದು, ಆರು ಸಾರಿ, ಪ್ರಾರ್ಥಿಸಿದರೂ, ಆರಂಭದಲ್ಲಿ ಏನೂ ಕಾಣಲಿಲ್ಲ.

ಕ್ರಿ. ಆಗ ನೀವು ಏನು ಮಾಡಿದಿರಿ?

ಕೊ॰. ಏನು ಮಾಡ ಬೇಕೆಂದು ಆಲೋಚನೆ ತಿಳಿಯದೆ ಇದ್ದೆನು.

ಕ್ರಿ. ಪ್ರಾರ್ಥನೆ ಬಿಡ ಬೇಕೆಂದು ನೀವು ನೆನಸಲಿಲ್ಲವೋ?

ಕೊ॰. ನೂರಾರು ಸಾರಿ ನೆನಸಿದೆನು.

ಕ್ರಿ. ಮತ್ತ್ಯಾಕೆ ಬಿಡಲಿಲ್ಲ?

ಕೊ॰. ಈ ಕ್ರಿಸ್ತನ ನೀತಿ ಇಲ್ಲದೆ ಲೋಕವೆಲ್ಲಾ ನನ್ನನ್ನು ರಕ್ಷಿಸಲಾರದೆಂಬ ಮಾತು ಸತ್ಯವೆಂದು ವಿಶ್ವಾಸಿಸಿದೆನು. ಹೀಗಿರುವದರಿಂದ ಪ್ರಾರ್ಥಿಸುವದು ಬಿಟ್ಟರೆ ಸಾಯುತ್ತೇನೆ, ಪ್ರಾರ್ಥಿಸುತ್ತಲೇ ಸತ್ತರೆ ಒಳ್ಳೇದು ಎಂದು ನೆನಸಿ ಕೊಂಡೆನು. ಮತ್ತು ತಡೆಯಾದರೆ ಅದಕ್ಕೋಸ್ಕರ ಕಾದಿರು, ಅದು ತಪ್ಪದೆ ಬರುವದು, ತಡೆಯಾಗದು ಎಂಬ ವಚನವು ಜ್ಞಾಪಕವಾಯಿತು. ಹೀಗಿರುವದರಿಂದ ತಂದೆಯು ಮಗನನ್ನು ನನಗೆ ಪ್ರಕಟ ಮಾಡುವ ಪರ್ಯಂತರಕ್ಕೂ ಪ್ರಾರ್ಥಿಸುತ್ತಲೇ ಇದ್ದೆನು.

ಕ್ರಿ. ಆತನು ಹ್ಯಾಗೆ ನಿಮಗೆ ಪ್ರಕಟವಾದನು?

ಕೊ॰. ಈ ಶರೀರದ ಕಣ್ಣುಗಳಿಂದ ಅವನನ್ನು ನೋಡಲಿಲ್ಲ. ಜ್ಞಾನದೃಷ್ಟಿಯಿಂದ ನೋಡಿದೆನು. ಅದು ಹ್ಯಾಗಂದರೆ, ವಿಶ್ವಾಸ್ತೈಯ್ಯನು ಸತ್ತ ಮರು ದಿವಸದ ರಾತ್ರಿಯಲ್ಲಿ ನನ್ನ ಹೆಂಡತಿಯೂ ಮಕ್ಕಳೂ ಮಲಗಿದ ಮೇಲೆ ನಾನೂ ಏಕಾಂತವಾಗಿ ಮಾಳಿಗೆಗೆ ಹೋಗಿ, ಬಹಳ ಅಳುತ್ತಾ ಪ್ರಾರ್ಥನೆ ಮಾಡಿದೆನು. ಮತ್ತ್ಯಾವ ಸಮಯದಲ್ಲಿಯೂ ಅದರಂಥ ದುಃಖ ನನಗೆ ಬರಲಿಲ್ಲ. ನನ್ನ ಪಾಪವು ದೊಡ್ಡದೂ ಅಸಂಖ್ಯವಾದದ್ದೂ ಆಗಿರುತ್ತದೆಂದು ಹೊಸದಾಗಿ ತಿಳಿದ ಕಾರಣ ಅಷ್ಟು ದುಃಖ ಪಟ್ಟೆನು. ನರಕವೂ ನಿತ್ಯವಾದ ನಾಶನವೂ ನನಗೆ ತಪ್ಪುವದಿಲ್ಲವೆಂದು ನೆನಸಿದಾಗ, ಕರ್ತನಾದ ಯೇಸುವು ಆಕಾಶದೊಳಗಿಂದ ನನ್ನನ್ನು ದೃಷ್ಟಿಸಿ, ಕರ್ತನಾದ ಯೇಸು ಕ್ರಿಸ್ತನಲ್ಲಿ ವಿಶ್ವಾಸಿಸು. ಆಗಲು ರಕ್ಷಿಸಲ್ಪಡುವಿ ಎಂದು ಹೇಳಿದ ಹಾಗೆ ನನಗೆ ಅಕಸ್ಮಾತ್ತಾಗಿ ತೋಚಿತು.

ಅದಕ್ಕೆ ನಾನು—ಕರ್ತನೇ, ನಾನು ಮಹಾ ಪಾಪಿಯಾಗಿ

ದ್ದೇನೆ, ಅಂದಾಗ, ಅವನು—ನನ್ನ ಕೃಪೆ ನಿನಗೆ ಸಾಕು ಎಂದು ಹೇಳಿದನು. ಹಾಗಾದರೆ ವಿಶ್ವಾಸಿಸುವದು ಅಂದರೇನು? ಎಂದು ನಾನು ಕೇಳಲಾಗಿ, ನನ್ನ ಹತ್ತರ ಬರುವವನು ಎಂದಿಗೂ ಹಸಿವೆ ಪಡನು, ನನ್ನಲ್ಲಿ ವಿಶ್ವಾಸಿಸುವವನು ಎಂದಿಗೂ ಬಾಯಾರ, ಎಂಬ ಮಾತು ಜ್ಞಾಪಕ ಮಾಡಿ, ವಿಶ್ವಾಸಿಸುವದೂ ಬರುವದೂ ಬಂದೇ ಎಂದೂ, ಕ್ರಿಸ್ತನಿಂದುಂಟಾಗುವ ರಕ್ಷಣೆಗೋಸ್ಕರ ಅಪೇಕ್ಷೆ ಪಟ್ಟು ಓಡಿ ಬರುವವನು ಸತ್ಯವಾಗಿ ಕ್ರಿಸ್ತನಲ್ಲಿ ವಿಶ್ವಾಸಿಸುತ್ತಾನೆಂದೂ, ತಿಳಿದು ಕೊಂಡೆನು. ಆಗ ನಾನು ಕಣ್ಣೀರಿಟ್ಟು, ಕರ್ತನೇ, ನನ್ನಂಥ ದೊಡ್ಡ ಪಾಪಿಯನ್ನು ನೀನು ಅಂಗೀಕರಿಸಿ ರಕ್ಷಿಸ ಬಹುದೋ? ಎಂದು ಕೇಳಲಾಗಿ, ಅವನು—ನನ್ನ ಹತ್ತರ ಬರುವವನನ್ನು ನಾನು ಹ್ಯಾಗಾದರೂ ತಳ್ಳಿ ಬಿಡೆನೆಂದು ಹೇಳಿದ ಮಾತನ್ನು ಕೇಳಿದೆನು. ತರುವಾಯ ನಾನು—ಕರ್ತನೇ, ನಿನ್ನನ್ನು ಹ್ಯಾಗೆ ತಿಳಿದು ಕೊಂಡು ನಿನ್ನಲ್ಲಿ ದೃಢ ವಿಶ್ವಾಸವಿಡ ಬೇಕು? ಎಂದು ಕೇಳಿದಾಗ, ಅವನು ಹೇಳಿದ್ದೇನಂದರೆ, ಕ್ರಿಸ್ತನು ಪಾಪಿಷ್ಟರನ್ನು ರಕ್ಷಿಸುವದಕ್ಕೋಸ್ಕರ ಈ ಲೋಕಕ್ಕೆ ಬಂದನು. ಅವನು ವಿಶ್ವಾಸಿಸುವವರೆಲ್ಲರಿಗೆ ನೀತಿಗಾಗಿ ನ್ಯಾಯಪ್ರಮಾಣದ ಅಂತ್ಯವಾಗಿದ್ದಾನೆ. ಅವನು ನಮ್ಮ ಪಾಪಗಳಿಗೋಸ್ಕರ ಸತ್ತು, ನಮ್ಮ ನೀತಿ ನಿರ್ಣಯಕ್ಕೋಸ್ಕರ ತಿರಿಗಿ ಎದ್ದನು. ಅವನು ನಮಗೆ ಪ್ರೀತಿ ಮಾಡಿ ತನ್ನ ರಕ್ತದಲ್ಲಿ ನಮ್ಮನ್ನು ತೊಳೆದು ನಮ್ಮ ಪಾಪಗಳನ್ನು ಶುದ್ಧ ಮಾಡಿದ್ದಾನೆ. ಅವನು ದೇವರಿಗೂ ನಮಗೂ ಮಧ್ಯಸ್ಥನಾಗಿದ್ದಾನೆ. ಅವನು ನಮ್ಮಗೋಸ್ಕರ ನಡುವೆ ಬರುವದಕ್ಕೆ ಯಾವಾಗಲೂ ಜೀವಿಸುತ್ತಾನೆ. ಈ ವಚನಗಳೆಲ್ಲಾ ನಾನು ಗ್ರಹಿಸಿ, ಅವನಿಂದಲೇ ನನಗೆ ನೀತಿಯುಂಟಾಗ ಬೇಕೆಂದೂ, ಅವನ ರಕ್ತದಿಂದ ನನ್ನ ಪಾಪಗಳನ್ನು ಮುಚ್ಚಿ ಬಿಡಬೇಕೆಂದೂ, ಅವನು ತನ್ನಗೋಸ್ಕರವಲ್ಲ ಸಿದ್ಧವಾದ ಕೃಪೆಯನ್ನು ಅಂಗೀಕರಿಸಿ ಸ್ತೋತ್ರ ಮಾಡುವವರಿಗೋಸ್ಕರವೇ ತಂದೆಯ ನ್ಯಾಯಪ್ರಮಾಣಕ್ಕೆ ಒಳಗಾಗಿದ್ದು ಅದನ್ನು ಪೂರ್ಣ ವಿಧೇಯತ್ವದಿಂದ ಕೈಕೊಂಡು ಅದರ ಶಿಕ್ಷೆಯನ್ನು ತಾಳಿದನೆಂದೂ, ತಿಳು ಕೊಂಡೆನು.

ಆಗ ನನ್ನ ಹೃದಯವು ಸಂತೋಷದಿಂದಲೂ, ನನ್ನ ಕಣ್ಣುಗಳು ನೀರಿನಿಂದಲೂ, ತುಂಬಿ, ಕ್ರಿಸ್ತನಿಗೂ ಅವನ ಜನರಿಗೂ ಅವನ ಮಾರ್ಗಕ್ಕೂ ಮಾಡುವ ಪ್ರೀತಿಯಿಂದ ನನ್ನ ಹೃದಯವು ತೃಪ್ತಿ ಹೊಂದಿತು.

ಕ್ರಿ. ಕ್ರಿಸ್ತನು ನಿಮ್ಮ ಆತ್ಮಕ್ಕೆ ಪ್ರಕಟವಾದನೆಂಬುವದರಲ್ಲಿ ಸಂದೇಹವಿಲ್ಲ. ಅದರಿಂದ ಉಂಟಾದ ಫಲವನ್ನು ನನಗೆ ತಿಳಿಸ ಬೇಕು.

ಕೊ. ಲೋಕವೆಲ್ಲಾದರಲ್ಲಿ ಎಷ್ಟು ನೀತಿಯು ಕೀರ್ತಿ ಇದ್ದಾಗ್ಯೂ ಅದು ಆಜ್ಞೆನಿರ್ಣಯಕ್ಕೊಳಗೆ ಬಿದ್ದದೆ ಎಂದು ತಿಳುಕೊಂಡೆನು. ನೀತಿಪರನಾದ ತಂದೆಯಾಗಿರುವ ದೇವರು ತನ್ನ ನೀತಿಗೆ ಏನೂ ಕಡಮೆ ಮಾಡದೆ ತನ್ನ ಹತ್ತರ ಬರುವ ಪಾಪಿಷ್ಟರಿಗೆ ನೀತಿಯನ್ನುಂಟು ಮಾಡ ಬಹುದೆಂದು, ತಿಳುಕೊಂಡೆನು. ನನ್ನ ಮುಂಚಿನ ನಡತೆಯ ಕೆಟ್ಟತನವನ್ನೂ ಬುದ್ಧಿ ಇಲ್ಲದ ಸ್ಥಿತಿಯನ್ನೂ ನೆನಪು ಮಾಡಿ, ಬಹಳ ನಾಚಿಕೆ ಪಟ್ಟೆನು. ಯೇಸು ಕ್ರಿಸ್ತನ ಸೌಂದರ್ಯವನ್ನು ನೋಡಿ, ಆಶ್ಚರ್ಯವೂ ಪ್ರೀತಿಯೂ ಪಟ್ಟೆನು. ಕರ್ತನಾದ ಯೇಸುವಿನ ಹೆಸರಿಗಾಗಿ ಏನಾದರೂ ಮಾಡ ಬೇಕೆಂದು ಅಪೇಕ್ಷಿಸಿ, ನಿರ್ಮಲವಾದ ನಡತೆಯ ಮೇಲೆ ಅತ್ಯಾಶೆಯಾಗಿದ್ದೆನು. ಜಾತಿ ಮನೆ ಆಸ್ತಿ ಮೊದಲಾದವುಗಳನ್ನು ಬಿಟ್ಟು ಕರ್ತನಾದ ಯೇಸುವನ್ನು ನೋಡುವದಕ್ಕೆ ಯಾತ್ರೆಗೆ ಹೊರಡ ಬೇಕೆಂದು ಪೂರ್ಣ ಹೃದಯದಿಂದ ನಿಶ್ಚಯಿಸಿ ಕೊಂಡು, ಮರು ದಿವಸದಲ್ಲಿ ಕರ್ತನ ಅಪ್ಪಣೆಯ ಪ್ರಕಾರ ನಮ್ಮ ಪಟ್ಣಕ್ಕೆ ಬಂದ ಸುವಾರ್ತಿಕನಿಂದ ತ್ರಿಯೇಕನಾದ ದೇವರ ಹೆಸರಿನಲ್ಲಿ ಸ್ನಾನವನ್ನು ತೆಗದು ಕೊಂಡು ಹೊರಟೆನು. ಆಗ ಪರಮ ಸುಖದಿಂದ ನನ್ನ ಶರೀರದಲ್ಲಿರುವ ರಕ್ತವನ್ನೆಲ್ಲಾ ಕರ್ತನಾದ ಯೇಸುವಿಗೋಸ್ಕರ ಚೆಲ್ಲ ಬಹುದೆಂಬ ಮನಸ್ಸಾಯಿತು.

---

## 19. Conversation with Ignorance.

## ೧೯. ಮೂಢಪ್ಪನ ಸಂಗಡ ಸಂಭಾಷಣೆ.

ತರುವಾಯ ಕೋರಿಕೆಗೌಡನು ಹಿಂದಿರುಗಿ ನೋಡಿ, ಮೂಢಪ್ಪನು ಬರುವದನ್ನು ಕಂಡು ಕ್ರಿಸ್ತಿಯನಿಗೆ— ಅಗೋ ಆ ಯೌವನಸ್ಥನು; ಎಷ್ಟು ಮೆಲ್ಲಗೆ ಬರುತ್ತಾನೆ ಅನಲು, ಕ್ರಿಸ್ತಿಯನು— ಹೌದು, ಹೌದು, ನಮ್ಮ ಸಹವಾಸವು ಅವನಿಗೆ ಬೇಡವಾಗಿದೆ, ಅಂದನು.

ಕೋ. ಅವನು ಈ ವರೆಗೂ ನಮ್ಮ ಸಂಗಡ ಬಂದಿದ್ದರೆ ಅವನಿಗೆ ಏನೂ ನಷ್ಟವಾಗುತ್ತಿದ್ದಿಲ್ಲವೆಂದು ನೆನಸುತ್ತೇನೆ.

ಕ್ರಿ. ಅದು ಹೌದು. ಅವನಿಗೆ ಮಾತ್ರ ಬೇರೆಯಾಗಿ ಕಾಣುವದು.

ಕೋ. ಅದಕ್ಕೇನು ಚಿಂತೆ. ಅವನಿಗೋಸ್ಕರ ಸ್ವಲ್ಪ ನಿಲ್ಲುವ.

ಅವನು ಬಂದು ಸೇರಿದ ಮೇಲೆ ಕ್ರಿಸ್ತಿಯನು ಅವನಿಗೆ ಹೇಳಿದ್ದು—ನಡಿಯಿರಪ್ಪ, ಹಿಂದೆ ಬೀಳುವದು ಯಾಕೆ?

ಮೂ. ಒಂದು ವೇಳೆ ಬೇರೊಬ್ಬರ ಸಂಗಡ ನಡೆಯುವದು ನನಗೆ ಹಿತವಾಗಿ ಕಾಣುತ್ತದೆ. ಒಂದು ವೇಳೆ ಒಂಟಿಗನಾಗಿರುವದು ಅದಕ್ಕಿಂತಲೂ ಒಳ್ಳೆದಾಗಿ ಕಾಣುತ್ತದೆ.

ತರುವಾಯ ಕ್ರಿಸ್ತಿಯನು ಕೋರಿಕೆಗೌಡನಿಗೆ— ಇವನಿಗೆ ನಮ್ಮ ಸಹವಾಸ ಬೇಡವೆಂದು ನಾನು ಹೇಳಲಿಲ್ಲವೋ? ಎಂದು ಮೆಲ್ಲಗೆ ಹೇಳಿ, ಮೂಢಪ್ಪನಿಗೆ— ನೀವು ಬನ್ನಿ, ಈ ಏಕಾಂತ ಸ್ಥಳದಲ್ಲಿ ಮಾತಾಡಿ ಕೊಂಡು ಹೊತ್ತು ಕಳೆಯುವ. ಈಗ ಹ್ಯಾಗಾಯಿತು? ನಿಮ್ಮ ಆತ್ಮಕ್ಕೂ ದೇವರಿಗೂ ಏನು ಅನ್ಯೋನ್ಯವೆಂದು ಕೇಳಿದನು.

ಮೂ. ಒಳ್ಳೇ ಅನ್ಯೋನ್ಯ ಉಂಟೆಂದು ನೆನಸುತ್ತೇನೆ.

ಬಹಳ ಒಳ್ಳೇ ಆಲೋಚನೆಗಳು ನನ್ನ ಮನಸ್ಸಿನಲ್ಲಿ ಹುಟ್ಟಿ ಸಂಚರಿಸುವ ವೇಳೆಯಲ್ಲಿ ನನ್ನನ್ನು ಆದರಿಸುತ್ತವೆ.

ಕ್ರಿ. ಅವು ಎಂಥಾ ಒಳ್ಳೇ ಆಲೋಚನೆಗಳು? ನಮಗೆ ಹೇಳಬೇಕು.

ಮೂ. ದೇವರನ್ನೂ ಪರಲೋಕವನ್ನೂ ಆಲೋಚಿಸುತ್ತೇನೆ.

ಕ್ರಿ. ಪ್ರೇತ ಪಿಶಾಪಿಚಿಗಳು ಸಹ ಅದನ್ನು ಆಲೋಚಿಸುತ್ತವೆ.

ಮೂ. ಆದರೆ ನಾನು ಅಪೇಕ್ಷೆ ಇಟ್ಟು ಆಲೋಚಿಸುತ್ತೇನೆ.

ಕ್ರಿ. ಪರಲೋಕದ ಮೇಲೆ ಅಪೇಕ್ಷೆ ಮಾಡುವವರೆಲ್ಲರು ಅದರಲ್ಲಿ ಶೇರರು. ಮೈಗಳ್ಳನ ಆತ್ಮವು ಆಶೆ ಮಾಡಿದರೂ ಏನೂ ಹೊಂದುವದಿಲ್ಲ, ಎಂಬ ವಚನ ಉಂಟು.

ಮೂ. ಆದರೆ ನಾನು ಆ ಆಲೋಚನೆಗಳ ಪ್ರಕಾರ ಮಾಡಿ ಅವುಗಳಿಗೋಸ್ಕರ ಎಲ್ಲವನ್ನು ಬಿಟ್ಟು ಬಂದಿದ್ದೇನೆ.

ಕ್ರಿ. ಅದೇ ನನಗೆ ಸಂದೇಹವಾಗಿದೆ. ಎಲ್ಲಾ ಬಿಡುವದು ಮಹಾ ಕಷ್ಟ. ಅದು ಯಾವ ಕಷ್ಟವೆಂದು ಎಲ್ಲರಿಗೂ ತಿಳಿಯುವದಿಲ್ಲ. ಆದರೆ ನೀವು ದೇವರಿಗೋಸ್ಕರವೂ ಪರಲೋಕಕ್ಕೋಸ್ಕರವೂ ಎಲ್ಲವನ್ನು ಬಿಟ್ಟಿರಿ ಎಂಬುವದಕ್ಕೆ ಏನು ದೃಷ್ಟಾಂತ?

ಮೂ. ನನ್ನ ಹೃದಯವೇ ಸಾಕ್ಷಿ.

ಕ್ರಿ. ತನ್ನ ಹೃದಯದಲ್ಲಿ ನಂಬಿಕೊಳ್ಳುವವನು ಹುಚ್ಚನು, ಎಂಬ ಜ್ಞಾನ ವಾಕ್ಯ ಉಂಟು.

ಮೂ. ಈ ವಾಕ್ಯವು ಕೆಟ್ಟ ಹೃದಯಕ್ಕೆ ಒಪ್ಪುತ್ತದೆ. ನನ್ನದು ಒಳ್ಳೇದು.

ಕ್ರಿ. ಅದಕ್ಕೆ ದೃಷ್ಟಾಂತವೇನು?

ಮೂ. ನನ್ನ ಹೃದಯವು ಪರಲೋಕದ ಕೋರಿಕೆಯಲ್ಲಿ ನನ್ನನ್ನು ಭದ್ರ ಪಡಿಸುತ್ತದೆ.

ಕ್ರಿ. ನಿಮ್ಮ ಹೃದಯವು ಕೋರಿಕೆಗೆ ಕಾರಣವಿಲ್ಲದೆ ನಿಮ್ಮನ್ನು ಆದರಿಸಿ ಮೋಸಗೊಳ್ಳಿಸುವದೆಂದು ನೆನಸುತ್ತೇನೆ.

ಮೂ. ಆದರೆ ನನ್ನ ಹೃದಯವೂ ನಡತೆಯೂ ಒಪ್ಪುವದರಿಂದ ನನ್ನ ಕೋರಿಕೆಯು ಒಳ್ಳೇ ನೆಲೆಗೊಂಡಿತು.

ಕ್ರಿ. ನಿಮ್ಮ ಹೃದಯವೂ ನಡತೆಯೂ ಒಪ್ಪುತ್ತವೆಂದು ಯಾರು ನಿಮಗೆ ಹೇಳಿದರು?

ಮೂ. ನನ್ನ ಹೃದಯವೇ.

ಕ್ರಿ. ಕಳ್ಳ ಕಳ್ಳನಿಗೆ ಸಾಕ್ಷಿಯಾದಪ್ಪಂದ. ನಿಮ್ಮ ಹೃದಯವು ಸಾಕ್ಷಿಯೋ? ಈ ವಿಷಯಕ್ಕೆ ದೇವರ ವಾಕ್ಯದ ಸಾಕ್ಷಿಯೇ ಹೊರ್ತು ಬೇರೆ ಸಾಕ್ಷಿಯಾಗದು.

ಮೂ. ಆದರೆ ಒಳ್ಳೇ ಆಲೋಚನೆಯುಳ್ಳ ಹೃದಯವು ಒಳ್ಳೇದಲ್ಲವೋ? ದೇವರ ಆಜ್ಞೆಗಳ ಪ್ರಕಾರವಾಗಿರುವ ನಡತೆಯು ಒಳ್ಳೇದಲ್ಲವೋ?

ಕ್ರಿ. ಅದಕ್ಕೆ ಸಂದೇಹವಿಲ್ಲ. ಆದರೆ ಅಂಥ ಹೃದಯವೂ ನಡತೆಯೂ ಉಂಟಾಗಿರುವದು ಬೇರೆ. ಉಂಟೆಂದು ನೆನಸುವದು ಬೇರೆ.

ಮೂ. ಒಳ್ಳೇ ಆಲೋಚನೆಗಳು ಯಾವವು? ದೇವರ ಆಜ್ಞೆಗಳ ಪ್ರಕಾರವಾದ ನಡತೆ ಯಾವದು? ನನಗೆ ಹೇಳ ಬೇಕು.

ಕ್ರಿ. ನಮ್ಮನ್ನೂ ದೇವರನ್ನೂ ಕ್ರಿಸ್ತನನ್ನೂ ಬೇರೆ ಕಾರ್ಯಗಳನ್ನೂ ಕುರಿತು ಬೇರೆ ಬೇರೆ ಒಳ್ಳೇ ಆಲೋಚನೆಗಳು ಇರುತ್ತವೆ.

ಮೂ. ನಮ್ಮನ್ನು ಕುರಿತ ಒಳ್ಳೇ ಆಲೋಚನೆಗಳು ಯಾವವು?

ಕ್ರಿ. ದೇವರ ವಾಕ್ಯಕ್ಕೆ ಅನುಕೂಲವಾದವುಗಳೇ.

ಮೂ. ನಮ್ಮನ್ನು ಕುರಿತ ಒಳ್ಳೇ ಆಲೋಚನೆಗಳು ಯಾವಾಗ ದೇವರ ವಾಕ್ಯಕ್ಕೆ ಅನುಕೂಲಿಸುತ್ತವೆ?

ಕ್ರಿ. ದೇವರ ವಾಕ್ಯವು ನಮಗೆ ತೀರಿಸುವ ನಿರ್ಣಯವನ್ನು ನಾವೇ ತೀರಿಸಿ ಕೊಂಡರೆ ಅವು ಅನುಕೂಲಿಸುತ್ತವೆ. ಅದು ಹ್ಯಾಗಂದರೆ, ಪ್ರಾಣಭಾವವಾಗಿರುವ ಮನುಷ್ಯರನ್ನು ಕುರಿತು, ಅವರಲ್ಲಿ ನೀತಿವಂತನು ಒಬ್ಬನೂ ಇಲ್ಲ. ಒಳ್ಳೇದು ಮಾಡುವವನು ಒಬ್ಬನೂ ಇಲ್ಲವೆಂದೂ, ಮನುಷ್ಯನ ಹೃದಯದ ಭಾವನೆಯು ಅವನ ಚಿಕ್ಕತನದಾರಭ್ಯ ಕೆಟ್ಟದ್ದೇ ಎಂದೂ, ಹೇಳುತ್ತದೆ. ಹಾಗಾದರೆ ನಮ್ಮನ್ನು

ಕುರಿತು ಇಂಥ ಆಲೋಚನೆ ಮಾಡಿ ತಿಳುಕೊಂಡರೆ ನಮ್ಮ ಆಲೋಚನೆಗಳು ದೇವರ ವಾಕ್ಯಕ್ಕೆ ಅನುಕೂಲಿಸುವದರಿಂದ ಅವು ಒಳ್ಳೇವಾಗಿವೆ.

ಮೂ. ನನ್ನ ಹೃದಯ ಅಷ್ಟು ಕೆಟ್ಟದ್ದೆಂದು ಎಂದಾದರೂ ನಂಬೆನು.

ಕ್ರಿ. ಹಾಗಾದರೆ ನಿಮ್ಮ ವಿಷಯವಾಗಿ ಹುಟ್ಟಿದಾರಭ್ಯ ನಿಮಗೆ ಒಳ್ಳೇ ಆಲೋಚನೆ ಒಂದೂ ಬರಲಿಲ್ಲ. ಇನ್ನೂ ಕೇಳಿರಿ. ದೇವರ ವಾಕ್ಯವು ನಮ್ಮ ಹೃದಯವನ್ನು ಕುರಿತು ಬೋಧಿಸುವ ಪ್ರಕಾರವೇ ನಮ್ಮ ನಡತೆಯನ್ನು ಕುರಿತೂ ಬೋಧಿಸುತ್ತದೆ. ನಮ್ಮ ಹೃದಯಗಳೂ ನಡತೆಗಳೂ, ಇವುಗಳ ವಿಷಯವಾದ ಆಲೋಚನೆಗಳು, ದೇವರ ವಾಕ್ಯದ ಬೋಧನೆಗೆ ಅನುಕೂಲಿಸಿದರೆ ಅದಕ್ಕೆ ಅನುಕೂಲಿಸಿದ ಕಾರಣದಿಂದ ಒಳ್ಳೇಯವುಗಳಾಗಿವೆ.

ಮೂ. ಅದನ್ನು ಸ್ಪಷ್ಟವಾಗಿ ಹೇಳಿರಿ.

ಕ್ರಿ. ಮನುಷ್ಯರ ನಡತೆಗಳು ಡೊಂಕಾಗಿವೆ. ಒಳ್ಳೇಯವುಗಳಲ್ಲ. ಅವರು ಸ್ವಭಾವದಿಂದ ಸನ್ಮಾರ್ಗವನ್ನು ಬಿಟ್ಟವರಾಗಿ ಅದನ್ನು ಅರಿಯದೆ ಇದ್ದಾರೆ ಎಂದು ದೇವರ ವಾಕ್ಯವು ಹೇಳುತ್ತದೆ. ಹಾಗಾದರೆ ಒಬ್ಬನು ತನ್ನ ನಡತೆಯ ವಿಷಯವಾಗಿ ಇದೇ ನೆನಸಿ ವಿನಯದಿಂದಲೂ ಪಶ್ಚಾತ್ತಾಪದಿಂದಲೂ ಯುಕ್ತನಾಗಿದ್ದರೆ ಅವನ ಆಲೋಚನೆಗಳು ದೇವರ ವಾಕ್ಯದ ಬೋಧನೆಗೆ ಅನುಕೂಲಿಸುವ ಕಾರಣ ಅವು ಒಳ್ಳೇಯವುಗಳಾಗಿವೆ.

ಮೂ. ದೇವರ ವಿಷಯವಾದ ಒಳ್ಳೇ ಆಲೋಚನೆಗಳು ಯಾವವು?

ಕ್ರಿ. ದೇವರ ಗುಣ ಸ್ವಭಾವಗಳ ವಿಷಯವಾಗಿ ದೇವರ ವಾಕ್ಯವು ಬೋಧಿಸಿದ ಹಾಗೆಯೇ ನಾವು ಆಲೋಚಿಸಿದರೆ ನಮ್ಮ ಆಲೋಚನೆಗಳು ಒಳ್ಳೇಯವುಗಳಾಗಿವೆ. ಇದನ್ನು ಈಗ ವಿವರಿಸುವದಕ್ಕೆ ಹೊತ್ತು ಸಾಲದು. ದೇವರಿಗೂ ನಮಗೂ ಇರುವ ಅನ್ಯೋನ್ಯದ ಮಾತು ಮಾತ್ರ ಹೇಳುತ್ತೇನೆ. ಏನಂದರೆ, ನಾವೇ

ನಮ್ಮನ್ನು ತಿಳಿದದಕ್ಕಿಂತ ಅವನು ನಮ್ಮನ್ನು ಚನ್ನಾಗಿ ಬಲ್ಲನೆಂದೂ, ನಾವು ಪಾಪವನ್ನು ನೋಡದ ಸಮಯದಲ್ಲಿ ಅವನು ನೋಡಲಾಪ ನೆಂದೂ, ಅವನು ನಮ್ಮ ಅಂತರಂಗದ ಆಲೋಚನೆಗಳನ್ನು ಅರಿತಿ ಪ್ಪಾನೆಂದೂ, ನಮ್ಮ ಹೃದಯವೂ ಅದರಲ್ಲಿರುವ ಅಗಾಧಗಳೂ ಅವನ ಕಣ್ಣುಗಳಿಗೆ ಬೈಲಾಗಿವೆ ಎಂದೂ, ನಮ್ಮ ಸ್ವಂತ ನೀತಿ ಎಲ್ಲಾ ಅವನಿಗೆ ಅಸಂಹ್ಯವಾಗಿದೆ ಎಂದೂ, ನಾವು ಮಾಡಿದ ಉತ್ತ ಮ ಕ್ರಿಯೆಗಳಲ್ಲಿಯಾದರೂ ಭರವಸವಿಟ್ಟು ಅವನ ಸನ್ನಿಧಿಯಲ್ಲಿ ಶೇರಿದರೆ ಅವನು ನಮ್ಮನ್ನು ಅಂಗೀಕರಿಸಲಾರನೆಂದೂ, ದೇವರನ್ನು ಕುರಿತು ಈ ಮೊದಲಾದ ಆಲೋಚನೆಗಳು ನಮ್ಮಲ್ಲಿ ಇರ ತಕ್ಕವು ಗಳಾಗಿವೆ.

ಮೂ. ನನಗೆ ಹುಚ್ಚು ಹಿಡಿಯಿತೆಂದು ನೆನಸುತ್ತೀರೋ? ದೇವರು ನನಗಿಂತ ಹೆಚ್ಚು ಬಲ್ಲವನೆಂದು ನಾನು ತಿಳಿಯಲಿಲ್ಲವೆಂದು ನೆನಸುತ್ತೀರೋ? ನನ್ನ ಉತ್ತಮ ಕ್ರಿಯೆಗಳಲ್ಲಿಯಾದರೂ ಭರವಸ ವಿಟ್ಟು ಅವನ ಸನ್ನಿಧಿಯಲ್ಲಿ ಶೇರುವೆನೋ?

ಕ್ರಿ. ಹಾಗಾದರೆ ಈ ವಿಷಯದಲ್ಲಿ ಏನು ನೆನಸುತ್ತೀರಿ?

ಮೂ. ನೆನಸುವದೇನು? ಕ್ರಿಸ್ತನಲ್ಲಿ ನಂಬಿಕೆ ಇಟ್ಟು ನೀತಿ ಯನ್ನು ಹೊಂದ ಬೇಕಾಗುವದಲ್ಲವೋ?

ಕ್ರಿ. ಅವನ ನೀತಿಯು ನಿಮಗೆ ಅವಶ್ಯವಾಗದಿದ್ದರೆ ಅವನಲ್ಲಿ ನಂಬಿಕೆ ಇಡುವದು ಯಾಕೆ? ನಿಮ್ಮ ಸ್ವಭಾವವು ಕೆಟ್ಟದ್ದೆಂದೂ, ನಿಮ್ಮಿಂದ ಅನೇಕ ಪಾಪಗಳು ನಡದವೆಂದೂ, ನೀವು ನೋಡದೆ, ನಿಮಗೂ ನಿಮ್ಮ ಕೃತ್ಯಗಳಿಗೂ ಮೆಚ್ಚುತ್ತಾ ಇರುವದರಿಂದ ದೇವರ ಮುಂದೆ ನೀತಿಯನ್ನು ಪಡ ಕೊಳ್ಳುವದಕ್ಕೆ ಕ್ರಿಸ್ತನ ನೀತಿಯು ಅವ ಶ್ಯವಿಲ್ಲವೆಂಬುವವರಲ್ಲಿ ಒಬ್ಬರಾಗಿದ್ದೀರಿ, ಎಂದೂ ಕಾಣುತ್ತದೆ. ಹಾಗಾದರೆ ನೀವು ಕ್ರಿಸ್ತನಲ್ಲಿ ನಂಬಿಕೆ ಇಡುತ್ತೇನೆಂದು ಹೇಳುವದು ಹ್ಯಾಗೆ?

ಮೂ. ಸರಿಯಾಗಿ ನಂಬುತ್ತೇನಷ್ಟೇ.

ಕ್ರಿ. ಹ್ಯಾಗೆ ನಂಬುತ್ತೀರಿ?

ಮೂ. ಕ್ರಿಸ್ತನು ಪಾಪಿಷ್ಟರಿಗೋಸ್ಕರ ಸತ್ತನೆಂದೂ, ಅವನ ಆಜ್ಞೆಗಳಿಗೆ ಅನುಸಾರವಾದ ನನ್ನ ನಡತೆಯನ್ನು ಅವನು ದಯದಿಂದ ನೋಡಿ, ದೇವರ ಮುಂದೆ ನನಗೆ ನೀತಿಯನ್ನುಂಟು ಮಾಡಿ, ಶಾಪಕ್ಕೆ ನನ್ನನ್ನು ತಪ್ಪಿಸುವನೆಂದೂ, ನಂಬುತ್ತೇನೆ. ಅದೇನಂದರೆ, ಕ್ರಿಸ್ತನು ತನ್ನ ಪುಣ್ಯದಿಂದ ನನ್ನ ಪುಣ್ಯ ಕ್ರಿಯೆಗಳನ್ನು ತನ್ನ ತಂದೆಗೆ ಅಂಗೀಕಾರವಾಗ ಮಾಡುತ್ತಾನೆ. ಈ ಪ್ರಕಾರ ನನಗೆ ನೀತಿಯುಂಟಾಗುವದು.

ಕ್ರಿ. ಈ ನಿಮ್ಮ ವಿಶ್ವಾಸದ ಅರಿಕೆಗೆ ಉತ್ತರ ಕೊಡುತ್ತೇನೆ ಕೇಳಿರಿ. ಮೊದಲನೇದು. ನಿಮ್ಮಂಥ ವಿಶ್ವಾಸದ ವಿವರವು ದೇವರ ವಾಕ್ಯದಲ್ಲಿ ಎಲ್ಲಿಯೂ ಕಾಣದ ಕಾರಣ ಅದು ಸ್ವಂತ ಕಲ್ಪನೆಯಾಗಿದೆ. ಎರಡನೇದು. ಕ್ರಿಸ್ತನಲ್ಲಿರುವ ನೀತಿಯಿಂದಲ್ಲ ನಿಮ್ಮದರಿಂದ ನೀವು ನೀತಿವಂತರಾಗುವೆವೆಂದು ನಂಬುವದರಿಂದ ಅದು ಸುಳ್ಳು ನಂಬಿಕೆ. ಮೂರನೇದು. ನಿಮಗಲ್ಲ, ನಿಮ್ಮ ಕೃತ್ಯಗಳಿಗೆ ಮಾತ್ರ ನೀತಿನಿರ್ಣಯ ಉಂಟಾಗುವದೆಂದೂ, ನಿಮ್ಮ ಕೃತ್ಯಗಳಿಗೋಸ್ಕರ ನಿಮಗೆ ನೀತಿನಿರ್ಣಯ ಉಂಟಾಗುವದೆಂದೂ, ನೀವು ಅಬದ್ಧವಾಗಿ ನಂಬುತ್ತೀರಿ. ಹೀಗಿರುವದರಿಂದ ಈ ನಿಮ್ಮ ವಿಶ್ವಾಸವು ಮೋಸಗೊಳ್ಳಿಸುವಂಥಾದ್ದಾಗಿ ಸರ್ವಶಕ್ತನು ಉಳ್ಳ ದೇವರ ದಿನದಲ್ಲಿ ನಿಮ್ಮನ್ನು ಕೋಪಕ್ಕೆ ತಪ್ಪಿಸಲಾರದು. ನ್ಯಾಯಪ್ರಮಾಣದಿಂದ ನಮ್ಮ ಆತ್ಮಕ್ಕೆ ಆಜ್ಞಾನಿರ್ಣಯ ಉಂಟಾಗುವದೆಂದು ತಿಳು ಕೊಂಡು ಪೂರ್ಣ ನೀತಿಯುಳ್ಳ ಯೇಸು ಕ್ರಿಸ್ತನನ್ನು ಆಶ್ರಯ ಮಾಡಿ ಕೊಂಡರೇನೆ ನೀತಿಯುಂಟು ಮಾಡುವ ವಿಶ್ವಾಸವು ನಮ್ಮಲ್ಲಿ ಹುಟ್ಟುವದು. ಯೇಸು ಕ್ರಿಸ್ತನ ನೀತಿ ಎಂಬ ಮಡಿ ವಸ್ತ್ರವನ್ನು ಹೊಂದಿ ಧರಿಸಿ ಕೊಂಡವರು ಪರಿಶುದ್ಧರಾಗಿ ದೇವರ ಮುಂದೆ ನಿಂತು ತಾವು ಮಾಡಿದ ಪಾಪಗಳಿಗೆ ತಕ್ಕ ಶಿಕ್ಷೆ ಅಲ್ಲ, ಪಾಪವಿಲ್ಲದ ಯೇಸು ಕ್ರಿಸ್ತನ ನೀತಿಗೆ, ತಕ್ಕ ಕೃಪೆಯನ್ನೂ ಜೀವವನ್ನೂ ಮಹಿಮೆಯನ್ನೂ ಹೊಂದುತ್ತಾರೆ.

ಮೂ. ಏನು! ನಾವಲ್ಲದೆ ಕ್ರಿಸ್ತನು ತನಗೆ ತಾನೇ ಮಾಡಿದದರಲ್ಲಿ ವಿಶ್ವಾಸವಿಡ ಬೇಕೋ? ಹೀಗೆ ಮಾಡಿದರೆ ನಮ್ಮ ಆಶೆಗಳ

ಕಡಿವಾಣವನ್ನು ಬಿಟ್ಟು ಮನಸ್ಸು ಬಂದ ಹಾಗೆ ಬದುಕುವದಕ್ಕೆ ಅಪ್ಪ
ಣೆಕೊಟ್ಟ ಹಾಗಿರುವದು. ಕ್ರಿಸ್ತನಲ್ಲಿದ್ದ ನೀತಿಗೋಸ್ಕರ ವಿಶ್ವಾಸಿಸು
ವವರಾದ ನಮಗೆ ನೀತಿಯುಂಟಾದರೆ ಹ್ಯಾಗೆ ನಡೆದರೂ ಚಿಂತೆ ಇಲ್ಲ.

ಕ್ರಿ. ನಿಮ್ಮ ಹೆಸರು ಮೂಢಪ್ಪ. ನಿಮಗೆ ಹೆಸರಿನ ಹಾಗೆ
ಗುಣವದೆ ಎಂದು ಈಗ ಹೇಳಿದ ಮಾತಿನಿಂದ ಕಾಣುತ್ತದೆ. ನಮಗೆ
ನೀತಿಯನ್ನುಂಟು ಮಾಡುವ ಕ್ರಿಸ್ತನ ನೀತಿ ಯಾವದೆಂದೂ, ವಿಶ್ವಾ
ಸಿಸಿ ನಿಮ್ಮ ಆತ್ಮವನ್ನು ದೇವರ ಕಠಿಣವಾದ ಕೋಪಕ್ಕೆ ತಪ್ಪಿಸು
ವದು ಹ್ಯಾಗೆಂದೂ, ಕ್ರಿಸ್ತನ ನೀತಿಯಲ್ಲಿಡುವ ವಿಶ್ವಾಸದಿಂದ ಉಂ
ಟಾಗುವ ಸತ್ಯ ಫಲವೇನೆಂದೂ, ಕ್ರಿಸ್ತನಲ್ಲಿರುವ ದೇವರ ಸಾಮ
ವಾಕ್ಯ ಮಾರ್ಗ ಜನಗಳ ಮೇಲೆ ವಿಶ್ವಾಸಿಸುವವರ ಹೃದಯಗ
ಳಲ್ಲಿ ಹುಟ್ಟುವ ಪ್ರೀತಿ ಎಂಥಾದೆಂದೂ, ತಿಳಿಯುವದಿಲ್ಲ.

ಕೋ. ಕ್ರಿಸ್ತಿಯನಯ್ಯಾ, ತಂದೆಯಾದ ದೇವರು ಅವರಿಗೆ
ಯಾವಾಗಾದರೂ ಕ್ರಿಸ್ತನನ್ನು ಪ್ರಕಟ ಮಾಡಿದ್ದಾನೋ? ಎಂದು
ಕೇಳಿರಿ.

ಮೂ. ಏನು! ಪ್ರಕಟಣೆಗಳ ಮಾತು ನಿಮ್ಮಲ್ಲಿ ನಡೆಯುತ್ತ
ದೆಯೋ? ಈ ವಿಷಯದಲ್ಲಿ ನೀವು ಮತ್ತು ನಿಮ್ಮಂಥ ಬೇರೆ ಜನ
ರು ಹೇಳುವ ಮಾತೆಲ್ಲಾ ಪಿತ್ತಭ್ರಮೆ ಎಂದು ನೆನಸುತ್ತೇನೆ.

ಕೋ. ಅದು ಯಾಕೆ? ಕ್ರಿಸ್ತನು ನಮ್ಮ ಸ್ವಭಾವಕ್ಕೆ ಪೂ
ರ್ಣ ಮರೆಯಾಗಿರುವದರಿಂದ ರಕ್ಷಣೆಯನ್ನುಂಟು ಮಾಡುವ ಅವ
ನ ತಿಳುವಿಕೆಯನ್ನು ತಂದೆಯಾದ ದೇವರು ಪ್ರಕಟ ಮಾಡಿದರೆ
ಹೊರ್ತು ಅದು ಯಾವ ಮನುಷ್ಯನಿಗಾದರೂ ಉಂಟಾಗದು.

ಮೂ. ನೀವು ನಂಬುವದು ಹೀಗೆ, ಆದರೆ ನಾನು ನಂಬುವ
ದು ಬೇರೆ. ನಿಮ್ಮ ಮನಸ್ಸಿನಲ್ಲಿರುವ ಅಪರೂಪ ಆಲೋಚನೆಗಳು
ನನಗೆ ಇರದೆ ಇದ್ದಾಗ್ಯೂ ನಿಮ್ಮ ವಿಶ್ವಾಸದ ಹಾಗೆಯೇ ನನ್ನದು
ಒಳ್ಳೇದಾಗಿದೆ.

ಕ್ರಿ. ಇನ್ನು ಒಂದು ಮಾತಿಗೆ ಕಿವಿ ಕೊಡಿರಿ. ನನ್ನ ಜತೆಗಾ
ರನು ಹೇಳಿದ ಮಾತು ಹೀನೈಸುವದಕ್ಕೆ ಕಾರಣವಿಲ್ಲ. ತಂದೆಯು

ಪ್ರಕಟ ಮಾಡಿದರೆ ಹೊರ್ತು ಯಾವನಾದರೂ ಯೇಸು ಕ್ರಿಸ್ತನನ್ನು ಅರಿಯನೆಂಬುವದೂ, ಯೇಸು ಕ್ರಿಸ್ತನನ್ನು ಹಿಡು ಕೊಳ್ಳುವ ವಿಶ್ವಾಸವು ಸಹ ತಂದೆಯಾದ ದೇವರ ಬಲ ಪರಾಕ್ರಮದಿಂದ ಉಂಟಾಗ ಬೇಕೆಂಬುವದೂ ನಿಶ್ಚಯವೇ. ಆದರೆ ವಿಶ್ವಾಸದ ಶಕ್ತಿಯು ನಿಮಗೆ ತಿಳಿಯುವದಿಲ್ಲವೆಂದು ನೆನಸುತ್ತೇನೆ. ಹೀಗಿರುವದರಿಂದ ಎಚ್ಚತ್ತು, ನಿಮ್ಮ ಕೆಟ್ಟ ಸ್ಥಿತಿಯನ್ನು ನೋಡಿ, ಕರ್ತನಾದ ಯೇಸುವನ್ನು ಆಶ್ರಯಿಸಿ ಕೊಳ್ಳಿರಿ. ದೇವರ ನೀತಿಯಾದ ಅವನ ನೀತಿಯಿಂದ ನೀವು ಆಜ್ಞಾನಿರ್ಣಯಕ್ಕೆ ತಪ್ಪಿ ಹೋಗ ಬಹುದು.

ಮೂ. ನೀವು ಬೇಗ ಬೇಗ ನಡೆಯುತ್ತೀರಿ. ನಾನು ಸಂಗಡ ಬರಲಾರೆ. ನೀವು ಮುಂದೆ ಹೋದರೆ ಒಳ್ಳೇದು. ನಾನು ಸ್ವಲ್ಪ ಹಿಂದಿನಿಂದ ಬರುತ್ತೇನೆ.

ಆಗಲು ಕ್ರಿಸ್ತಿಯನು ತನ್ನ ಜತೆಗಾರನಿಗೆ— ಬನ್ನಿ ಪ್ರಿಯ ಕೋರಿಕೆಗೌಡನೇ, ನಾವಿಬ್ಬರೇ ಹೋಗ ಬೇಕಾಯಿತು, ಅಂದ ಮೇಲೆ,

ಭಾರಿಗೆ ಭಾರಿಗೆ ಹೇಳಲು ಬುದ್ಧಿಯು
ಬಾರದೆ ಹೋಯಿತೆ ಯೆಲೆ ಮೂಢ ||
ತೋರಿಸಿದುತ್ತಮ ಜ್ಞಾನವ ಮನಸಿಗೆ
ತಾರದ ನಿನಗಹುದತಿ ಕಷ್ಟ ||

ಎಂಬ ಪದವನ್ನು ಹಾಡಿ, ಅವರು ಬೇಗ ಮುಂದೆ ನಡದು ಹೋದರು. ಮೂಢಪ್ಪನು ಮೆಲ್ಲಗೆ ಹಿಂದಿನಿಂದ ನಡದನು.

ತರುವಾಯ ಕ್ರಿಸ್ತಿಯನು ತನ್ನ ಜತೆಗಾರನಿಗೆ ಅಯ್ಯೋ, ಈ ಮನುಷ್ಯನಿಗೋಸ್ಕರ ನನಗೆ ಕರಕರೆಯಾಗುತ್ತದೆ. ಇವನಿಗೆ ಮಹಾ ಕಷ್ಟ ಬಂದೀತು, ಅಂದನು.

ಕೋ. ಅಯ್ಯೋ, ಅವನಂಥವರು ನಮ್ಮ ಊರಿನಲ್ಲಿ ತುಂಬ ಇದ್ದಾರೆ. ಅವನ ಪ್ರಕಾರವಾದ ಪ್ರಯಾಣಸ್ಥರು ಸಹ ಇದ್ದಾರೆ. ನಮ್ಮ ಊರಿನಲ್ಲಿ ಅಷ್ಟು ಮಂದಿ ಇದ್ದರೆ ಅವನು ಹುಟ್ಟಿದ ಸ್ಥಳದಲ್ಲಿ ಎಷ್ಟು ಮಂದಿ ಇದ್ದಾರು.

ಕ್ರಿ. ಅವರು ನೋಡದ ಹಾಗೆ ದೇವರು ಅವರ ಕಣ್ಣುಗಳನ್ನು ಕುರುಡು ಮಾಡಿದ್ದಾನೆಂಬ ಮಾತಿನ ಹಾಗಾಯಿತು. ಅವನು ಹೋದನಷ್ಟೆ ಅವನಂಥವರ ವಿಷಯದಲ್ಲಿ ನಿಮಗೇನು ಕಾಣುತ್ತದೆ? ಅವರು ಯಾವಾಗಾದರೂ ತಮ್ಮ ಪಾಪಗಳನ್ನು ತಿಳಿದು ತಾವು ಗಂಡಾಂತರದಲ್ಲಿದ್ದೇವೆಂದು ಭಯ ಪಟ್ಟಾರೋ?

ಕೋ. ನೀವು ಹಿರಿಯರಲ್ಲವೋ? ಈ ಪ್ರಶ್ನೆಗೆ ನೀವೇ ಉತ್ತರ ಕೊಡಿರಿ.

ಕ್ರಿ. ಒಂದು ವೇಳೆ ಪಡುವರೆಂದು ನೆನಸುತ್ತೇನೆ. ಆದರೆ ಅಜ್ಞಾನವೇ ಅವರ ಗುಣವಾಗಿರುವದರಿಂದ ಅಂಥ ಮನಸ್ತಾಪದಿಂದ ಅವರಿಗೆ ಒಳ್ಳೇ ಫಲವಾದೀತೆಂದು ತಿಳಿಯದೆ, ಅದನ್ನು ಅಣಗಿಸುವದಕ್ಕೆ ಬಹಳ ಪ್ರಯತ್ನ ಮಾಡಿ ಮತ್ತು ಮತ್ತು ತಮಗೆ ತಾವೇ ಮೆಚ್ಚಿ ಕೊಳ್ಳುತ್ತಾರೆ.

ಕೋ. ನೀವು ಹೇಳಿದ ಹಾಗೆ ಭಯದಿಂದ ಒಳ್ಳೇ ಫಲವಾದೀತೆಂದೂ, ಅವರು ಯಾತ್ರೆಗೆ ಹೊರಟಾಗ ಸನ್ಮಾರ್ಗವನ್ನು ಹಿಡಿಯುವದಕ್ಕೆ ಸಹಾಯವಾದೀತೆಂದೂ, ನಾನು ಸಹ ನಂಬುತ್ತೇನೆ.

ಕ್ರಿ. ಅದು ತಕ್ಕ ಭಯವಾದರೆ ಸಂದೇಹವಿಲ್ಲ. ದೇವರ ಭಯವು ಜ್ಞಾನದ ಆರಂಭವಾಗಿದೆ, ಎಂದು ಬರೆದಿರುವದಿಲ್ಲವೋ?

ಕೋ. ತಕ್ಕ ಭಯಕ್ಕೆ ಲಕ್ಷಣವೇನು?

ಕ್ರಿ. ಅದಕ್ಕೆ ಮೂರು ಲಕ್ಷಣಗಳವೆ.

೧. ಅದು ರಕ್ಷಣೆಗಾಗಿರುವ ಮನಸ್ತಾಪದಿಂದ ಹುಟ್ಟುತ್ತದೆ.

೨. ಅದು ರಕ್ಷಣ್ಯೆಗೋಸ್ಕರ ಕ್ರಿಸ್ತನನ್ನು ಹಿಡು ಕೊಳ್ಳುವದಕ್ಕೆ ಆತ್ಮವನ್ನು ಪ್ರೇರೇಪಿಸುತ್ತದೆ.

೩. ಅದು ದೇವರನ್ನೂ ಅವನ ವಾಕ್ಯವನ್ನೂ ಮಾರ್ಗಗಳನ್ನೂ ಸನ್ಮಾನಿಸುವ ಮನಸ್ಸು ಹುಟ್ಟಿಸುತ್ತದೆ. ದೇವರನ್ನು ಅವಮಾನಿಸುವದಕ್ಕೂ, ಆತ್ಮದ ಸಮಾಧಾನವನ್ನು ಕೆಡಿಸುವದಕ್ಕೂ, ಪರಿಶುದ್ಧಾತ್ಮವನ್ನು ದುಖ್ಖ ಪಡಿಸುವದಕ್ಕೂ, ಶತ್ರುಗಳಿಂದ ದೂಷಣೆಯುಂಟಾಗುವದಕ್ಕೂ, ಆಸ್ಪದವಾಗಿರುವ ಯಾವ ಕಾರ್ಯವನ್ನಾಗಲಿ ಅನುಸರಿಸದ ಹಾಗೆ, ಮನುಷ್ಯನ ಆತ್ಮಕ್ಕೆ ಹೆದರಿಸುತ್ತದೆ.

ಕೋ೯. ಒಳ್ಳೇದು, ಸತ್ಯ ಹೇಳಿದಿರೆಂದು ನಂಬುತ್ತೇನೆ. ಈಗ ಮಾಡಿದ ಭೂಮಿ ಸ್ವಲ್ಪವೇ ಉಳಿಯಿತಲ್ಲವೋ?

ಕ್ರಿ. ಏನು! ಈ ಸಂಭಾಷಣೆ ಸಾಕಾಯಿತೋ?

ಕೋ೯. ಇಲ್ಲ, ಇಲ್ಲ. ನಾವು ಈಗ ಇರುವ ಸ್ಥಳವನ್ನು ತಿಳಿಯ ಬೇಕಾಗಿ ಕೇಳಿದೆನು.

ಕ್ರಿ. ಇನ್ನು ಎರಡು ಘಳಿಗೆಯ ದಾರಿ ಉಂಟು, ಹೆಚ್ಚಿಲ್ಲ. ಆ ಮಾತು ತೀರಿಸುವ. ಜ್ಞಾನವಿಲ್ಲದವರು ಮನಸ್ತಾಪದಿಂದುಂಟಾದ ಭಯದಿಂದ ಒಳ್ಳೇ ಫಲ ಆಗುವದೆಂದು ತಿಳಿಯದೆ ಅದು ಅಣಗಿಸುವದಕ್ಕೆ ಪ್ರಯತ್ನ ಮಾಡುತ್ತಾರೆ.

ಕೋ೯. ಅದನ್ನು ಅಣಗಿಸುವದು ಹ್ಯಾಗೆ?

ಕ್ರಿ. ಮೊದಲು ದೇವರಿಂದುಂಟಾದ ಆ ಭಯಗಳು ಸೈತಾನನಿಂದುಂಟಾದವೆಂದು ನೆನಸಿ, ಅವುಗಳಿಂದ ತಮಗೆ ನಾಶ ಬರುವದೆಂಬ ಆಲೋಚನೆಯಿಂದ ಅವುಗಳನ್ನು ಪರಿಹರಿಸುವದಕ್ಕೆ ನೋಡುತ್ತಾರೆ.

ಆ ಭಯಗಳಿಂದ ತಮ್ಮ ವಿಶ್ವಾಸವು ಕೆಟ್ಟು ಹೋದೀತೆಂದು ನೆನಸಿ, ಪೂರ್ಣ ವಿಶ್ವಾಸವಿಲ್ಲದ ಈ ಬಡ ಮನುಷ್ಯರು ತಮ್ಮ ಹೃದಯಗಳನ್ನು ಕಠಿಣ ಪಡಿಸುತ್ತಾರೆ.

ಭಯ ಪಡ ಬಾರದೆಂದು ತಿಳು ಕೊಂಡು ಅದನ್ನು ಎದುರಿಸಿ ಅಪಭ್ರಷ್ಟವಾದ ಭರವಸದಿಂದಿದ್ದಾರೆ.

ತಮಗೆ ತಾವೇ ಉಂಟು ಮಾಡಿ ಕೊಂಡ ವ್ಯರ್ಥ ನೀತಿಯು ಈ ಭಯಗಳಿಂದ ಹೋದೀತೆಂದು ತಮ್ಮ ಕೈಲಾಪ ಮುಟ್ಟಿಗೂ ಅವುಗಳನ್ನು ಎದುರಿಸುತ್ತಾರೆ.

ಕೋ೯. ಅದರ ಅನುಭವ ನನಗುಂಟು. ಬುದ್ಧಿ ಬರುವದಕ್ಕಿಂತ ಮುಂಚೆ ನಾನೂ ಹಾಗೆ ಮಾಡಿದೆನು.

ಕ್ರಿ. ಅದಿರಲಿ. ನೆರೆಯವನಾದ ಮೂಢಪ್ಪನ ಮಾತು ಸಾಕಾಯಿತು. ಬೇರೆ ಪ್ರಯೋಜನವಾದ ಸಂಭಾಷಣೆ ಮಾಡುವ.

ಕೋ೯. ಬಹು ಸಂತೋಷ. ನೀವೇ ಆರಂಭ ಮಾಡಿರಿ.

ಕ್ರಿ. ಒಳ್ಳೇದು. ಹೆಚ್ಚು ಕಡಮೆ ಹತ್ತು ವರುಷಗಳ ಹಿಂದೆ ನಿಮ್ಮ ದೇಶದಲ್ಲಿ ಭಕ್ತಿಯಿಂದ ವಿಶೇಷವಾಗಿದ್ದ ತತ್ಕಾಲಾಚಾರಿಯ ಗುರುತು ಉಂಟೋ?

ಕೋ. ಗುರುತುಂಟು. ಅವನು ಸತ್ಯಪುರಕ್ಕೆ ಅರ್ಧ ಹರದಾರಿ ದೂರವಾದ ನಿರ್ದಯಗ್ರಾಮದಲ್ಲಿ ವಾಸಿಸಿದನು.

ಕ್ರಿ. ಹೌದು, ಹಿಂತಿರುಗುವವನ ಮನೆಗೂ ಅವನ ಮನೆಗೂ ಒಂದೇ ಮಾಳಿಗೆ. ಅವನು ಒಂದು ಕಾಲದಲ್ಲಿ ಚನ್ನಾಗಿ ಎಚ್ಚರವಾಗಿದ್ದನು. ಅವನಿಗೆ ತನ್ನ ಪಾಪಗಳೂ ಅವುಗಳ ತಕ್ಕ ಫಲವೂ ಸ್ವಲ್ಪ ತಿಳಿದವೆಂದು ನೆನಸುತ್ತೇನೆ.

ಕೋ. ನಾನೂ ಹಾಗೇ ನೆನಸುತ್ತೇನೆ. ಅವನು ಬಹಳ ಸಾರಿ ನನ್ನ ಹತ್ತರ ಬಂದು ಬಹಳವಾಗಿ ಅಳುತ್ತಿದ್ದನು. ನಾನು ಅವನಿಗೋಸ್ಕರ ಬಹಳ ಕನಿಕರ ಪಟ್ಟು ಸತ್ಯ ಮಾರ್ಗದಲ್ಲಿ ಶೇರುವನೆಂಬ ನಿರೀಕ್ಷೆಯಲ್ಲಿದ್ದೆನು. ಆದರೆ, ಕರ್ತನೇ, ಕರ್ತನೇ, ಎಂದು ಕೂಗುವವರೆಲ್ಲರು ಶೇರುವದಿಲ್ಲವೆಂಬುವದು ನಿಶ್ಚಯವಷ್ಟೆ.

ಕ್ರಿ. ನನ್ನನ್ನು ಒಂದು ಕಾಲ ಮಾರ್ಗದಲ್ಲಿ ಕಂಡು, ನೀವು ಹೋಗುವ ಯಾತ್ರೆಗೆ ನಾನೂ ಬರುತ್ತೇನೆಂದು ನನ್ನ ಸಂಗಡ ಹೇಳಿದನು. ಆದರೆ ಅಕಸ್ಮಾತ್ತಾಗಿ ಅವನಿಗೆ ಸ್ವರಕ್ಷಕರಾಯನೆಂಬವನು ಬುದ್ಧಿ ಹೇಳಿದ್ದರಿಂದ ಅವನು ಬರಲಿಲ್ಲ.

ಕೋ. ಅವನ ವಿಷಯ ನಾವು ಮಾತನಾಡುವದರಿಂದ ಅವನಂಥವರು ಅಕಸ್ಮಾತ್ತಾಗಿ ತಿರುಗಿ ಬೀಳುವ ಕಾರಣವನ್ನು ಸ್ವಲ್ಪ ವಿಚಾರಿಸುವ.

ಕ್ರಿ. ಅದು ಪ್ರಯೋಜನವಾದ ವಿಚಾರಣೆ. ನೀವೇ ಆರಂಭ ಮಾಡಿರಿ.

ಕೋ. ಮಾಡುತ್ತೇನೆ. ನಾಲ್ಕು ಕಾರಣಗಳು ನನಗೆ ಕಾಣುತ್ತವೆ.

೧. ಅಂಥ ಮನುಷ್ಯರ ಮನೋಭಾವನೆಗಳು ಎಚ್ಚತ್ತಾಗ್ಯೂ ಅವರ ಮನಸ್ಸುಗಳು ಬೇರೆಯಾಗುವದಿಲ್ಲ. ಆದದರಿಂದ ಶಿಕ್ಷೆಯ

ಭಯ ಹೋದಾಗಲೇ ಅವರ ಭಕ್ತಿಯ ಕಾರಣವು ಹೋಯಿತು. ಅವರು ತಮ್ಮಿಷ್ಟಕ್ಕೆ ತಮ್ಮ ಮುಂಚಿನ ನಡತೆಗೆ ತಿರುಗುತ್ತಾರೆ. ಕೆಟ್ಟ ಪದಾರ್ಥ ತಿಂದ ನಾಯಿಗೆ ಓಕರಿಕೆಯಾದರೆ ಆ ಓಕರಿಕೆ ಇರುವ ತನಕ ಎಲ್ಲಿ ಕಾರುತ್ತದೆ. ಸ್ವಬುದ್ಧಿಯಿಂದಲ್ಲ ಹೊಟ್ಟೆಗೆ ಉಪದ್ರವಾದದರಿಂದಲೇ ಕಾರುತ್ತದೆ. ಆದರೆ ಓಕರಿಕೆ ತೀರಿ ಹೊಟ್ಟೆ ಲಘುವಾದ ಮೇಲೆ ಆ ಕಾರಿದ ಪದಾರ್ಥದ ಆಶೆ ಹೋಗದೆ ತಿರಿಗಿ ಅದನ್ನು ತಿನ್ನುವದು. ನಾಯಿಯು ತನ್ನ ಕಾರಿಕೆಗೆ ತಿರುಗಿತೆಂಬ ಬರಹ ಉಂಟಲ್ಲವೋ? ಈ ಪ್ರಕಾರ ನರಕ ಭಯದಿಂದ ಪರಲೋಕವನ್ನು ಹುಡುಕುವವರಿಗೆ ಆ ನರಕದ ಭಯ ಕಡಮೆಯಾದಾಗಲೇ ಪರಲೋಕದ ಅಪೇಕ್ಷೆಯು ಕಡಮೆಯಾಗುತ್ತದೆ. ಹೀಗಿರುವದರಿಂದ ಪಾಪದ ತಿಳುವಿಕೆಯೂ ಶಿಕ್ಷೆಯ ಭಯವೂ ಹೋದ ಮೇಲೆ ಪರಲೋಕದಲ್ಲಿರುವ ಸೌಖ್ಯದ ಅಪೇಕ್ಷೆ ಸಹಾ ಹೋಗುತ್ತದೆ. ತರುವಾಯ ಅವರು ತಮ್ಮ ಮುಂಚಿನ ನಡತೆಗೆ ತಿರುಗುತ್ತಾರೆ.

೨. ಅವರು ಗುಲಾಮರ ಹಾಗೆ ಬೇರೆ ಮನುಷ್ಯರಿಗೆ ಭಯಪಡುತ್ತಾರೆ. ಮನುಷ್ಯರ ಭಯವು ಉರ್ಲನ್ನುಂಟು ಮಾಡುತ್ತದೆಂಬ ವಾಕ್ಯ ಉಂಟಲ್ಲವೋ? ಹೀಗಿರುವದರಿಂದ ಅವರು ನರಕದ ಭಯವಿದ್ದ ಮಟ್ಟಿಗೂ ಪರಲೋಕದ ಅಪೇಕ್ಷೆ ತೋರಿಸಿದ್ದಾಗ್ಯೂ ಆ ಭಯ ಸ್ವಲ್ಪ ಕಡಿಮೆಯಾದ ಮೇಲೆ ಬೇರೆ ಆಲೋಚನೆ ಮಾಡಿ ಬುದ್ಧಿಯಿಂದಿರ ಬೇಕೆಂದೂ, ತಿಳಿಯದ ಸೌಖ್ಯಕ್ಕೋಸ್ಕರ ಈಗ ಇರುವ ಸಂಪತ್ತನ್ನು ಕಳೆಯ ಬಾರದೆಂದೂ, ಕಷ್ಟ ಹಗೆ ಹಿಂಸೆ ಮೊದಲಾದವುಗಳಲ್ಲಿ ಬೀಳ ಬಾರದೆಂದೂ, ಹೇಳಿ ಕೊಂಡು, ಪ್ರಪಂಚಕ್ಕೆ ತಿರಿಗಿ ಸಮ್ಮತಿಸುತ್ತಾರೆ.

೩. ಭಕ್ತರ ಮೇಲೆ ಬರುವ ನಿಂದೆಯನ್ನು ತಾಳ ಕೂಡದೆ ಗರ್ವಿಷ್ಟರೂ ಅಹಂಕಾರಿಗಳೂ ಆಗಿರುತ್ತಾರೆ. ಭಕ್ತಿಯು ತಿರಸ್ಕರಿಸ ತಕ್ಕ ನೀಚ ಕಾರ್ಯವೆಂದು ಅವರಿಗೆ ಕಾಣುತ್ತದೆ. ಹೀಗಿರುವದರಿಂದ ನರಕಕ್ಕೂ ಬರುವ ಕೋಪಕ್ಕೂ ಪಡುವ ಭಯ ಹೋದ ಮೇಲೆ ತಮ್ಮ ಮುಂಚಿನ ನಡತೆಗೆ ತಿರುಗುತ್ತಾರೆ.

೪. ಪಾಪವೂ ಅದಕ್ಕೆ ತಕ್ಕ ಶಿಕ್ಷೆಯೂ ಇವುಗಳನ್ನು ಆಲೋಚಿಸುವದು ಅವರಿಗೆ ಕಠಿಣವಾಗಿ ತೋರುತ್ತದೆ. ಅವರು ತಮಗೆ ಬರುವ ಕಷ್ಟವನ್ನು ಮುಂಚೆ ತಿಳಿಯ ಮನಸ್ಸಿಲ್ಲದೆ ಇರುತ್ತಾರೆ. ಮುಂಚೆ ಅದನ್ನು ಚನ್ನಾಗಿ ತಿಳಿದರೆ ಒಂದು ವೇಳೆ ಭಕ್ತರ ಪ್ರಕಾರ ಆಶ್ರಯಿಸಿ ಕೊಂಡು ತಪ್ಪಿ ಹೋದಾರು. ಆದರೆ ಪಾಪವೂ ಅದಕ್ಕೆ ತಕ್ಕ ಶಿಕ್ಷೆಯೂ ಎಂಬವುಗಳ ಆಲೋಚನೆ ಸಹ ಅವರಿಗೆ ಅಸಂಹ್ಯವಾಗಿರುವದರಿಂದ ಭಯಂಕರವಾದ ದೇವರ ಕೋಪದ ಯೋಚನೆಯು ಹೋದಾಗಲೇ ಅವರು ಸಂತೋಷವಾಗಿ ತಮ್ಮ ಹೃದಯಗಳನ್ನು ಕಠಿಣ ಪಡಿಸಿ, ಮತ್ತು ಮತ್ತು ಕಠಿಣ ಪಡಿಸುವ ಮಾರ್ಗಗಳಲ್ಲಿ ಸೇರುತ್ತಾರೆ.

ಕ್ರಿ. ನೀವು ಹೇಳಿದ್ದು ಬಹು ಯುಕ್ತವಾಗಿದೆ. ಅವರ ಚಿತ್ತವೂ ಸ್ವಭಾವವೂ ಬೇರೆಯಾಗದೆ ಇರುವದರಿಂದ ಮುಖ್ಯವಾದ ಮೋಸವಾಗುತ್ತದೆ. ಹೀಗಿರುವ ಕಾರಣ ಅವರು ನ್ಯಾಯಾಧಿಪತಿಯ ಮುಂದೆ ನಿಂತ ಕಳ್ಳನ ಹಾಗಿರುತ್ತಾರೆ. ಅವನು ನಡುಗುತ್ತಲೂ ತತ್ತರಿಸುತ್ತಲೂ ಬಹಳ ಪಶ್ಚಾತ್ತಾಪ ಪಡುವ ಹಾಗೆ ಕಾಣುತ್ತಾನೆ. ಆದರೆ ಅವನ ಪಶ್ಚಾತ್ತಾಪದ ಮೂಲವು ಮಾಡಿದ ಕೃತ್ಯದ ಅಸಂಹ್ಯವಲ್ಲ, ನರಕದ ಭಯವಾಗಿದೆ. ಅವನನ್ನು ಬಿಡುಗಡೆ ಮಾಡಿದರೆ ತಿರಿಗಿ ಕಳ್ಳತನ ನಡಿಸುವನು. ಆದಾಗ್ಯೂ ಅವನ ಮನಸ್ಸು ಬೇರೆಯಾಗಿದ್ದರೆ ನಡತೆಯೂ ಬೇರೆಯಾಗಿರುವದು.

ಕೋ. ಅವರು ಹಿಂಜರಿಯುವ ಕಾರಣವನ್ನು ನಾನು ತೋರಿಸಿ ಕೊಟ್ಟೆನಷ್ಟೆ ಈಗ ಅವರು ಹಿಂಜರಿಯುವ ರೀತಿಯನ್ನು ನೀವು ತೋರಿಸಿರಿ.

ಕ್ರಿ. ಆಗಲಿ, ತೋರಿಸುತ್ತೇನೆ.

ದೇವರೂ ಮರಣವೂ ಮುಂದಿನ ನ್ಯಾಯತೀರ್ವಿಕೆಯೂ ನೆನಪಾಗದ ಹಾಗೆ ಅವರು ತಮ್ಮಿಂದಾಗುವ ಮಟ್ಟಿಗೂ ಆಲೋಚನೆಗಳನ್ನು ಬಿಗಿದು ಹಿಡಿಯುತ್ತಾರೆ.

ತರುವಾಯ ಅಂತರಂಗವಾದ ಪ್ರಾರ್ಥನೆಯೂ ಆಶೆಗಳ ನಿಗ್ರ

ಹವೂ ಎಚ್ಚರಿಕೆಯೂ ಪಾಪಕ್ಕೋಸ್ಕರವಾದ ಚಿಂತೆಯೂ ಮೊದಲಾದ ಸದ್ವೃತ್ತಿಗಳನ್ನು ಮೆಲ್ಲ ಮೆಲ್ಲಗೆ ಬಿಟ್ಟು ಬಿಡುತ್ತಾರೆ.

ತರುವಾಯ ಒಳ್ಳೇ ಸತ್ಯ ಕ್ರಿಸ್ತಿಯರ ಸಹವಾಸಕ್ಕೆ ಮೆಚ್ಚದೆ ದೂರ ಹೋಗುತ್ತಾರೆ.

ಅದರ ಮೇಲೆ ವೇದವನ್ನು ಓದುವದೂ, ಪ್ರಸಂಗವನ್ನು ಕೇಳುವದೂ, ಒಳ್ಳೇ ಸಂಭಾಷಣೆ ಮಾಡುವದೂ, ಈ ಮೊದಲಾದ ಒಳ್ಳೇ ಆಚಾರಗಳನ್ನು ಉದಾಸೀನ ಮಾಡುತ್ತಾರೆ.

ಆ ಮೇಲೆ ಒಬ್ಬ ಭಕ್ತನಲ್ಲಿ ತಪ್ಪು ಹಿಡಿದು ಅವನಲ್ಲಿ ಕಾಣುವ ತಪ್ಪುಗಳಿಂದ ಭಕ್ತಿಯನ್ನು ಅಸಡ್ಡೆ ಮಾಡುವದಕ್ಕೆ ನೆವ ಹುಡುಕುತ್ತಾರೆ.

ಅನಂತರ ದುರಾಶೆಯ ದುರ್ನಡತೆಯ ಮಾಂಸಭಾವದ ಮನುಷ್ಯರನ್ನು ಕಲಿತು ಅವರ ಸಹವಾಸ ಮಾಡಲಾರಂಭಿಸುತ್ತಾರೆ.

ತರುವಾಯ ಅಂತರಂಗದಲ್ಲಿ ಅವಾಚ್ಯಗಳನ್ನಾಡುವದಕ್ಕೆ ಆರಂಭ ಮಾಡಿ ಸಜ್ಜನರೆಂದು ಹೆಸರುಂಟಾದವರಲ್ಲಿ ಅಂಥವುಗಳನ್ನು ಕಂಡರೆ ಸಂತೋಷ ಪಟ್ಟು ಅವರು ತೋರಿಸಿದ ಮಾದರಿಯಿಂದ ತಾವು ಸಹ ಅಂಥವುಗಳನ್ನು ನಡಿಸುವದಕ್ಕೆ ಧೈರ್ಯ ಪಡುತ್ತಾರೆ.

ಅದರ ಮೇಲೆ ಬಹಿರಂಗವಾಗಿ ಸಾಧಾರಣವಾದ ಪಾಪಗಳನ್ನು ನಡಿಸಿ, ಚಿಂತೆ ಇಲ್ಲ, ಅನ್ನುತ್ತಾರೆ.

ಕಡೆಗೆ ಕಠಿಣ ಮನಸ್ಸುಳ್ಳವರಾಗಿ ತಮಗಿದ್ದ ಗುಣಗಳನ್ನು ಪ್ರಕಟವಾಗಿ ತೋರಿಸುತ್ತಾರೆ. ಈ ಪ್ರಕಾರ ಅವರು ಅಕ್ರಮವೆಂಬ ಗುಂಡಿಯಲ್ಲಿ ತಿರಿಗಿ ಬಿದ್ದ ಮೇಲೆ ದಯಾಪರನಾದ ದೇವರು ಒಂದು ಆಶ್ಚರ್ಯವನ್ನು ನಡಿಸದಿದ್ದರೆ ತಮ್ಮ ಸ್ವಂತ ಮೋಸಗಳಿಂದ ನಿರಂತರವಾದ ನಾಶನದಲ್ಲಿ ಬೀಳುತ್ತಾರೆ.

---

## 20. The Land of Beulah, the River of Death and the Celestial City.

## ೨೦. ವಿವಾಹದೇಶವು, ಮರಣದ ಹೊಳೆಯು, ಪರಲೋಕಪುರವು.

---

ತರುವಾಯ ನಾನು ಸ್ವಪ್ನದಲ್ಲಿ ಕಂಡದ್ದೇನಂದರೆ, ಪ್ರಯಾ
ಣಸ್ಥರು ಮಾಟದ ಭೂಮಿಯನ್ನು ದಾಟಿ, ರಮ್ಯವಾದ ನಿರ್ಮಲ
ಘಾಳಿಯುಳ್ಳ ವಿವಾಹದೇಶಕ್ಕೆ ಶೇರಿ, (ಯೆಶಾಯ. ೬೨—೪.
೧೨. ಕೀರ್ತನೆ. ೨—೧೦. ೧೧. ೧೨.) ಅವರ ಮಾರ್ಗವು ಆ
ದೇಶವನ್ನು ದಾಟಿ ಹೋಗುವದರಿಂದ ಅದರಲ್ಲಿ ಸ್ವಲ್ಪ ಹೊತ್ತು
ವಿಶ್ರಮಿಸಿ ಕೊಂಡರು. ಅವರು ಅದರಲ್ಲಿ ದಿನ ದಿನಕ್ಕೆ ಒಳ್ಳೇ ಪಕ್ಷಿ
ಗಳ ಸ್ವರವನ್ನು ಕೇಳಿಯೂ, ದಿನ ದಿನಕ್ಕೆ ಮೊಳೆಯುವ ಸೌಂದ
ರ್ಯವಾದ ಹೂವುಗಳನ್ನು ನೋಡಿಯೂ, ಪಾರಿವಾಳಗಳ ಶಬ್ದಗ
ಳನ್ನು ಕೇಳುತ್ತಾ ಇದ್ದರು. ಆ ದೇಶದಲ್ಲಿ ಹಗಲಿರುಳು ಸೂರ್ಯ
ಪ್ರಕಾಶವಿರುವದರಿಂದ ಅದು ಮರಣದ ನೆರಳೆಂಬ ತಗ್ಗಿಗೂ, ನಿರಾ
ಶಾಸುರನ ವಶಕ್ಕೂ ದೂರವಾಗಿತ್ತು. ಆ ದೇಶದವರು ಸಂಶಯ
ದುರ್ಗವು ಕಾಣಲೇ ಇಲ್ಲ. ಅವರು ಹೋಗುವ ಪಟ್ಣವು ಅಲ್ಲಿ
ಕಾಣಿಸಿತು. ನಿವಾಸಿಗಳಲ್ಲಿ ಕೆಲವರನ್ನು ಸಹ ಅವರು ಕಲತರು.
ಯಾಕಂದರೆ ಆ ಶೀಮೆಯು ಪರಲೋಕದ ಪ್ರಾಂತ್ಯದಲ್ಲಿರುವದರಿಂದ
ತೇಜಸ್ಸುಳ್ಳವರು ಅದರಲ್ಲಿ ಸಾಧಾರಣವಾಗಿ ಸಂಚರಿಸುತ್ತಿದ್ದರು.
ಮದಲಿಂಗನು ಮದಲಗಿತ್ತಿಗೋಸ್ಕರ ಸಂತೋಷಿಸುವ ಪ್ರಕಾರವೇ
ದೇವರು ತನ್ನ ಭಕ್ತರಿಗೋಸ್ಕರ ಸಂತೋಷಿಸುತ್ತಾನೆಂಬ ಮಾತು
ಈ ದೇಶದಲ್ಲಿ ಪ್ರತ್ಯಕ್ಷವಾಗಿದೆ. ಅದರಲ್ಲಿ ಅವರಿಗೆ ಧಾನ್ಯವೂ
ದ್ರಾಕ್ಷಾರಸವೂ ಮೊದಲಾದವುಗಳಿಗೆ ಕಡಿಮೆ ಇರಲಿಲ್ಲ. ತಮ್ಮ ಸಂ
ಚಾರವೆಲ್ಲಾದರಲ್ಲಿ ಅವರು ಹುಡುಕಿದವುಗಳ ಸಂಪೂರ್ಣತೆಯು ಅವ
ರಿಗಿತ್ತು. ಅಲ್ಲಿ ಅವರು—ಇಗೋ, ನಿನ್ನ ರಕ್ಷಣೆಯು ಬರುತ್ತದೆ!

ಇಗೋ, ಅವನ ಬಹುಮಾನವು ಅವನ ಸಂಗಡ ಅದೆ! ಎಂದು ಚಿ
ಯೋನಿನ ಮಗಳಿಗೆ ಹೇಳಿರಿ, ಎಂಬದಾಗಿ ಪಟ್ಣದೊಳಗೆ ಘಟ್ಟಿ
ಯಾಗಿ ಕೂಗುವವರ ಶಬ್ದಗಳನ್ನು ಕೇಳಿದರು. ಅಲ್ಲಿ ದೇಶದ
ನಿವಾಸಿಗಳೆಲ್ಲರು ಪ್ರಯಾಣಸ್ಥರಿಗೆ—ಪರಿಶುದ್ಧರೂ, ಕರ್ತನು ರಕ್ಷಿ
ಸಿದವರೂ, ಆದುಕೊಂಡವರೂ, ಎಂಬ ಹೆಸರುಗಳನ್ನು ಇಟ್ಟರು.

ಆ ದೇಶದಲ್ಲಿ ಅವರು ಸಂಚರಿಸುವಾಗ ಮುಂಚೆ ಎಲ್ಲಿಯೂ
ಉಂಟಾಗದ ಮಹಾ ಸಂತೋಷ ಹುಟ್ಟಿತು. ಪಟ್ಣವು ಹತ್ತರ
ಹತ್ತರ ಬರುವವರಿಗೆ ಹೆಚ್ಚು ಹೆಚ್ಚಾಗಿ ಕಾಣಿಸಿತು. ಅದು ಮುತ್ತು
ರತ್ನಗಳಿಂದ ಕಟ್ಟಲ್ಪಟ್ಟಿತ್ತು. ಅದರ ಬೀದಿಗಳಲ್ಲಿ ಭಂಗಾರದ
ಹಾಸುಕಲ್ಲುಗಳಿದ್ದವು. ಆ ಪಟ್ಣದ ಮಹಿಮೆಯನ್ನೂ ಅದರ ಮೇ
ಲೆ ಬೀಳುವ ಸೂರ್ಯಕಿರಣಗಳಿಂದುಂಟಾಗುವ ಕಾಂತಿಯನ್ನೂ
ನೋಡಿ, ಕ್ರಿಸ್ತಿಯನು ಅತ್ಯಾಶೆಯಿಂದ ಸ್ಥಿರ ತಪ್ಪಿದವನಾದನು.
ಕೋರಿಕೆಗಾಡನಿಗೆ ಸಹ ಒಂದೆರಡು ಸಾರಿ ಹಾಗೆ ಆಯಿತು. ಈ
ಪ್ರಕಾರ ಅವರು ಸ್ವಲ್ಪ ಹೊತ್ತು ಬಿದ್ದಿದ್ದು ಮನಸ್ಸಿನ ಅಭಿಲಾಷೆ
ಯಿಂದ—ನೀವು ನಮ್ಮ ಪ್ರಿಯನನ್ನು ನೋಡಿದರೆ ಪ್ರೀತಿಯಿಂದ
ನಮಗೆ ಸ್ಥಿರ ತಪ್ಪಿತು, ಎಂದು ಅವನಿಗೆ ಹೇಳಿರಿ, ಎಂಬದಾಗಿ ಕೂ
ಗಿದರು.

ಸ್ವಲ್ಪ ತ್ರಾಣ ಬಂದ ಮೇಲೆಯೂ, ಮನಸ್ಸಿನ ಅಭಿಲಾಷೆ
ಸ್ವಲ್ಪ ಶಾಂತವಾದ ಮೇಲೆಯೂ, ಅವರು ಮಾರ್ಗ ಹಿಡಿದು ಪಟ್ಣ
ದ ಹತ್ತರ ಹತ್ತರ ಬಂದರು. ಅಲ್ಲಿ ರಾಜಮಾರ್ಗದ ಕಡೆಯಲ್ಲಿ
ದ್ರಾಕ್ಷಿತೋಟಗಳೂ ವನಾದಿಗಳೂ ಇದ್ದವು. ಅವರು ಹತ್ತರ
ಬಂದಾಗ ಅಗೋ ತೋಟಗಾರನು ಮಾರ್ಗದಲ್ಲಿ ನಿಂತಿದ್ದನು.
ಪ್ರಯಾಣಸ್ಥರು ಅವನಿಗೆ—ಆ ಒಳ್ಳೇ ತೋಟಗಳು ಯಾರವು?
ಅನಲು, ಅವನು—ಅವು ಅರಸನ ತೋಟಗಳಾಗಿ ಅವನ ಸಂ
ತೋಷಕ್ಕೋಸ್ಕರವೂ, ಪ್ರಯಾಣಸ್ಥರ ಆದರಣೆಗೋಸ್ಕರವೂ,
ನೆಡಲ್ಪಟ್ಟವೆ, ಎಂದು ಹೇಳಿ, ಅವರನ್ನು ದ್ರಾಕ್ಷಿತೋಟಗಳಿಗೆ ಕರ
ಕೊಂಡು ಹೋಗಿ ತೃಪ್ತಿ ಪಡ ಬೇಕೆಂದು ಅಪ್ಪಣೆ ಕೊಟ್ಟು,

ಅರಸನು ಸಂಚರಿಸುವ ವನಗಳನ್ನೂ ದಾರಿಗಳನ್ನೂ ತೋರಿಸಿದನು. ಅಲ್ಲಿ ಅವರು ಇದ್ದು ಮಲಗಿದರು. ನಿದ್ರೆಯಲ್ಲಿ ಅವರು ಬಹಳ ಮಾತಾಡುವದನ್ನು ನಾನು ಸ್ವಪ್ನದಲ್ಲಿ ಕಂಡೆನು. ಹಿಂದಿನ ಪ್ರಯಾಣದಲ್ಲಿ ಅವರು ಅಷ್ಟು ಮಾತಾಡಲಿಲ್ಲ. ಅದಕ್ಕೋಸ್ಕರ ನಾನು ಆಲೋಚನೆ ಮಾಡುವಾಗ ಆ ತೋಟಗಾರನು ನನಗೆ ಈ ಕಾರ್ಯಕ್ಕೋಸ್ಕರ ನೀನು ಆಶ್ಚರ್ಯ ಪಡುವದು ಯಾಕೆ? ಈ ದ್ರಾಕ್ಷಿ ತೋಟಗಳ ಹಣ್ಣುಗಳು ಬಹಳ ರುಚಿಕರ ಸ್ವಭಾವದಿಂದಿದ್ದು ಮಲಗಿದವರ ತುಟಿಗಳು ಮಾತಾಡುವ ಹಾಗೆ ಮಾಡುತ್ತವೆಂದು ಹೇಳಿದನು.

ಅವರು ಎಚ್ಚರವಾದ ಮೇಲೆ ಪಟ್ಟಣಕ್ಕೆ ಏರಿ ಹೋಗ ಬೇಕೆಂದು ಸಿದ್ಧ ಮಾಡಿ ಕೊಳ್ಳುವದನ್ನು ನೋಡಿದೆನು. ಆದರೆ ಪೂರ್ಣ ಭಂಗಾರಮಯವಾಗಿರುವ ಆ ಪಟ್ಟಣದ ಮೇಲೆ ಬಿದ್ದ ಕಿರಣಗಳಿಂದ ಉಂಟಾದ ಪ್ರತಿಕಾಂತಿಯು ಅತಿ ಮಹಿಮೆಯಾಗಿರುವ ಕಾರಣ ಅವರು ಬರಿ ಕಣ್ಣಿನಿಂದ ಅದನ್ನು ನೋಡ ಕೂಡದೆ ಅದಕ್ಕೋಸ್ಕರ ಮಾಡಿದ ಕನ್ನಡಿಯಿಂದ ನೋಡಿದರು. ಅವರು ಅಲ್ಲಿಂದ ಹೊರಟು ಚಿನ್ನದ ಕಾಂತಿಯುಳ್ಳ ವಸ್ತ್ರಗಳು ಧರಿಸಿ ಕೊಂಡ ಶುಭ್ರ ಮುಖ ಉಳ್ಳ ಇಬ್ಬರಿಗೆ ಕಲತರು.

ಅವರು ಪ್ರಯಾಣಸ್ಥರಿಗೆ—ಎಲ್ಲಿಂದ ಬಂದಿರೆಂದು ಕೇಳಿದಾಗ, ಇವರು ಹೇಳಿದರು. ಎಲ್ಲಿ ಇಳು ಕೊಂಡಿರಿ? ಮಾರ್ಗದಲ್ಲಿ ನಿಮಗೆ ದೊರಕಿದ ಕಷ್ಟಗಳೂ, ಗಂಡಾಂತರಗಳೂ, ಸುಖಗಳೂ, ಸಂತೋಷಗಳೂ, ಯಾವವು? ಎಂಬ ಪ್ರಶ್ನೆಗೆ ಸಹ ಇವರು ಯಥಾರ್ಥದ ಪ್ರಕಾರ ಉತ್ತರ ಕೊಟ್ಟ ತರುವಾಯ, ಆ ಇಬ್ಬರು — ನೀವು ಇನ್ನು ಎರಡು ಆತಂಕಗಳನ್ನು ದಾಟಿದ ಮೇಲೆ ಪಟ್ಟಣದೊಳಗೆ ಸೇರುವಿರಿ ಎಂದು ಹೇಳಿದರು.

ತರುವಾಯ ಕ್ರಿಸ್ತಿಯನೂ ಅವನ ಜತೆಗಾರನೂ ಆ ಮನುಷ್ಯರಿಗೆ ನಮ್ಮ ಸಂಗಡ ಬರ ಬೇಕೆಂದು ಬೇಡಿ ಕೊಂಡಾಗ, ಅವರು—ನೀವು ವಿಶ್ವಾಸಿಸಿದರೆ ಸಂಗಡ ಬರುತ್ತೇವೆ, ಅಂದರು. ಈ

ಪ್ರಕಾರ ಅವರು ಪಟ್ಣದ ಬಾಗಲು ಕಾಣುವ ಪರ್ಯಂತರ ಸಂಗಡ ಹೋದದ್ದನ್ನು ನೋಡಿದೆನು.

ಆ ಮೇಲೆ ಅವರಿಗೂ ಬಾಗಲಿಗೂ ನಡುವೆ ಒಂದು ನದಿಯು ಇರುವದನ್ನು ನಾನು ಕಂಡೆನು. ಆ ನದಿಯು ಬಹಳ ಆಳವಾಗಿತ್ತು. ಮತ್ತು ದಾಟುವದಕ್ಕೆ ಸೇತುವೆ ಇರಲಿಲ್ಲ. ಆ ನದಿಯನ್ನು ನೋಡಿ ಪ್ರಯಾಣಸ್ಥರು ಬಹಳ ಹೆದರಲು, ಅವರ ಸಂಗಡ ಬಂದ ಮನುಷ್ಯರು—ಅವಶ್ಯವಾಗಿ ಇದನ್ನು ದಾಟ ಬೇಕು, ದಾಟದಿದ್ದರೆ ಬಾಗಲಿಗೆ ಸೇರಲಾರಿರಿ, ಅಂದರು.

ತರುವಾಯ ಪ್ರಯಾಣಸ್ಥರು ಬಾಗಲಿಗೆ ಹೋಗುವ ಬೇರೊಂದು ಮಾರ್ಗವಿಲ್ಲವೋ? ಎಂದು ವಿಚಾರಿಸಿದಾಗ, ಅವರು—ಮಾರ್ಗ ಉಂಟು, ಹೌದು; ಆದರೆ ಎನೋಕನೂ ಎಲೀಯನೂ ಎಂಬ ಇಬ್ಬರೇ ಹೊರ್ತು ಲೋಕಸೃಷ್ಟಿಯಾರಭ್ಯ ಬೇರೆ ಯಾರೂ ಅದರಿಂದ ಹೋಗುವ ಅಪ್ಪಣೆ ಹೊಂದಲಿಲ್ಲ. ಮತ್ತು ಕಡೇ ತುತೂರಿಯ ಧ್ವನಿಯು ಆಗುವ ಪರ್ಯಂತರಕ್ಕೂ ಯಾರೂ ಹೊಂದರು ಎಂದು ಹೇಳಿದರು. ಅದಕ್ಕೆ ಪ್ರಯಾಣಸ್ಥರು, ಮುಖ್ಯವಾಗಿ ಕ್ರಿಸ್ತಿಯನು ಮನಗುಂದಿ ಈಚೆ ಆಚೆ ನೋಡಿ ತಪ್ಪಿ ಹೋಗುವ ಉಪಾಯ ಕಾಣದೆ ಆ ನೀರಿನ ಆಳವು ಒಂದೇ ಪ್ರಕಾರವದೆಯೋ? ಎಂದು ಆ ಮನುಷ್ಯರನ್ನು ಕೇಳಿದಾಗ, ಅವರು—ಇಲ್ಲ. ಆದಾಗ್ಯೂ ಈ ವಿಷಯದಲ್ಲಿ ನಿಮಗೆ ಸಹಾಯ ಮಾಡಲಾರೆವು. ಅದರ ಆಳವಾಗಲಿ ಸ್ವಲ್ಪವಾಗಲಿ ನೀವು ಅರಸನ ಮೇಲೆ ಇಟ್ಟ ವಿಶ್ವಾಸದ ಪ್ರಕಾರ ನಿಮಗೆ ತೋರುವದು, ಅಂದರು.

ಆಗಲವರು ನೀರಿನಲ್ಲಿ ಇಳಿದಾಗ ಕ್ರಿಸ್ತಿಯನು ಮುಣುಗಲಾರಂಭಿಸಿ, ತನ್ನ ಸ್ನೇಹಿತನಾದ ಕೋರಿಕೆಗೌಡನಿಗೆ—ನಾನು ಆಳವಾದ ನೀರಿನಲ್ಲಿ ಮುಣುಗುತ್ತೇನೆ; ತೆರೆಗಳು ನನ್ನ ತಲೆಯ ಮೇಲೆ ಬರುತ್ತವೆ; ತರಂಗಗಳು ನನ್ನ ಮೇಲೆ ಬರುತ್ತವೆ, ಎಂದು ಕೂಗಿ ಹೇಳಿದನು.

ಆಗಲು ಕೋರಿಕೆಗೌಡನು—ಸಹೋದರನೇ, ಧೈರ್ಯವಾಗಿರ ಬೇಕು. ಎಲ್ಲಾ ಒಳ್ಳೇದು, ನೆಲ ಕಂಡೆನು, ಅನ್ನಲು, ಕ್ರಿಸ್ತಿ

ಯೆನು—ಆಹಾ, ಸ್ನೇಹಿತನೇ, ಮರಣದ ವೇದನೆಯು ನನ್ನನ್ನು ಸುತ್ತಿ ಕೊಂಡಿದೆ. ಹಾಲೂ ಜೇನೂ ಹರಿಯುವ ದೇಶವನ್ನು ನಾನು ನೋಡಲಾರೆ, ಎಂದು ಹೇಳಿದ ಕೂಡಲೇ, ಕ್ರಿಸ್ತಿಯನ ಮೇಲೆ ಮಹಾ ಅಂಧಕಾರವೂ ಭಯಭ್ರಾಂತಿಯೂ ಬಿದ್ದದರಿಂದ ಅವನು ಏನೂ ಕಾಣದೆ, ಮೂರ್ಛೆಗೆ ಸಮಿಾಪಿಸಿ, ತನ್ನ ಪ್ರಯಾಣದಲ್ಲಿ ಶಿಕ್ಕಿದ ಬಳ್ಳೇ ಆದರಣೆಗಳಲ್ಲಿ ಒಂದನ್ನಾದರೂ ಚನ್ನಾಗಿ ನೆನಪು ಮಾಡಲೂ, ಅವುಗಳನ್ನು ಕುರಿತು ತಕ್ಕ ಹಾಗೆ ಮಾತಾಡಲೂ, ಕೂಡದೆ ಹೋದನು. ಅವನು ಹೇಳುವ ಎಲ್ಲಾದರಲ್ಲಿ, ಅವನಿಗಿದ್ದ ಮನೋವ್ಯಾಕುಲವೂ, ಈ ನದಿಯಲ್ಲಿ ಸಾಯುತ್ತೇನೆ, ಆ ಬಾಗಲಿಗೆ ಶೇರಲಾರೆನು ಎಂಬ ಭಯಗಳೂ, ಮಾತ್ರ ಪ್ರಕಟವಾದವು. ಅವನು ಪ್ರಯಾಣಸ್ಥನಾಗುವದಕ್ಕಿಂತ ಮುಂಚೆಯೂ, ಆದ ಮೇಲೆಯೂ, ಮಾಡಿದ ಪಾಪಗಳ ನೆನಪಿನಿಂದ ಸಹ ಅವನಿಗೆ ಬಹಳ ಉಪದ್ರವಾಯಿತೆಂದು ಹತ್ತಿರ ನಿಂತವರು ತಿಳು ಕೊಂಡರು. ಭೂತ ಪ್ರೇತಗಳು ಕಾಣ ಬಂದದರಿಂದ ಉಪದ್ರವಾಯಿತೆಂದು ಅವನು ತಿರಿಗಿ ತಿರಿಗಿ ಹೇಳಿದ ಮಾತುಗಳಿಂದ ಗ್ರಹಿಸಿದರು. ಹೀಗಿರುವದರಿಂದ ಕೋರಿಕೆಗಾಡನು ತನ್ನ ಸಹೋದರನ ತಲೆಯನ್ನು ನೀರಿನೊಳಗಿಂದ ಎತ್ತುವದಕ್ಕೆ ಬಹಳ ಕಷ್ಟ ಪಟ್ಟನು. ಕೆಲವು ಸಾರಿ ಅವನು ಪೂರಾ ಮುಣುಗಿರುವನು. ಕೆಲವು ಸಾರಿ ಅರೆ ಪ್ರಾಣದಿಂದ ತೇಲುವನು. ಹೀಗಿರಲಾಗಿ ಕೋರಿಕೆಗಾಡನು—ಸಹೋದರನೇ, ಬಾಗಲನ್ನೂ ನಮ್ಮನ್ನು ಬಳಗೊಳ್ಳುವದಕ್ಕೆ ಅದರ ಹತ್ತಿರ ನಿಂತ ಜನರನ್ನೂ ನೋಡುತ್ತೇನೆಂದು ಹೇಳಿ ಅವನನ್ನು ಆದರಿಸುವಾಗ, ಕ್ರಿಸ್ತಿಯನು—ನಿಮ್ಮಗೋಸ್ಕರವೇ ಕಾದು ಕೊಂಡಿದ್ಧಾರೆ. ನಿಮ್ಮ ಗುರುತು ತಿಳಿದಂದಿನಿಂದ ನಿಮ್ಮಲ್ಲಿ ಕೋರಿಕೆ ಇತ್ತು, ಅಂದನು. ಕೋರಿಕೆಗಾಡನು—ನಿಮ್ಮಲ್ಲಿಯೂ ಕೋರಿಕೆ ಇತ್ತು, ಅನ್ನಲಾಗಿ, ಕ್ರಿಸ್ತಿಯನು—ಆಹಾ, ಸಹೋದರನೇ, ನನ್ನಲ್ಲಿ ನೀತಿ ಇದ್ದರೆ, ಅವನು ಈಗಲೇ ಎದ್ದು ನನಗೆ ಸಹಾಯ ಮಾಡುವನು. ನನ್ನ ಪಾಪಗಳಿಗೋಸ್ಕರ ಅವನು ನನ್ನನ್ನು ಉರ್ಲಿನಲ್ಲಿ ಶಿಕ್ಕಿಸಿ ಬಿಟ್ಟಿದ್ಧಾನೆ, ಅಂದನು. ತರು

ವಾಯ ಕೋರಿಕೆಗೌಡನು ಹೇಳಿದ್ದೇನಂದರೆ, ಸಹೋದರನೇ, ದು ಷ್ಟರ ಮರಣದಲ್ಲಿ ಉರ್ಲುಗಳಿಲ್ಲ. ಅವರ ಪ್ರಾಣವು ಘಟ್ಟಿಯಾಗಿದೆ. ಬೇರೆ ಮನುಷ್ಯರ ಹಾಗೆ ಅವರಿಗೆ ಉಪದ್ರವೂ ಆಗದು. ಬೇರೆ ಮನುಷ್ಯರ ಹಾಗೆ ಪೀಡೆಯೂ ಆಗದು. ದೇವರು ನಿಮ್ಮನ್ನು ಬಿಟ್ಟು ಬಿಟ್ಟನೆಂಬುವದಕ್ಕೆ ಈ ನೀರಿನೊಳಗೆ ನಿಮಗೆ ಬಂದ ಉಪದ್ರ ಕಷ್ಟಗಳು ಗುರುತಾಗಿವೆ. ಅವನು ಮುಂಚೆ ನಿಮಗೆ ಮಾಡಿದ ಉಪಕಾರಗಳನ್ನು ನೆನಸುವಿರೋ? ಬಂದ ಕಷ್ಟದಲ್ಲಿ ಅವನನ್ನು ಆಶ್ರಯಿಸುವಿರೋ? ಎಂಬ ಪರೀಕ್ಷೆಗೋಸ್ಕರ ಇವು ಉಂಟಾದವು.

ತರುವಾಯ ಕ್ರಿಸ್ತಿಯನು ಸ್ವಲ್ಪ ಹೊತ್ತು ಆಲೋಚನೆ ಮಾಡಿದ ಪ್ರಕಾರ ಕಂಡೆನು. ಆಗ ಕೋರಿಕೆಗೌಡನು— ಸಂತೋಷವಾಗಿರಿ, ಯೇಸು ಕ್ರಿಸ್ತನು ನಿಮಗೆ ಸ್ವಸ್ಥ ಮಾಡುತ್ತಾನೆ, ಎಂಬ ಮಾತುಗಳನ್ನು ಹೇಳಿದಾಗ, ಕ್ರಿಸ್ತಿಯನು ಘಟ್ಟಿಯಾದ ಶಬ್ದದಿಂದ— ಓಹೋ ತಿರಿಗಿ ಅವನನ್ನು ಕಂಡೆನು. ನೀನು ನೀರನ್ನು ದಾಟಿದರೆ ನಿನ್ನ ಸಂಗಡಲಿರುವೆನು. ನದಿಗಳನ್ನು ದಾಟಿದರೆ ಅವು ನಿನ್ನನ್ನು ಮುಣುಗಿಸವು, ಎಂದು ನನಗೆ ಹೇಳಿದ್ದಾನೆ, ಅಂದನು. ಆ ಮೇಲೆ ಅವರಿಬ್ಬರು ಧೈರ್ಯ ಪಟ್ಟರು. ಅವರು ದಾಟಿ ಹೋಗುವ ಪರ್ಯಂತರ ಶತ್ರು ಸುಮ್ಮನಿದ್ದನು. ಕೂಡಲೇ ಕ್ರಿಸ್ತಿಯನು ನೆಲವನ್ನು ಕಂಡನು. ಮಿಕ್ಕಾದ ನದಿಯಲ್ಲಿ ನೀರು ಕಡಮೆಯಾಗಿದ್ದದರಿಂದ ಅವರು ಸುಲಭವಾಗಿ ದಾಟಿದರು. ನದಿಯ ಆಚೆ ಧಡದಲ್ಲಿ ಅವರು ತಮ್ಮಗೋಸ್ಕರ ಕಾದು ಕೊಂಡಿದ್ದ ತೇಜಸ್ಸುಳ್ಳವರಾದ ಆ ಇಬ್ಬರನ್ನು ತಿರಿಗಿ ಕಂಡರು. ಪ್ರಯಾಣಸ್ಥರು ಧಡ ಶೇರಿದಾಗಲೇ ಅವರು ಬಾಧ್ಯವಾಗಿ ರಕ್ಷಣ್ಯೆಯನ್ನು ಹೊಂದ ತಕ್ಕವರಿಗೆ ಸೇವಿಸುವದಕ್ಕೆ ನಾವು ಕಳುಹಿಸಲ್ಪಟ್ಟ ಊಳಿಗದ ಆತ್ಮಗಳಾಗಿದ್ದೇವೆಂದು ಹೇಳಿ, ಇವರಿಗೆ ವಂದಿಸಿದರು. ಹಾಗೇ ಅವರು ಬಾಗಲ ಸಮೀಪಕ್ಕೆ ಹೋದರು.

ಆ ಪಟ್ಟಣವು ದೊಡ್ಡ ಪರ್ವತದ ಮೇಲೆ ಇದ್ದಾಗ್ಯೂ ಆ ಇಬ್ಬರೂ ಅವರಿಗೆ ಕೈಕೊಟ್ಟು ಎತ್ತಿದದರಿಂದಲೂ, ಅವರು ತಮ್ಮ ಮರ್ತ್ಯ ಶರೀರವೆಂಬ ವಸ್ತ್ರಗಳನ್ನು ಆ ನದಿಯಲ್ಲಿ ಬಿಟ್ಟು ಬಂದದರಿಂದಲೂ,

ಆ ಪಟ್ಣದ ಅಸ್ತಿವಾರವು ಮೇಘಗಳಿಗಿಂತ ಎತ್ತರವಾಗಿದ್ದಾಗ್ಯೂ
ಅತಿ ಚಮತ್ಕಾರದಿಂದಲೂ ತ್ವರೆಯಿಂದಲೂ ಮೇಲೆ ಹೋದರು.
ಸುರಕ್ಷಿತವಾಗಿ ನದಿಯನ್ನು ದಾಟಿದದರಿಂದಲೂ, ಮಹಿಮೆಯುಳ್ಳ ಜ
ತೆಗಾರರ ಸಹವಾಸವಿರುವದರಿಂದಲೂ, ಸಂತೋಷ ಪಟ್ಟು, ಸುಸಂಭಾ
ಷಣೆಗಳನ್ನು ಮಾಡಿ ಆಕಾಶಮಾರ್ಗದಲ್ಲಿ ನಡೆದು ಹೋದರು.

ಆ ಪಟ್ಣದ ಮಹಿಮೆಯನ್ನು ಕುರಿತು ಆ ತೇಜಸ್ಸುಳ್ಳವರ ಸಂ
ಗಡ ಸಂಭಾಷಿಸುತ್ತಿರಲಾಗಿ, ಅವರು— ಅದರ ಸೌಂದರ್ಯವನ್ನೂ
ಮಹಿಮೆಯನ್ನೂ ಪೂರ್ಣವಾಗಿ ವಿವರಿಸ ಕೂಡದು. ಮತ್ತು ಅಲ್ಲಿ
ಚಿಯೋನ್ ಪರ್ವತವೂ, ಪರಲೋಕದ ಎರೂಸಲೇಮೂ, ದೂತರ
ಲೆಖ್ಖವಿಲ್ಲದ ಕೂಟವೂ, ಸಂಪೂರ್ಣರಾದ ನೀತಿವಂತರ ಆತ್ಮಗಳೂ,
ಇರುತ್ತವೆ. ನೀವು ಈಗ ದೇವರ ಪರದೈಸಕ್ಕೆ ಹೋಗುತ್ತೀರಿ. ಅದ
ರಲ್ಲಿ ಜೀವದ ವೃಕ್ಷವನ್ನು ನೋಡಿ, ಬಾಡದೆ ಇರುವ ಅದರ ಫಲ
ಗಳನ್ನು ತಿನ್ನುವಿರಿ. ಅಲ್ಲಿ ಸೇರಿದ ಮೇಲೆ ಶುಭ್ರವಸ್ತ್ರಗಳು ನಿಮಗೆ
ಶಿಕ್ಕುವವು. ಅಲ್ಲಿ ನೀವು ಎಂದೆಂದೂ ಅರಸನ ಸಂಗಡ ಸಂಭಾ
ಷಣೆ ಮಾಡಿ, ಸಂಚರಿಸುವಿರಿ. ಆ ಕೆಳಗಿನ ಲೋಕದಲ್ಲಿ ನೀವು
ಕಂಡ ದುಖ್ಖ ರೋಗ ಮರಣ ಕಷ್ಟ ಮೊದಲಾದವುಗಳನ್ನು ಇನ್ನೂ
ಕಾಣಲಾರಿರಿ. ಯಾಕಂದರೆ, ಮುಂಚಿನವುಗಳು ಗತಿಸಿ ಹೋದವು.
ನೀವು ಎಲ್ಲಾ ಕೇಡಿಗೆ ತಪ್ಪಿ ವೈಯ್ಯಲ್ಪಟ್ಟ ನೀತಿವಂತರಾದ ಅಬ್ರ
ಹಾಮ್ ಇಸಾಕ್ ಯಾಕೋಬ್ ಮೊದಲಾದವರ ಕೂಟಕ್ಕೂ, ಪ್ರವಾ
ದಿಗಳ ಕೂಟಕ್ಕೂ, ಹೋಗುತ್ತೀರಿ, ಅಂದರು.

ಆಗಲು ಪ್ರಯಾಣಸ್ಥರು— ಅಲ್ಲಿ ನಾವು ಏನು ಮಾಡ ಬೇ
ಕೆಂದು ಕೇಳಲು, ತೇಜಸ್ಸುಳ್ಳವರು ಅಲ್ಲಿ ನಿಮ್ಮ ಎಲ್ಲಾ ಶ್ರಮೆಗೋ
ಸ್ಕರ ಆದರಣೆಯೂ, ನಿಮ್ಮ ಎಲ್ಲಾ ಚಿಂತೆಗೋಸ್ಕರ ಸಂತೋಷ
ವೂ, ಶಿಕ್ಕುವವು. ನೀವು ಬಿತ್ತಿದ ಪೈರು ಕೊಯ್ಯುವಿರಿ. ಮಾರ್ಗ
ದಲ್ಲಿ ನೀವು ಅರಸನಿಗೋಸ್ಕರ ಮಾಡಿದ ಪ್ರಾರ್ಥನೆಗಳಿಗೂ, ಸುರಿ
ಸಿದ ಕಣ್ಣೀರಿಗೂ, ಪಟ್ಟ ಶ್ರಮೆಗಳಿಗೂ, ತಕ್ಕ ಫಲವು ನಿಮಗೆ ಶಿಕ್ಕು
ವದು. ಅಲ್ಲಿ ನೀವು ಚಿನ್ನದ ಕಿರೀಟಗಳನ್ನು ಧರಿಸುವಿರಿ. ಪರಿಶು

ದ್ಧನನ್ನು ಪ್ರತ್ಯಕ್ಷವಾಗಿ ನೋಡಿ, ನಿರಂತರವಾಗಿ ಅದರಲ್ಲಿ ಸಂತೋಷಿಸುವಿರಿ. ಕೆಳಗಿನ ಲೋಕದಲ್ಲಿ ನಿಮ್ಮ ಮಾಂಸದ ಬಲಹೀನತ್ವಕ್ಕೋಸ್ಕರ ಬಹು ಕಷ್ಟ ಪಟ್ಟು ಯಾವನನ್ನು ಸೇವಿಸಿದಿರೋ ಅವನನ್ನು ಎಂದೆಂದಿಗೂ ಘನವಾದ ಸ್ತೋತ್ರಗಳ ಧ್ವನಿ ಮಾಡುತ್ತಾ ಸೇವಿಸುವಿರಿ. ಅಲ್ಲಿ ಪರಾಕ್ರಮ ಉಳ್ಳವನನ್ನು ನೋಡುವದರಿಂದ ನಿಮ್ಮ ಕಣ್ಣುಗಳಿಗೂ, ಅವನ ರಮ್ಯವಾದ ಶಬ್ದವನ್ನು ಕೇಳುವದರಿಂದ ನಿಮ್ಮ ಕಿವಿಗಳಿಗೂ, ಸಂತೋಷವಾಗುವದು. ನಿಮಗಿಂತ ಮುಂಚೆ ಅಲ್ಲಿ ಸೇರಿದ ನಿಮ್ಮ ಸ್ನೇಹಿತರನ್ನು ಕಂಡು ಸಂತೋಷಿಸುವಿರಿ. ಇನ್ನು ಮೇಲೆ ಪರಿಶುದ್ಧ ಸ್ಥಳಗಳಲ್ಲಿ ಸೇರುವವರೆಲ್ಲರನ್ನು ಸಂತೋಷದಿಂದ ಅಂಗೀಕರಿಸುವಿರಿ. ಅಲ್ಲಿ ಘನವೂ ಮಹಿಮೆಯೂ ಆದ ವಸ್ತ್ರಗಳನ್ನು ಧರಿಸುವಿರಿ. ಮಹಿಮೆಯ ಅರಸನ ಸೈನ್ಯಕ್ಕೆ ತಕ್ಕ ಸಾಹಿತ್ಯವು ನಿಮಗುಂಟಾಗುವದು. ಅವನು ಮೇಘಗಳ ಮೇಲೆಯೂ, ಗಾಳಿಯ ರೆಕ್ಕೆಗಳ ಮೇಲೆಯೂ, ತುತೂರಿಯ ಧ್ವನಿಯೊಡನೆ ಬರುವಾಗ, ಅವನ ಸಂಗಡ ನೀವೂ ಬರುವಿರಿ. ಅವನು ನ್ಯಾಯಾಸನದ ಮೇಲೆ ಕೂತು ಕೊಳ್ಳುವಾಗ ಅವನ ಹತ್ತಿರ ಕೂತು ಕೊಳ್ಳುವಿರಿ. ದೂತರಾಗಲಿ ಮನುಷ್ಯರಾಗಲಿ ಅನ್ಯಾಯವನ್ನು ನಡಿಸಿದವರೆಲ್ಲರಿಗೆ ಅವನು ನ್ಯಾಯವನ್ನು ತೀರಿಸುವಾಗ ಅವರು ಅವನಿಗೂ ನಿಮಗೂ ಶತ್ರುಗಳಾದದರಿಂದ ಅವರ ಮೇಲೆ ನಿಮಗೂ ಒಂದು ಅಧಿಕಾರವಿರುವದು. ಅವನು ಪಟ್ಣಕ್ಕೆ ತಿರುಗುವಾಗ ನೀವು ಸಹ ತುತೂರಿಯ ಧ್ವನಿಯೊಡನೆ ಹೋಗಿ ಎಂದೆಂದಿಗೂ ಅವನ ಸಮೀಪದಲ್ಲಿರುವಿರಿ, ಎಂದು ಹೇಳಿದರು.

ಈ ಪ್ರಕಾರ ಅವರು ಬಾಗಲಿನ ಹತ್ತಿರ ಬರುವಾಗ, ಪರಲೋಕದ ಸೈನ್ಯದ ಒಂದು ಗುಂಪು ಅವರ ಎದುರಿಗೆ ಬಂತು. ತೇಜಸ್ಸುಳ್ಳ ಆ ಇಬ್ಬರು—ಕೆಳಗಿನ ಲೋಕದಲ್ಲಿದ್ದಾಗ ನಮ್ಮ ಕರ್ತನನ್ನು ಸ್ನೇಹಿಸಿ, ಅವನ ಪರಿಶುದ್ಧ ನಾಮಕ್ಕೋಸ್ಕರ ಎಲ್ಲನ್ನು ಬಿಟ್ಟ ಮನುಷ್ಯರು ಇವರೇ. ಕರ್ತನು ಇವರನ್ನು ಕರಕೊಂಡು ಬರುವದಕ್ಕೆ ನಮ್ಮನ್ನು ಕಳುಹಿಸಿದದರಿಂದ ಇವರು ಪ್ರವೇಶಿಸಿ ತಮ್ಮ ರಕ್ಷಕನ

ಮುಖವನ್ನು ಸಂತೋಷದಿಂದ ನೋಡುವ ಹಾಗೆ ಇಲ್ಲೇವರೆಗೆ ಕರ ಕೊಂಡು ಬಂದಿಗ್ಧೇವೆ, ಅಂದರು. ಆಗ ಆ ಪರಲೋಕ ಸೈನ್ಯದ ವರು ಜಯಧ್ವನಿಯನ್ನು ಮಾಡಿ, ಕುರಿಮರಿಯ ಮದುವೆಯ ಔತ ಣಕ್ಕೆ ಕರೆಯಲ್ಪಟ್ಟವರು ಭಾಗ್ಯವಂತರು, ಎಂದು ಹೇಳಿದರು.

ಮತ್ತು ಆಗ ಅರಸನ ತುತೂರಿಯವರಲ್ಲಿ ಅನೇಕರು ಶುಭ್ರ ವಸ್ತ್ರಗಳನ್ನು ಧರಿಸಿದವರಾಗಿ, ಅವರ ಎದುರಿಗೆ ಹೊರಟು, ದೀರ್ಘ ವಾದ ರಮ್ಯ ಧ್ವನಿಯಿಂದಲೂ, ಆರ್ಭಟದಿಂದಲೂ, ತುತೂರಿಯ ಶಬ್ದದಿಂದಲೂ—ನೀವು ಕೆಳಗಿನ ಲೋಕವನ್ನು ಬಿಟ್ಟು ಇಲ್ಲಿಗೆ ಬಂ ದ್ದದ್ದು ಸಹಸ್ರ ಪಾಲಿಗೆ ಒಳ್ಳೇದಾಯಿತೆಂದು ಹೇಳಿದರು.

ತರುವಾಯ ಅವರಲ್ಲಿ ಕೆಲವರು ಹಿಂದೆ, ಕೆಲವರು ಮುಂದೆ, ಕೆಲವರು ಎಡಗಡೆ, ಕೆಲವರು ಬಲಗಡೆಯಲ್ಲಿಯೂ, ನಡೆದು, ಆಕಾ ಶದ ಪ್ರಯಾಣದಲ್ಲಿ ಅವರಿಗೆ ಕಾವಲಾಗಿ ಸುತ್ತಲು ರಮ್ಯವಾದ ರಾಗಗಳಿಂದ ಧ್ವನಿ ಗೈಯುತ್ತಾ ಹೋದರು. ಅದನ್ನು ನೋಡು ವಾಗ ಪರಲೋಕವೇ ಅವರ ಎದುರಿಗೆ ಬಂದ ಹಾಗೆ ತೋಚಿತು. ಈ ಪ್ರಕಾರ ಆ ಇಬ್ಬರು ಪ್ರಯಾಣಸ್ಥರು ದೂತರನ್ನು ನೋಡುವ ದರಿಂದಲೂ, ರಮ್ಯಧ್ವನಿಯನ್ನು ಕೇಳುವದರಿಂದಲೂ, ಅತಿ ಹರ್ಷ ಪಟ್ಟು, ಪರಲೋಕಕ್ಕೆ ಶೇರುವ ಮುಂಚೆಯೇ ಅದರಲ್ಲಿ ಶೇರಿದವರ ಹಾಗೆ ಭ್ರಮೆಗೊಂಡರು. ಪಟ್ಣವನ್ನು ಸಹ ಸಮೀಪದಲ್ಲಿ ನೋಡಿ, ತಾವು ಬಂದ ಸಂತೋಷದಿಂದ ಅದರೊಳಗೆ ಉಂಟಾಗುವ ಜಯ ಧ್ವನಿಗಳನ್ನು ಕೇಳಿದ ಹಾಗಿದ್ದರು. ಅದಲ್ಲದೆ ತಾವು ಅಂಥವರ ಸಹವಾಸದಲ್ಲಿ ಎಂದೆಂದಿಗೂ ಇರ ಬಹುದೆಂಬ ಆಲೋಚನೆ ಯಿಂದುಂಟಾದ ಸಂತೋಷವನ್ನು ಪೂರ್ಣವಾಗಿ ಹೇಳಲಿಕ್ಕಾಗಲಿ ಬರೆಯಲಿಕ್ಕಾಗಲಿ ಅಸಾಧ್ಯವಾಗಿದೆ.

ಈ ಪ್ರಕಾರ ಅವರು ಬಾಗಲಿಗೆ ಬಂದಾಗ, ಕರ್ತನ ಆಜ್ಞೆಗ ಳನ್ನು ಕೈಕೊಳ್ಳುವವರು ಭಾಗ್ಯವಂತರು, ಏನಂದರೆ ಅವರಿಗೆ ಜೀ ವವೃಕ್ಷದ ಅಧಿಕಾರವಿರುವದು. ಅವರು ಬಾಗಲಿಂದ ಪಟ್ಣದಲ್ಲಿ ಶೇರುವರು, ಎಂದು ಸ್ವರ್ಣಾಕ್ಷರಗಳಿಂದ ಆ ಬಾಗಲಿನ ಮೇಲೆ ಬರದಿರುವದನ್ನು ನೋಡಿದರು.

ತರುವಾಯ ಬಾಗಲನ್ನು ತಟ್ಟಿ ಕೂಗ ಬೇಕೆಂದು ಆ ತೇಜಸ್ಸುಳ್ಳವರು ಹೇಳಿದ ಪ್ರಕಾರ ಪ್ರಯಾಣಸ್ಥರು ಮಾಡಿದರು. ಆಗ ಎನೋಕನೂ, ಮೋಶೆಯೂ, ಎಲೀಯನೂ, ಮೊದಲಾದವರು ಮೇಲಿನಿಂದ ನೋಡಿದ್ದನ್ನು ಕಂಡೆನು. ಈ ಪ್ರಯಾಣಸ್ಥರು ಈ ಪಟ್ಣದ ಅರಸನಿಗೆ ಮಾಡುವ ಪ್ರೀತಿಗೋಸ್ಕರ ನಾಶನಪುರದಿಂದ ಬಂದಿದ್ಧಾರೆಂದು ಆ ತೇಜಸ್ಸುಳ್ಳವರು ತಿಳಿಸಿದ ಮೇಲೆ, ಪ್ರಯಾಣಸ್ಥರು ಆರಂಭದಲ್ಲಿ ತಮಗೆ ಶಿಕ್ಕಿದ ಪಟ್ಟಿಗಳನ್ನು ನೋಡುವದಕ್ಕೆ ಒಳಗಿನವರಿಗೆ ಕೊಟ್ಟರು. ಅವರು ಆ ಪಟ್ಟಿಗಳನ್ನು ಅರಸನ ಬಳಿಗೆ ಕೊಂಡು ಹೋದ ಮೇಲೆ, ಅರಸನು ಅವುಗಳನ್ನು ಓದಿ, ಆ ಮನುಷ್ಯರು ಎಲ್ಲಿದ್ಧಾರೆ? ಅನ್ನಲಾಗಿ ಬಾಗಲಿನ ಹೊರಗೆ ನಿಂತಿದ್ಧಾರೆಂದು ಹೇಳಿದರು. ತರುವಾಯ ಅರಸನು—ಸತ್ಯವನ್ನು ಕೈಕೊಳ್ಳುವ ನೀತಿಯುಳ್ಳ ಜನವು ಪ್ರವೇಶಿಸುವ ಹಾಗೆ ಬಾಗಲನ್ನು ತೆರೆಯ ಬೇಕೆಂದು, ಅಪ್ಪಣೆ ಕೊಟ್ಟನು.

ಆ ಮೇಲೆ ಅವರಿಬ್ಬರು ಒಳಗೆ ಪ್ರವೇಶಿಸಿದಾಗಲೇ ಮಹಿಮೆಯುಳ್ಳ ರೂಪದವರಾದದ್ದನ್ನೂ, ಚಿನ್ನದ ಕಾಂತಿಯುಳ್ಳ ವಸ್ತ್ರಗಳನ್ನು ಹೊಂದಿದ್ದನ್ನೂ, ನಾನು ಸ್ವಪ್ನದಲ್ಲಿ ಕಂಡೆನು. ಮತ್ತು ಕೆಲವರು ಅವರ ಎದುರಿಗೆ ಬಂದು, ಸ್ತೋತ್ರ ಮಾಡುವದಕ್ಕೋಸ್ಕರ ವೀಣೆಗಳನ್ನೂ ಮಾನಕ್ಕೋಸ್ಕರ ಕಿರೀಟಗಳನ್ನೂ ಕೊಟ್ಟರು. ತರುವಾಯ ಪಟ್ಣದಲ್ಲಿರುವ ಘಂಟೆಗಳೆಲ್ಲಾ ಸಂತೋಷದಿಂದ ಧ್ವನಿಗೈಯ್ಯಲು, ನಮ್ಮ ಕರ್ತನ ಸಂತೋಷದಲ್ಲಿ ಪ್ರವೇಶಿಸಿರಿ, ಎಂದು ಅವರಿಗೆ ಹೇಳಿದ ಶಬ್ದವನ್ನು ಕೇಳಿದೆನು. ಮತ್ತು ಪ್ರಯಾಣಸ್ಥರು ಸಹ ಘಟ್ಟಿಯಾದ ಸ್ವರದಿಂದ ಹಾಡಿ, ಸ್ತೋತ್ರ ಘನ ಮಹಿಮೆ ತ್ರಾಣಗಳು ಸಿಂಹಾಸನದ ಮೇಲೆ ಕೂತು ಕೊಂಡವನಿಗೂ ಕುರಿಮರಿಗೂ ಯುಗಯುಗಾಂತರಗಳ ಪರ್ಯಂತರ ಉಂಟಾಗಲಿ, ಎಂದು ಹಾಡಿ, ಹೊಗಳುವದನ್ನು ಕೇಳಿದೆನು.

ಅವರನ್ನು ಒಳಗೊಳ್ಳುವದಕ್ಕೆ ಬಾಗಲು ತೆರದಾಗ, ಅವರ ಹಿಂದಿನಿಂದ ನಾನು ಹಣಿಕಿ ನೋಡಿದೆನು. ಆಗ ಪಟ್ಣವು ಸೂರ್ಯನ

ಹಾಗೆ ಪ್ರಕಾಶಿಸಿತು. ಬೀದಿಗಳಲ್ಲಿ ಭಂಗಾರದ ಹಾಸುಕಲ್ಲುಗಳಿದ್ದವು. ಬೀದಿಗಳಲ್ಲಿ ಅನೇಕರು ತಲೆಗೆ ಕಿರೀಟವಿಟ್ಟು ಕೈಯಲ್ಲಿ ಖರ್ಜೂರದ ಕೊಂಬೆಗಳನ್ನೂ, ಸ್ತೋತ್ರ ಮಾಡುವದಕ್ಕೋಸ್ಕರ ವೀಣೆಗಳನ್ನೂ, ಹಿಡಿದು ಕೊಂಡು ಸಂಚರಿಸುತ್ತಿದ್ದರು.

ರೆಕ್ಕೆಗಳುಳ್ಳವರು ಸಹ ಇದ್ದರು. ಅವರು ಎಡೆಬಿಡದೆ ಕರ್ತನು ಪರಿಶುದ್ಧನು, ಪರಿಶುದ್ಧನು, ಪರಿಶುದ್ಧನು, ಎಂದು ಕ್ರಮಕ್ರಮವಾಗಿ ಹಾಡುತ್ತಿದ್ದರು. ಆ ಮೇಲೆ ಅವರು ಬಾಗಲು ಮುಚ್ಚಿದರು. ಆಗ ಒಳಗೆ ಇರ ಬೇಕೆಂಬ ಅಪೇಕ್ಷೆ ನನ್ನಲ್ಲಿ ಹುಟ್ಟಿತು.

ಇವುಗಳನ್ನೆಲ್ಲಾ ಕಂಡ ತರುವಾಯ ನಾನು ಹಿಂದಿರುಗಿದಾಗ ನದಿಯ ತೀರಕ್ಕೆ ಬಂದ ಮೂಢಪ್ಪನನ್ನು ಕಂಡೆನು. ಆ ಸಮಯದಲ್ಲಿ ಅಲ್ಲಿ ಸುಳ್ಳುಕೋರಿಕೆ ಎಂಬ ಒಬ್ಬ ದೋಣಿಗಾರನು ಅವನನ್ನು ದಾಟಿಸಿದದರಿಂದ ಅವನು ಆ ಬೇರೆ ಇಬ್ಬರಿಗೆ ಉಂಟಾದ ಕಷ್ಟದಲ್ಲಿ ಅರ್ಧವಾದರೂ ಅನುಭವಿಸದೆ ದಾಟಿದನು. ತರುವಾಯ ಮೂಢಪ್ಪನು ಬಾಗಲಿಗೆ ಸೇರುವದಕ್ಕೆ ಪರ್ವತವನ್ನೇರಿ, ಒಬ್ಬನಾದರೂ ಧೈರ್ಯ ಪಡಿಸುವದಕ್ಕೆ ಎದುರಿಗೆ ಬಾರದೆ ಇದ್ದದರಿಂದ ಒಂಟಿಗನಾಗಿ ನಡೆದನು. ಅವನು ಬಾಗಲಿನ ಹತ್ತಿರ ಬಂದು ಆ ಮೇಲುಬರಹವನ್ನು ನೋಡಿ, ತನ್ನನ್ನು ಬೇಗ ಒಳಗೆ ಹೋಗಗೊಡಿಸುವರೆಂದು ನೆನಸಿ, ಬಾಗಲು ತಟ್ಟಿದನು. ಮೇಲಿನಿಂದ ನೋಡುವವರು—ನೀನು ಎಲ್ಲಿಂದ ಬಂದಿ? ಏನು ಬೇಕು? ಎಂದು ಕೇಳಿದಾಗ, ಅವನು—ನಾನು ಅರಸನ ಸನ್ನಿಧಿಯಲ್ಲಿ ಉಂಡು ಕುಡಿದಿದ್ದೇನೆ, ಅವನು ನಮ್ಮ ಬೀದಿಗಳಲ್ಲಿ ಬೋಧಿಸಿದ್ದಾನೆ, ಎಂದು ಉತ್ತರ ಹೇಳಿದನು. ಆಗಲವರು—ಅರಸನಿಗೆ ತೋರಿಸ ತಕ್ಕ ಪಟ್ಟಿ ಉಂಟೋ? ಎಂದು ಕೇಳಿದಾಗ, ಅವನು ತನ್ನ ಉಡಿಲಿನಲ್ಲಿ ಹುಡುಕಿ, ಸಿಕ್ಕದೆ ಹೋದನು. ನಿನಗೆ ಪಟ್ಟಿ ಇಲ್ಲವೋ? ಎಂದು ಕೇಳಿದಾಗ, ಸುಮ್ಮಗಿದ್ದನು. ಒಳಗಿನವರು ಅದನ್ನು ಅರಸನಿಗೆ ತಿಳಿಸಿದಾಗ, ಅವನು ಇವನನ್ನು ನೋಡಲೊಲ್ಲದೆ, ಕ್ರಿಸ್ತಿಯನನ್ನೂ ಕೋರಿಕೆಗೌಡನನ್ನೂ ಕರೆಕೊಂಡು ಬಂದ ತೇಜಸ್ಸುಳ್ಳ ಆ ಇಬ್ಬರನ್ನು ಕರೆದು—ಮೂಢ

ಪ್ಪುನನ್ನು ಹಿಡಿದು, ಕೈಕಾಲು ಕಟ್ಟಿ ಕೊಂಡು ಹೋಗ ಬೇಕೆಂದು ಆಜ್ಞಾಪಿಸಿದನು. ಅವರು ಅವನನ್ನು ಎತ್ತಿ ನಾನು ನೋಡಿದ ಪರ್ವತದ ಪಾರ್ಶ್ವದಲ್ಲಿ ಇರುವ ಬಾಗಲಿಗೆ ಆಕಾಶಮಾರ್ಗವಾಗಿ ತೆಗದು ಕೊಂಡು ಹೋಗಿ ಅದರ ಒಳಗೆ ಹಾಕಿ ಬಿಟ್ಟರು.

ಈ ಪ್ರಕಾರ ನಾಶನಪುರದಿಂದ ಮಾತ್ರವಲ್ಲ, ಪರಲೋಕಪಟ್ಣದ ಬಾಗಲಿಂದಲೂ, ನರಕಕ್ಕೆ ಹೋಗುವ ಮಾರ್ಗ ಉಂಟೆಂದು ತಿಳಿದು ಕೊಂಡೆನು. ಆ ಮೇಲೆ ಎಚ್ಚರತ್ತು ನಾನು ಕಂಡದ್ದೆಲ್ಲಾ ಕನಸೆಂದು ಗ್ರಹಿಸಿದೆನು.

ದಾಟಲಾರದ ಕೊಳಚೆ ಸಿಂಹದ
ಕಾಟ ನರಕದ ಭೀತಿ ಭೂತಗ
ಳಾಟರಾಕ್ಷಸನುರುಲು ಮೊದಲಾದ ಖಿಳ ಕಷ್ಟಗಳು ||
ನೋಟ ಕಚ್ಚರಿಯಾದ ಬೈಲಿನ
ತೋಟ ನದಿಗಳ ಸೌಖ್ಯ ದೇವರ
ಕೂಟವುಳ್ಳುಪಯಣ ಹರ್ಷವ ನೀವುದೆಲ್ಲರಿಗೆ || ೧ ||
ಕನಸಿನಂತೀ ರಮ್ಯ ಕಥೆಯನು
ನೆನಸಿಪೇಳಿದೆನೀಗ ನಿರ್ಮಲ
ಮನದ ಭಕ್ತಿಯ ಫಲವ ಪಾಪದ ಕಠಿಣಯಾತನೆಯ ||
ಜನರು ಹಂಣನು ತಿಂದು ಶಿಪ್ಪೆಯ
ಗಣಿಸದಿದುವಂತಿದರ ತತ್ವವ
ನನುಕರಿಸಿಮತ್ತುಳಿದುದೆಲ್ಲವ ಬಿಡುವರುತ್ತಮರು || ೨ ||

---

ಸಂಪೂರ್ಣ.

# INDEX OF NAMES.

| | |
|---|---|
| City of Destruction | ನಾಶನಪುರ. |
| Obstinate | ಘಡ್ಡನು. |
| Pliable | ಚಂಚಲನು. |
| Evangelist | ಸುವಾರ್ತಿಕನು. |
| Slough of Despond | ಅಧೈರ್ಯದ ಹುದಿಲು. |
| Help | ಸಹಾಯಕನು. |
| Morality | ನೇಮಪುರ. |
| Legality | ನೇಮಮಹಾಚಾರ್ಯ. |
| Civility | ಮರಿಯಾದಾಚಾರ್ಯ. |
| Worldly Wiseman | ಲೋಕಮತಾಚಾರ್ಯ. |
| Wicket Gate | ಇಕ್ಕಟ್ಟಿನ ಬಾಗಲು. |
| Good Will | ಸುಚಿತ್ತನು. |
| Interpreter | ವ್ಯಾಖ್ಯಾನಿ. |
| Discretion | ವಿವೇಕ. |
| Passion | ಆಶೆ. |
| Patience | ತಾಳ್ಮೆ. |
| Despair | ನಿರಾಶೆ. |
| Simple | ಹೆಡ್ಡ. |
| Sloth | ಮೈಗಳ್ಳ. |
| Presumption | ಗರ್ವಿ. |
| Formalist | ಕರ್ಮಕನು. |
| Hypocrisy | ಕಪಟಸ್ತನು. |

Timorous . . . . . ಹೇಡಿಯಪ್ಪ.
Mistrust . . . . . ಅಧೈರ್ಯಸ್ಥನು.
House Beautiful . . ಸುಂದರಾಲಯ.
Watchful . . . . . ಎಚ್ಚರಪ್ಪನು.
Graceless . . . . . ನಿರ್ದಯವಂತನು.
Discretion . . . . . ವಿವೇಕಳು.
Piety . . . . . . ಭಕ್ತಿ.
Prudence . . . . . ಬುದ್ಧಿ.
Charity . . . . . . ಪ್ರೀತಿ.
Chamber of Peace . . ಶಾಂತಿವಿಲಾಸ.
Valley of Humiliation. ದೀನನಾಡಿನ ತಗ್ಗು.
Apollyon . . . . . ಸಂಹಾರಕನು.
Faithful . . . . . . ವಿಶ್ವಾಸೈಯ್ಯ.
Valley of Shadow of Death ಮರಣದ ನೆರಳಿನ ತಗ್ಗು.
Pope . . . . . . ಪಾಪು.
Pagan . . . . . . ಅಜ್ಞಾನಿ.
Delectable Mountains . ರಮ್ಯಗಿರಿಗಳು.
Madam Wanton . . . ಕಾಮಿ.
Hill Difficulty . . . ಕಷ್ಟದ ಗುಡ್ಡ.
Adam the First . . ಮೊದಲನೇ ಆದಮನು.
Town of Deceit . . ವಂಚಕಪುರ.
Lust of the Flesh . . ಮಾಂಸಾಶೆ.
Lust of the eyes . . ನೇತ್ರೇಚ್ಛೆ.
Pride of Life . . . ಜೀವದಂಭೆ.
Discontent . . . . ಅಸಂತುಷ್ಟನು.
Pride . . . . . . ಗರ್ವೈಯ.
Arrogancy . . . . . ಅಹಂಕಾರೈಯ್ಯ.

This Edition of the Pilgrim's Progress has been printed for the Christian Vernacular Education Society at the expense of A. Hathaway Esq. C. S. of Bellary; on paper furnished by the London Religious Tract Society.

# THE PILGRIM'S PROGRESS.

# ದೇಶಾಂತ್ರಿಯ ಪ್ರಯಾಣ.

## 1. The Setting out.

## ೧. ಹೊರಡೋಣವು.

ನಾನು ಲೋಕವೆಂಬ ಅಡವಿಯಲ್ಲಿ ತಿರುಗಾಡುತ್ತಿರುವಾಗ, ಗವಿಯಿದ್ದ ಒಂದು ಸ್ಥಳಕ್ಕೆ ಬಂದು, ಮಲಗಿ, ನಿದ್ದೆ ಮಾಡಿ, ಒಂದು ಕನಸು ಕಂಡೆನು. ಆ ಕನಸಿನಲ್ಲಿ ಇಗೋ ಹರಕು ಬಟ್ಟೆಗಳನ್ನು ಹೊದ್ದ ಕೊಂಡ ಒಬ್ಬ ಮನುಷ್ಯನು ಕೈಯಲ್ಲಿ ಪುಸ್ತಕ ಹಿಡಿದು, ದೊಡ್ಡ ಹೊರೆ ಹೊತ್ತು ಕೊಂಡು, ತನ್ನ ಮನೆಗೆ ಬೆನ್ನು ಹಾಕಿ, ಒಂದು ಸ್ಥಳದಲ್ಲಿ ನಿಂತಿರುವದನ್ನು ನೋಡಿದೆನು. ನಾನು ದೃಷ್ಟಿಸಲಾಗಿ ಅವನು ಪುಸ್ತಕ ತೆರೆದು ಓದುವದನ್ನೂ, ಓದುವಾಗ ಅತ್ತು, ನಡುಗಿ, ಇನ್ನು ತಾಳಲಾರೆ, ಏನು ಮಾಡಲಿ? ಎಂದು ಕೂಗಿ ಗೋಳಾಡುವದನ್ನೂ, ಕಂಡೆನು.

ಈ ಪ್ರಕಾರ ವ್ಯಸನ ಪಡುವವನಾಗಿ ಅವಸ್ಥೆಯಿಂದ ಮನೆಗೆ ಬಂದು, ತನ್ನ ದುಃಖವು ಹೆಂಡತಿ ಮಕ್ಕಳಿಗೆ ತಿಳಿಯ ಬಾರದೆಂದು ಕೈಲಾದ ಮಟ್ಟಿಗೂ ಸುಮ್ಮನೆ ಇದ್ದನು. ಆದರೆ ಅವಸ್ಥೆ ಹೆಚ್ಚಿದ್ದರಿಂದ ತಾಳಲಾರದೆ ಹೆಂಡತಿಗೂ ಮಕ್ಕಳಿಗೂ ತನ್ನ ವ್ಯಾಕುಲ ತಿಳಿ



